# ಬಿಡುಗಡೆಯ ಬೇಡಿ

ಕಾದಂಬರಿ



ಲೇಖಕರು:

ತ. ರಾ. ಸು.



ಮುದ್ರಣ ಮತ್ತು ಪ್ರಕ

ಶಾರದಾ ಪ್ರಕಟನಾಲಯ

ಅರಳೇಪೇಟೆ :: ಬೆಂಗ

ರಕ್ಷಾಪತ್ರದ ರಚನೆ:
ಎಸ್. ಎಲ್. ನಾರಾಯಣ್

ರಕ್ಷಾಪತ್ರದ ಮುದ್ರಣ:
ಈಸ್ಟರ್ನ್ ಪ್ರೆಸ್, ಬೆಂಗಳೂರು

ಪ್ರಥಮ ಮುದ್ರಣ: ಫೆಬ್ರವರಿ ೧೯೫೩
ದ್ವಿತೀಯ ಮುದ್ರಣ: ಏಪ್ರಿಲ್ ೧೯೫೬



ಬೆಲೆ
ಒಂದೆ[illegible]ಪಾಯಿ





ಚಂದಾ ವಿವರ
ಆರು ತಿಂಗಳಿಗೆ: ಐದೂವರೆ ರೂಪಾಯಿ
ಂದು ವರ್ಷಕ್ಕೆ: ಹನ್ನೊಂದು ರೂಪಾಯಿ




# ಮುನ್ನುಡಿ

"ಬಿಡುಗಡೆಯ ಬೇಡಿ" ತನ್ನ ಹೆಸರೇ ಸೂಚಿಸುವಂತೆ ಸಮಸ್ಯಾತ್ಮಕ ಕಾದಂಬರಿ. ಸ್ತ್ರೀ ಸ್ವಾತಂತ್ರ್ಯದ ಸಮಸ್ಯೆ ಈ ಕಾದಂಬರಿಯ ಕೇಂದ್ರ ವಸ್ತು. ವಿರೋಧಾಭಾಸಗಳಿಂದ, ವಿಚಾರ-ಆಚಾರಗಳ ನಡುವಿನ ವಿಷಮತೆಯಿಂದ ಕೂಡಿದ ಸಮಾಜದಲ್ಲಿ, ಮುಟ್ಟಿದುದೆಲ್ಲವೂ ಸಮಸ್ಯೆಯೇ ಆಗುವಂತೆ, ಎಲ್ಲವೂ ಅಡ್ಡಹಾದಿ ಹಿಡಿಯುವಂತೆ, ಸ್ವಾತಂತ್ರ್ಯವೂ ತನ್ನ ಸಹಜ ಸ್ವರೂಪವನ್ನು ಕಳೆದುಕೊಂಡು ವಿಕಾರವಾಗುತ್ತದೆ. ನಮ್ಮ ದೇಶದಲ್ಲಿಂದು ಇದೇ ಪರಿಸ್ಥಿತಿಯಿದೆ. ಇದರೊಂದಿಗೆ ಅನುಕರಣವೇ ಆಧುನಿಕತೆ ಎಂಬ ವಿಚಿತ್ರ ಜಾಡ್ಯವೂ ಬೆರತು, ನಮ್ಮ ಪರಿಸ್ಥಿತಿ ಇಂದು ಇದ್ದದ್ದೂ ಸಮಸ್ಯಾತ್ಮಕವಾಗಿದೆ. ಆಧುನಿಕ, ರಾಜಕೀಯ, ಸಾಮಾಜಿಕ, ಆರ್ಥಿಕ, ನೈತಿಕ ಆಂದೋಲನಕ್ಕೆ ಸಿಲುಕಿದ ಇಂದಿನ ದಾಂಪತ್ಯ ಜೀವನದಲ್ಲಿ, ಸ್ತ್ರೀ ಪುರುಷರ ಸಂಬಂಧ ಸಮಸ್ಯೆಯಲ್ಲಿ, ನಾನು ಮೇಲೆ ಹೇಳಿದ ಪರಿಸ್ಥಿತಿ ಯಾವ ಬಗೆಯ ಪರಿಣಾಮವನ್ನು ಮೂಡಿಸುತ್ತದೆ ಎಂಬುದನ್ನು ಕಾದಂಬರಿಯಲ್ಲಿ ತೋರಿಸಲು ಎಳಸಿದೇನೆ.

ಕಾದಂಬರಿಯ ರಚನೆಯಲ್ಲಿ, ನಿರೂಪಣಾ ವಿಧಾನದಲ್ಲಿ 'ಸ್ಟ್ರೀಮ್ ಆಫ್ ಕಾನ್ಷಸ್‌ನೆಸ್' (ಸುಪ್ತ ಮನೋಲಹರಿ) ವಿಧಾನವನ್ನು ಅಳವಡಿಸಿ ಕೊಂಡಿದೇನೆ. ಕಾದಂಬರಿಯ ಉದ್ದಕ್ಕೂ ಇದು ಕಾಣದಿದ್ದರೂ, ಕಾದಂಬರಿ ಯಲ್ಲಿ ಅಲ್ಲಲ್ಲಿ, ಮುಕ್ತಾಯದ ಘಟ್ಟದಲ್ಲಿ ಎದ್ದು ಕಾಣುತ್ತದೆ. ಈ ವಿಧಾನವನ್ನು ಅಳವಡಿಸಿಕೊಳ್ಳಲು, ಹೊಸ ವಿಧಾನವೊಂದನ್ನು ಅಳವಡಿಸಿಕೊಳ್ಳಬೇಕೆಂಬ ಚಪಲಕ್ಕಿಂತ, ಅದರಿಂದ ಕಾದಂಬರಿಯ ನಿರೂಪಣೆಗೆ ಬಿಗಿ ಬರುತ್ತದೆ, ಅರ್ಥ ಪುಷ್ಟಿಯೊದಗುತ್ತದೆ, ಪರಿಣಾಮರಮಣೀಯಕತೆಗೆ ಮೆರುಗು ಬರುತ್ತದೆ, ಎಂಬುದೇ ಕಾರಣ. ಕಾದಂಬರಿಯನ್ನು ಓದುವ ವಾಚಕರು, ಕಾದಂಬರಿಯನ್ನು ದಯವಿಟ್ಟು ನಿಧಾನವಾಗಿ, ಅಲ್ಲಲ್ಲಿ ನಿಂತು ಮೆಲಕು ಹಾಕುತ್ತಾ ಓದಿದಲ್ಲಿ ಕಥೆ ಮತ್ತಷ್ಟು ರಂಜಿಸುತ್ತದೆ. ಆದುದರಿಂದ, ಕಥಾ ಕೌತುಕಕ್ಕೇ ಮನಗೊಟ್ಟು ವೇಗವಾಗಿ ಪುಟಗಳನ್ನು ತಿರುವಿ ಹಾಕಬಾರದೆಂದು ವಾಚಕರಲ್ಲಿ ನನ್ನ ವಿನಂತಿ.

ಎಂದೋ ಒಂದು ದಿನ ಈ ಕಾದಂಬರಿಯ ಕಥೆ ನನ್ನ ಮನಸ್ಸಿನಲ್ಲಿ ಮಸಕುಮಸಕಾಗಿ ಮೂಡಿದ್ದಾಗಲೇ ಅದನ್ನು ಕೇಳಿ ಆನಂದಿಸಿ, ಒತ್ತಾಯ ಮಾಡಿ ಅದನ್ನು ಬರೆಸಿ, ಬರೆದುದು ಅಚ್ಚಿನ ಮನೆಗೆ ಹೋಗುವವರೆಗೂ ಬಿಡದೆ ಬೆಂಬಲವಾಗಿ, ಪ್ರೋತ್ಸಾಹಿಸಿದ ಗೆಳೆಯರು ಚದುರಂಗ, ಗೋಪಾಲಕೃಷ್ಣ ಅಡಿಗ, ಹಾ. ಮಾ. ನಾಯಕರಿಗೆ ನನ್ನ ವಂದನೆಗಳು. ಕಾದಂಬರಿ ಬರೆದಾದ ಮೇಲೆ ಓದಿ ಮೆಚ್ಚಿದ ಗೆಳೆಯ ಬಿಳಿಗಿರಿಯವರಿಗೂ, ಬರೆವ ಕಾಲದಲ್ಲಿ ಹಲ ಬಗೆಯಲ್ಲಿ ನೆರವಾಗಿ ನಿಂತ ಗೆಳೆಯರು ಸಿ. ರಾಜಾರಾವ್ ಮತ್ತು ಸಿ. ಮೂರ್ತಿ ರಾಯರಿಗೂ ನಾನು ಋಣಿ.

ಮೈಸೂರು. ತ. ರಾ. ಸು.

## ಅರ್ಪಣೆ

ಹೊಚ್ಚ ಹೊಸದಾಗಿ ಸಂಸಾರ ರಥಕ್ಕೆ ಹೆಗಲು ಕೊಟ್ಟ
ನನ್ನ ತಂಗಿ 'ಸುಲೂ'—ಸುಬ್ರಹ್ಮಣ್ಯಶಾಸ್ತ್ರಿಗಳಿಗೆ
ಅವರ ದಾಂಪತ್ಯ ಜೀವನದ ಆನಂದ
ಚಿರ ರಮಣೀಯವಾಗಲಿ
ನಿತ್ಯ ನೂತನವಾಗಲಿ
ಶಾಶ್ವತವಾಗಲಿ
ಎಂಬ ಪ್ರೀತಿಪೂರ್ವಕವಾದ ಹಾರೈಕೆಯಿಂದ.



ಸಂಜೆಯ ಬಿಸಲಿನ ಕಿತ್ತಲೆ ಬಣ್ಣದ ಬೆಳಕು, ವಿಶಾಲವಾದ ಗಾಜಿನ ಕಿಟಕಿಯಿಂದ ಹಾಯ್ದು ಅವಳ ಬಳಲಿದ ಮುಖದ ಮೇಲೆ ಬಿದ್ದು, ಗೋಧಿಯ ಬಣ್ಣದ ಮುಖದಲ್ಲಿ ಮೂಡಿದ ಬೇಸರದ ಗೆರೆಗಳನ್ನು ಮತ್ತಷ್ಟು ಆಳವಾಗಿ ಕೊರೆದಿತ್ತು. ಬಳಲಿದ ಕಣ್ಣು, ಗಳಿಗೆಗೊಮ್ಮೆ ಗೋಡೆಯ ಮೇಲೆ ತೂಗಿದ ಗಡಿಯಾರದ, ನಿಧಾನವಾಗಿ ಚಲಿಸುವ ಮುಳ್ಳನ್ನು ನೋಡಿ, ಮತ್ತೆ ಎದುರಿಗಿದ್ದ ಕಾಗದವನ್ನೂ, ಟೈಪ್‌ರೈಟರಿನ ಅಕ್ಷರದ ಮೊಳೆಗಳನ್ನೂ ನೋಡುತ್ತಿತ್ತು. ತಲೆಯ ಮೇಲೆ ಸುತ್ತುವ ಎಲೆಕ್ಟ್ರಿಕ್ ಫ್ಯಾನಿನ ಗಾಳಿಗೆ ಸಣ್ಣಗೆ ಕೆದರಿ ಮುಖದ ಮೇಲೆ ಹರಿಯುವ ಕೂದಲನ್ನು ಅಸಹನೆಯಿಂದ ಓಸರಿಸಿ, ಮತ್ತೆ ಕೈಯ ನೀಳವಾದ ಬೆರಳುಗಳು ತಮ್ಮ ಕೆಲಸ ನಡೆಸುತ್ತಿದ್ದವು. ಬಾಗಿ ಬಾಗಿ ನೊಂದ ಬೆನ್ನು, ಒಂದು ಕ್ಷಣ, ಕುರ್ಚಿಯ ಬೆನ್ನಿಗೆ ಆತು, ಬಳಲಿಕೆಯನ್ನು ಮುರಿದು, ಮತ್ತೆ ಟೈಪ್‌ರೈಟರ್ ಯಂತ್ರದತ್ತ ಬಾಗುತ್ತಿತ್ತು.

ಟೈಪ್‌ರೈಟರ್–ಅದೊಂದು ಯಂತ್ರ. ಬರಹದ ಕಷ್ಟವನ್ನು ಹಗುರವಾಗಿಸಿಕೊಳ್ಳಲು ಮಾನವನ ಮಿದುಳು ಕಂಡುಹಿಡಿದ ಯಂತ್ರ.

ತಾನೂ ಅಷ್ಟೆ–ಸ್ಟೆನೋ–ಟೈಪಿಸ್ಟ್! ಮತ್ತೊಂದು ಯಂತ್ರ. ಮತ್ತೊಬ್ಬ ಮಾನವ, ತನಗೆ ಬರೆಯಲಾಗದುದನ್ನು, ಬರೆದುಕೊಂಡು, ಟೈಪ್ ಮಾಡಲು ಸಂಬಳಕ್ಕಿಟ್ಟುಕೊಂಡ ಯಂತ್ರ.

ಮಾನವಳಾಗಿಯೂ ತನಗೆ ಅದಕ್ಕಿಂತ ಹೆಚ್ಚಿನ ಬೆಲೆ ಇಲ್ಲ, ಈ ಕರ್ಮಾಗಾರದಲ್ಲಿ. ಹೆಚ್ಚಿನ ಬೆಲೆ ಪಡೆಯಲು ಅವಳಿಗೆ ಮನಸ್ಸೂ ಇಲ್ಲ.

ಎಷ್ಟೋ ಬಾರಿ ಅವಳಿಗೆ ಅನಿಸುತ್ತದೆ–ತನ್ನಂತೆಯೇ ಟೈಪ್‌ರೈಟರ್

ಯಂತ್ರಕ್ಕೂ ಮಿದುಳಿದ್ದರೆ, ಅದೂ ಹೀಗೇ ಯೋಚಿಸುತ್ತಿರಬಹುದೇನೋ ಎಂದು.

ದಿನಕ್ಕೆ ಎಂಟು ಗಂಟೆ ದುಡಿತ; ಬಳಿಕ ಮುಕ್ತಿ—ಯಂತ್ರಮಾನವ, ಮಾನವಯಂತ್ರ, ಇಬ್ಬರಿಗೂ.

ದಿನದ ದುಡಿತದ ಕೊನೆಗಳಿಗೆಯನ್ನು ಕಾದು, ಗಡಿಯಾರವನ್ನು ದಿಟ್ಟಿಸುತ್ತಿದೆ ಅವಳ ಕಣ್ಣು. ಇನ್ನೂ ಎರಡು ಕಾಗದ, ಟೈಪ್ ಮಾಡಬೇಕಾದವು ಇದೆ. ಎಷ್ಟು ಮಾಡಿದರೂ, ಮರುದಿನಕ್ಕೆ ಬಾಕಿ ಉಳಿಯುತ್ತದೆ-ಹಾಳು ಕೆಲಸ. ಒಂದು ದಿನವೂ, ಅಂದಿನ ಕೆಲಸ ಅಂದಿಗೆ ಮುಗಿಯಿತು ಎಂಬ ನಿಶ್ಚಿಂತೆಯಿಲ್ಲ.

ಎಷ್ಟು ದಿನ ಈ ದುಡಿತ, ಕೊನೆಗಾಣದ ದುಡಿತ, ಮಿದುಳಿನ ಮಿಡಿತ.

ಅಗಾಧವಾಗಿರುವ ಕತ್ತಲ ಗಣಿಯನ್ನು ಅಗೆಯುವಾಗ, ಅಗೆದಷ್ಟೂ ಕತ್ತಲ ಮೊತ್ತವೇ ಹೊರಬಂದು, ಅದುವರೆಗೆ ಅಗೆದ ಕತ್ತಲ ಆಳ ಭಯಾನಕವಾಗಿ ಬಾಯ್ತೆರೆದಂತಾಯಿತು, ಅವಳಿಗೆ.

ಬಿಡುಗಡೆಯೇ ಇಲ್ಲವೆ ಈ ಬೇಸರಕ್ಕೆ ?

ಆ ಭಾವನೆ ಮನಸಿನಾಳದಲ್ಲಿ ಸುಳಿದ ಕೂಡಲೇ ಏಕೋ ಅವಳ ಮೈ ನಡುಗಿ, ಟೈಪ್‌ರೈಟರಿನ ಮೊಳೆಗಳನ್ನು ಒತ್ತುವ, ಅವಳ ಬೆರಳಿನ ವೇಗ ಹೆಚ್ಚಾಯಿತು.

ಬಿಡುಗಡೆ-ಬೇಸರ; ಯಾವುದು ಬೇಕು-ಯಾವುದು ಬೇಡ? ಬೇಕಾದುದು ಬೇಡವೇ? ಬೇಡವಾದುದು ಬೇಕೇ ?

ಹೆಬ್ಬಾವು-ಹುಲಿಗಳ ನಡುವೆ ನಿಂತ, ದಿಕ್ಕುಗಾಣದ ಪಾಂಥನ ಭ್ರಮಿತ ಚಿತ್ತ ಅತಿಸಾಹಸದ ಧೈರ್ಯಮಾಡಿ, ಒಂದು ಕಡೆ ಒಲೆಯುವಂತೆ-ಇದೇ ಬೇಸರವೇ ಇರಲಿ ಎಂದಿತು.

ಆದರೆ ಬೇಸರ-ಕೊನೆಗಾಣದ ಬೇಸರ-ದಿನದಿನಕ್ಕೆ ಭಾರವಾಗುವ ಎದೆಯ ಬೇಸರ, ಪಂಜರದಿಂದ ಮುಕ್ತಿಯೇ ಇಲ್ಲವೆಂದರಿತ ಹಕ್ಕಿಯ ಹೃದಯದ ಬೇಸರ, ಜೇಡನಂತೆ ಅವಳ ಬಾಳ ಸುತ್ತ ತನ್ನ ಸೂಕ್ಷ್ಮವಾದ ಬಲೆಯನ್ನು, ದಿನದಿನಕ್ಕೆ ಬಿಗಿಯಾಗಿ ನೇಯುತ್ತಿತ್ತು.

ಬಲೆ-ಅವಳ ಸುತ್ತಲ ಬಲೆ!

ಅವಳ ಸುತ್ತಲೂ ಹತ್ತಾರು ಮೇಜುಗಳ ಮುಂದೆ, ಅವಳಂತೆಯೇ

ದುಡಿಯುತ್ತಿರುವವರ, ದಿನದ ಅನ್ನಕ್ಕೆ ಮೈ - ಮಿದುಳುಗಳನ್ನು ಮಾರಿ ಯಂತ್ರ ವಾದ ಮಾನವರ ಮುಂದೆ ಇದೆ.

ಅವಳು ಯಾರತ್ತಲೂ ನೋಡುತ್ತಿಲ್ಲ. ಆದರೂ ಅವಳಿಗೆ ಅವರು ಒಬ್ಬೊಬ್ಬರೂ ಈಗ ಏನು ಮಾಡುತ್ತಿರುವರೆಂಬ ಅರಿವು ಇದೆ.

ಯಾರನ್ನೂ ನೋಡದೆ ಬರಿಯ ಗಡಿಯಾರವನ್ನೇ ನೋಡಿ, ಅವರು ಒಬ್ಬೊಬ್ಬರ ಮನಸಿನಲ್ಲೂ ಏನಾಗುತ್ತಿದೆ ಎಂಬುದನ್ನು ಅವಳು ಹೇಳಬಲ್ಲಳು. ಅವಳ ಹಾಗೇ ಉಳಿದವರಿಗೂ, ಅನುಭವದಿಂದ, ಬಳಕೆಯಿಂದ ಆ ಶಕ್ತಿ ಬಂದಿರ ಬಹುದು. ಯಾವ ಮಾತೂ ಆಡದೆ, 'ಟಿಕ್-ಟಾಕ್-ಟಿಕ್' ಎಂದಷ್ಟೇ ನುಡಿಯುತ್ತಾ, ಗತಿ ತಪ್ಪದೆ, ಕೈಗಳನ್ನು ಚಲಿಸುತ್ತಾ ನಡೆಯುವ ಆ ಯಂತ್ರ ಅವರೆಲ್ಲರ ಚಿತ್ತ ಚಲಿಸುವ ಗತಿಗೆ ಹಿಡಿದ ಮುಕುರದಂತಾಗಿದೆ.

ಬರೀ ಕನ್ನಡಿಯೇ? ಊಹೂ. ಗಡಿಯಾರದ ಕೈಗಳೇ ಅವರ ಬಾಳನ್ನು ನಡೆಸುವ ಕಾಣದ ಕೈಗಳೇನೋ ಎನಿಸುತ್ತದೆ ಅವಳಿಗೆ, ಒಮ್ಮೊಮ್ಮೆ ಗಡಿಯಾರ ವನ್ನೇ ದಿಟ್ಟಿಸುತ್ತಾ ಕುಳಿತಾಗ. ಅಷ್ಟುಮಟ್ಟಿಗೆ ಅವರ ಬಾಳು ಅದರ ಗತಿ ಯನ್ನು ಹೊಂದಿಕೊಂಡಿದೆ.

ಗಡಿಯಾರದ ಕೈಗಳ ಬಲೆಯಲ್ಲಿ ಮಾನವ ಯಂತ್ರದ ಮುಂದೆ.

ಗಡಿಯಾರದ ಕೈ ಬೆರಳೀಗ ಸಂಜೆ ಐದರ ಹೊತ್ತಿನ ಹತ್ತಿರವಾಗುತ್ತಿದೆ. ಸುತ್ತಮುತ್ತ, ಹೊರಬೀಳುವ ಗಳಿಗೆಗಾಗಿ ಮೇಜಿನ ಮೇಲಿನ ಕಾಗದ ಪತ್ರ ಗಳನ್ನು ಸರಿಯಾಗಿಡುವುದರ ಸದ್ದು ಅಸ್ಪಷ್ಟವಾಗಿ ಅವಳ ಕಿವಿಗೆ ಕೇಳುತ್ತಿದೆ. ಎಲ್ಲೋ ಒಂದು ಕುರ್ಚಿ ಸರಿಯುತ್ತದೆ; ನೆಲದ ಮೇಲೆ ಕಾಲೆಳೆಯುವ ಸದ್ದಾ ಗುತ್ತದೆ: ಯಾರೋ ಬರೆದು ಸೋತ ಕೈ ಬೆರಳಿನ ಲಟಿಕೆ ಮುರಿಯುತ್ತಿದ್ದಾರೆ; ಭಾರವಾದ ನಿಟ್ಟುಸಿರಿನ ಸದ್ದೂ ಕೇಳಿ ಬರುತ್ತಿದೆ; ಬಹು ತಗ್ಗಾದ ದನಿಯಲ್ಲಿ ಯಾರೋ ಮತ್ತೊಬ್ಬರೊಂದಿಗೆ ಮಾತಾಡುತ್ತಿದ್ದಾರೆ; ಈ ಹಲ ಬಗೆಯ ಸದ್ದು ಗಳಿಗೆ ಶ್ರುತಿ ಹಿಡಿದಂತೆ ಟೈಪ್‌ರೈಟರಿನ 'ಟಕ ಟಕ ಟಕ ಟ್ರಿಂಗ್' ನಾದ, ಗಡಿಯಾರದ 'ಕಟ್-ಕಟ್-ಕಟ್', ಫ್ಯಾನಿನ 'ಗರ್' ಎಂಬ ಸುತ್ತುವ ಸದ್ದು.

ಸದ್ದಿನ ಬಲೆ, ಬಲೆಯಲ್ಲಿ ಅಬಲೆ!

ಮುಂದಿದ್ದ ಕಾಗದವನ್ನು ನೋಡಿ ನೋಡಿ ಬೇಸರವಾದ ಕಣ್ಣೆವೆ ಅಪ್ರಯತ್ನವಾಗಿ ಮುಚ್ಚುತ್ತಿತ್ತು. ಹತ್ತಿರದಲ್ಲಿದ್ದ, ಗಾಜಿನ ಲೋಟದಲ್ಲಿದ್ದ

ನೀರಿನಲ್ಲಿ ಕೈ ಬೆರಳದ್ದಿ, ಕಣ್ಣಿನ ಮೇಲೆ ಸವರಿಕೊಂಡಳು. ಕಣ್ಣು ಕೊಂಚ ತಣ್ಣಗಾಯಿತು. ಹತ್ತಿರದಲ್ಲಿ ಕೂತವನು ಮಿದುವಾಗಿ ನಕ್ಕ ಸದ್ದು ಕೇಳಿತು. ವೇಗವಾಗಿ ಕೈ ಬೆರಳು ಮತ್ತೆ ಟೈಪರೈಟರಿನ ಅಕ್ಷರಮಾಲೆಯ ಮೇಲೆ ನರ್ತಿಸ ಲಾರಂಭಿಸಿತು.

"ಬಾಯೀ...."

ಆಳುಮಗ ಗಣೇಶ ಕೂಗಿದ.

ತನಗಲ್ಲವೇನೋ ಎಂದುಕೊಂಡು ಮತ್ತೊಂದು ಗಳಿಗೆ ಕೆಲಸ ಮುಂದು ವರಿಸಿದಳು.

"ಬಾಯೀೀ"

ತನ್ನನ್ನೇ ಕರೆಯುತ್ತಿರುವುದು ಅವನು. ಅಲ್ಲಿ ಮತ್ತಾವ 'ಬಾಯಿ'ಯೂ ಇಲ್ಲ.

"ಏನು ಗಣೇಶ್?"

"ಫೋನಿನಲ್ಲಿ ಯಾರೋ ಕರೆಯುತ್ತಾರೆ."

"ಯಾರಂತೆ?"

"ಹೆಸರು ಹೇಳಲಿಲ್ಲ. ನಿಮ್ಮನ್ನು ಕರೆಯುವಂತೆ ಹೇಳಿದರು."

"ಬಂದೆ ಎಂದು ಹೇಳು."

ಆಳು ಹೊರಟು ಹೋದ. ಅರೆಯಾಗಿದ್ದ ಸಾಲನ್ನು ಮುಗಿಸಿ, ಗಡಿಯಾರ ದತ್ತ ಕಣ್ಣು ಹಾಯಿಸಿ, ಫೋನಿದ್ದ ಮೇಜಿನ ಬಳಿ ಹೋಗಿ, ರಿಸೀವರನ್ನು ಹಿಡಿದು—

"ಹಲೋ" ಎಂದಳು.

"ಯಾರು, ಪ್ರಭಾವತಿಯೇ?" ಟೆಲಿಫೋನಿನಲ್ಲಿ ಮತ್ತೊಂದು ಹೆಣ್ಣು ಸ್ವರ ಅವಳನ್ನು ಕೇಳಿತು.

"ಹೌದು. ಶಾಲಿನಿಯೇನು?"

"ಹೂ. ನಿನ್ನ ಕೆಲಸ ಮುಗಿಯಿತೇನು?"

"ಅದು ಮುಗಿಯುವುದು ಒಂದೇ ದಿನ."—ಬೇಸರದ ನೀಳ್ದನಿಯಲ್ಲಿ ಹೇಳಿದಳು ಪ್ರಭಾವತಿ.

"ಅದು ಇರಲಿ. ಇವತ್ತಿನ ಕೆಲಸವಾಯಿತೋ, ಅಥವಾ ನಿನ್ನೆಯ ಹಾಗೆ ಇವತ್ತೂ ತಡವೋ."

"ಇಲ್ಲ. ಹೊತ್ತಿಗೆ ಸರಿಯಾಗಿ ಮುಗಿಸಿ ಬಿಡುತ್ತೇನೆ."

"ಹಾಗಾದರೆ ಎಲ್ಲಿ ಕಲೆಯುವುದು ?"

"ಗ್ರಾಂಟ್‌ರೋಡ್ ಸ್ಟೇಷನ್ನಿಗೆ ಬರುತ್ತೇನೆ. ನಿನಗದು ಹತ್ತಿರ."

"ಹೂ. ಹಾಗೇ ಮಾಡು. ಫ್ಲೋರಾಗೂ ಅಲ್ಲಿಗೇ ಬರುವಂತೆ ಹೇಳುತ್ತೇನೆ"

"ಫೋನ್ ಮಾಡಿದ್ದಳೇನು ?"

"ಹೂ. ನಿನ್ನೊಂದಿಗೆ ಮಾತನಾಡಿ ತಿಳಿಸುತ್ತೇನೆಂದಿದ್ದೆ."

"ಸರಿ ಹಾಗಾದರೆ. ಬರಲೆ ?"

"ಚೀರ್ ಯು"

"ಚೀರ್ ಯು"

ಆ ರಿಸೀವರನ್ನು ಅದರ ತೊಟ್ಟಲಿನಲ್ಲಿಟ್ಟು ಪ್ರಭಾವತಿ ಮತ್ತೆ ತನ್ನ ಮೇಜಿಗೆ ಮರಳಿ, ಅವಸರವಸರವಾಗಿ ಕೆಲಸ ಮುಗಿಸಲಾರಂಭಿಸಿದಳು.

ಶಾಲಿನಿ–ಫ್ಲೋರಾ—

ಆ ಫೋನಿನ ಕರೆಯೂ ಅವಳಿಗೆ ಹೊಸದಲ್ಲ. ದಿನವೂ ಆ ಹೊತ್ತಿಗೆ ಸರಿಯಾಗಿ ಇಬ್ಬರಲ್ಲೊಬ್ಬರು ಅವಳಿಗೆ ಫೋನ್ ಮಾಡುತ್ತಾರೆ. ಇಲ್ಲವಾದರೆ, ಅವಳೇ ಆ ಇಬ್ಬರಲ್ಲೊಬ್ಬರಿಗೆ ಫೋನ್ ಮಾಡುತ್ತಾಳೆ. ಆಫೀಸಿನ ದಿನಚರಿಯಂತೆ, ಅದೂ ಅವಳ ದಿನದ ಜೀವನದಲ್ಲೊಂದು ಭಾಗ.

ಕಾಗದವನ್ನು ಮುಗಿಸಿ, ಕವರಿನ ಮೇಲೆ ವಿಳಾಸ ಟೈಪ್ ಮಾಡಿ,—

"ಗಣೇಶ್" ಎಂದು ಕೂಗಿದಳು.

"ಏನು ಬಾಯಿ ?"

"ಕಾಗದಕ್ಕೆ ಸಾಹೇಬರ ರುಜು ಹಾಕಿಸಿ, ಡಿಸ್ಪ್ಯಾಚ್ ಕ್ಲಾರ್ಕಿಗೆ ಕೊಡು."

"ಸಾಹೇಬರು ಆಗಲೇ ಮನೆಗೆ ಹೋದರು."

ಅದೂ ಪ್ರತಿದಿನವೂ ಕೇಳುವ ಮಾತೇ. ಟೈಪ್‌ರೈಟರಿನಲ್ಲಿದ್ದ ಕಾಗದವನ್ನು ಹೊರಗೆ ತೆಗೆದು, ಅದನ್ನು ಮುಚ್ಚಿ ಅದರ ಮುಸುಗು ಹಾಕಿದಳು. ಮೇಜಿನ ಮೇಲಿದ್ದ ಕಾಗದ, ಪೆನ್ಸಿಲ್ಲು, ರಬ್ಬರು, ಕಾರ್ಬನ್‌ಕಾಗದ, ಎಲ್ಲವನ್ನೂ ತೆಗೆದು 'ಡ್ರಾ'ನೊಳಗೆ ಇಟ್ಟು ಬೀಗ ಹಾಕಿದಳು. ಬೀಗದ ಕೈಯನ್ನು ಹ್ಯಾಂಡ್ ಬ್ಯಾಗಿನೊಳಗಿಟ್ಟು. ಹಾಗೇ ಕುರ್ಚಿಯ ಬೆನ್ನಿಗೆ ಬೆನ್ನು ಚಾಚಿದಳು.

ಕಿಟಕಿಯಾಚೆ ಹತ್ತಾರು ಸೀಮೆಂಟ್ ಮಾಳಿಗೆಗಳ ಸೂರು, ಸಂಜೆಯ ಮಾಗು ಬಿಸಿಲಿನಲ್ಲಿ ಮೈ ಕಾಯಿಸಿಕೊಳ್ಳುತ್ತಿತ್ತು. ಎಲ್ಲಿಂದಲೋ ಕಾರುಗಳ ಹಾರನ್ನಿನ ಸ್ವರ ಕ್ಷೀಣವಾಗಿ ಕೇಳಿಬಂದು, ಗಟ್ಟಿಯಾಗಿ ಮತ್ತೆ ಕ್ಷೀಣವಾಗಿ ತೇಲಿ ಹೋಗುತ್ತಿತ್ತು, ಗಾಳಿಗೆ ಸಿಕ್ಕ ಎಕ್ಕದ ಹತ್ತಿಯಂತೆ.

ಬಳಲಿದ ಕಣ್ಣು ಮುಚ್ಚಿದಳು.

ಆಗಲೂ ಬಿಸಿಲು ಕಾಯಿಸಿಕೊಳ್ಳುತ್ತಿರುವ ಸೂರುಗಳು ಕಾಣುತ್ತಿವೆ. ಕಾರಿನ ಸದ್ದು ಕೇಳುತ್ತಿದೆ.

ಶಾಲಿನಿ–ಫ್ಲೋರಾ....ತಾನು.

ಯಾವುದೋ ಮರದ ಮೇಲೆ, ಎಲ್ಲಿಂದಲೊ ಬಂದು ನೆಲೆಸಿ ಕಲೆತ ಹಕ್ಕಿಗಳಂತೆ ಕಲೆತವರು ಮೂವರೂ. ಈಗ ಜೊತೆಗಿದ್ದಾರೆ; ಜೊತೆಗೆ ಜೀವನ ಮಾಡುತ್ತಿದ್ದಾರೆ; ಬೆಳಗ್ಗೆ ಒಟ್ಟಾಗಿ ಆಫೀಸುಗಳಿಗೆ ಹೊರಡುತ್ತಾರೆ; ಮತ್ತೆ ಸಂಜೆ ಒಟ್ಟಾಗಿ ಮನೆಗೆ ಮರಳುತ್ತಾರೆ.

ಮನೆ!

ಯಾರ ಮನೆ?!....

ಗಡಿಯಾರ ಢಣ್ಣೆಂದು ಐದು ಗಂಟೆ ಹೊಡೆದು, ಆಫೀಸು ಬಿಡುವ ಹೊತ್ತು ಸೂಚಿಸಿತು.

ತಲೆಗೂದಲನ್ನು ಕೈ ಬೆರಳಿನಿಂದ ಸರಿಮಾಡಿಕೊಂಡು, ಸೆರಗು ತಿದ್ದಿ, ಆಫೀಸಿನಿಂದ ಹೊರಹೊರಟಳು. ಬಾಗಿಲಲ್ಲಿದ್ದ ಗಣೇಶ್ ಸಲಾಮು ಮಾಡಿದ.

ಅವನ ಬಿಡುಗಡೆಯ ಹೊತ್ತಿನ್ನೂ ಬಂದಿಲ್ಲ.

ಲಿಫ್ಟಿನ ಹುಡುಗ ಸಲಾಮು ಹಾಕಿ ಲಿಫ್ಟಿನ ಬಾಗಿಲು ತೆರೆದ. ಲಿಫ್ಟಿನೊಳಗೆ ಇನ್ನೂ ಇಬ್ಬರಿದ್ದರು. ಯಾರೋ....

ಲಿಫ್ಟು ನಿಧಾನವಾಗಿ ಕೆಳಗಿಳಿಯಿತು—ಲಿಫ್ಟಿನ ಹುಡುಗ ಬಾಗಿಲು ತೆರೆದು ಹೊರಬಿಟ್ಟ—ಪಂಜರದಿಂದ ಹೊರಗೆ. ನಿಜ, ಅಂದಿನ ಆಫೀಸು ಮುಗಿಯಿತು—ಅವಳಿಗೆ.

ಆಫೀಸು ಮುಗಿಯಿತು–ನಿಜ. ಅಂದಿನ ಆಫೀಸಿನ ಜೀವನದಿಂದ ಮುಕ್ತಿ ದೊರೆಯಿತು.

ಪಂಜರದಿಂದ ಹೊರಗೆ ಹಾರುವ ಹಕ್ಕಿ ಉಲ್ಲಾಸದಿಂದ ಹಾರುತ್ತದೆ ಎನ್ನುತ್ತಾರೆ. ಅವಳ ಆಫೀಸೂ ಅವಳಿಗೊಂದು ಪಂಜರವೇ. ಆದರೆ ಅದರಿಂದ

ಹೊರಗೆ ಹಾರುವಾಗ ಅವಳಿಗೇನೂ ಉಲ್ಲಾಸ ತೋರುವುದಿಲ್ಲ. ಯಾವ ಬಗೆಯ ಹರ್ಷದಿಂದಲೂ ಅವಳ ಮೈ ಪುಲಕಿತವಾಗುವುದಿಲ್ಲ.

ಅದಕ್ಕೆ ಬದಲು-ಲಿಫ್ಟಿನಿಂದಿಳಿದು, ಅದರ ಬಾಗಿಲು ದಾಟಿ, ಹೊರಗೆ ಬಂದಾಗ, ಸಣ್ಣ ಪಂಜರದಿಂದ ದೊಡ್ಡ ಪಂಜರಕ್ಕೆ ಬಂದಂತೆ ಮಾತ್ರ ತೋರುತ್ತದೆ. ಇಡೀ ನಗರವೇ ಒಂದು ದೊಡ್ಡ ಪಂಜರವೆನಿಸುತ್ತದೆ.

ಇಡೀ ನಗರ-ಹೂ-ಬೊಂಬಾಯಿಗೆ ಬೊಂಬಾಯಿಯೇ ಬಹು ದೊಡ್ಡ ಪಂಜರ; ಲಕ್ಷಾಂತರ ಜನರನ್ನು ತನ್ನ ಗರ್ಭದೊಳಗೆ ಸೆರೆ ಹಿಡಿದ ಪಂಜರ. ಅಲ್ಲವಾದರೆ ಮತ್ತೇನು?

ಸಂಜೆಯ ಮಾಗಿದ ಬಿಸಿಲಿನಲ್ಲಿ, ನೆತ್ತಿಯನ್ನು ಮಾತ್ರ ತೋಯಿಸಿಕೊಂಡು, ಕೆಳಗೆ ಬೀದಿಯಲ್ಲಿ ನಡೆವ ಮಾನವನನ್ನು ಕ್ಷುಲ್ಲಕ ಕ್ರಿಮಿಯಾಗಿ ಮಾಡಿ, ಹತ್ತಾರು ಅಂತಸ್ತುಗಳ ಎತ್ತರಕ್ಕೆ ತಲೆ ಚಾಚಿ ನಿಂತ ಮನೆಗಳು; ವಿದ್ಯುಚ್ಛಕ್ತಿ, ಟೆಲಿಫೋನ್, ಟ್ರಾಂನ ತಂತಿಗಳು; ಕಾರುಗಳು, ಮೋಟಾರುಗಳು, ಟ್ರಾಂಗಳು; ಕಾಳ ನೀಲಕಾಂತಿಯಿಂದ ರಸ್ತೆಯ ನಡುವೆ, ನೀಲಿಯ ಬಣ್ಣದ ಹಾವಿನಂತೆ ಹರಿದ ಟ್ರಾಂನ ಹಳಿಗಳು,

ನೂರಾರು ಯಂತ್ರಗಳು, ಯಂತ್ರೋಪಕರಣಗಳು, ಯಂತ್ರಧ್ವನಿಗಳು.

ಇವುಗಳ ನಡುವೆ ಮಾನವ.

ಗಂಡು-ಹೆಣ್ಣು; ಮುದುಕರು, ಯುವಕರು, ಮಕ್ಕಳು.

ಯಂತ್ರಕ್ಕೆ ಬೆದರುತ್ತಾ, ಯಂತ್ರಕ್ಕೆ ಕಾಯುತ್ತಾ, ತಮ್ಮದಲ್ಲದ ಅಪರಿಚಿತ ಸ್ಥಳದಲ್ಲಿ ಹೆದರಿ ಹೆದರಿ ಹೆಜ್ಜೆ ಇಡುವ ಹುಡುಗರಂತೆ ಓಡಾಡುತ್ತಿದ್ದಾರೆ—ನೂರಾರು ಜನ.

ಯಂತ್ರ ಭೀತಿ—

ಎಲ್ಲಿ ಎಚ್ಚರದಪ್ಪಿ ನಡೆದರೆ, ಯಾವ ಯಂತ್ರ ಮೈಮೇಲೆ ಹಾದೀತೋ ಎಂದು, ಇದ್ದ ಎರಡು ಕಣ್ಣುಗಳನ್ನು ದಶದಿಕ್ಕುಗಳಿಗೂ ಹೊರಳಿಸುತ್ತಾ, ಆ ಭೀತಿಯ ನಡುವೆಯೇ ಮಾತನಾಡುತ್ತಾ, ನಗುತ್ತಾ ನಡೆಯುತ್ತಿದ್ದಾರೆ....

ಆತುರ-ಆ ಭೀತಿಯಲ್ಲೂ ಆತುರ.

ಹೊತ್ತುಗೊತ್ತಿಗೆ ಸರಿಯಾಗಿ ಚಲಿಸುವ ಯಂತ್ರವನ್ನು ಸೇರುವ ಆತುರ; ಕೆಂಪಗೆ ಕಾಲನ ಕೋಣನಂತೆ ಮದಿಸಿ ಬರುವ ವಾಹನವನ್ನು ಸೇರುವ ಆತುರ; ಅದರಲ್ಲಿ ತಮಗೆ ನೆಲೆ ಸಿಗುವುದೋ ಇಲ್ಲವೋ ಎನ್ನುವ ಕಾತರ....

ಸಾಲುಸಾಲಾಗಿ, ಒಬ್ಬರ ಹಿಂದೊಬ್ಬರು, ಗಂಡು, ಹೆಣ್ಣು, ನೂರು ಜಾತಿ, ನೂರು ವೇಷ, ನೂರು ಭಾಷೆಯ ಮಾನವರು, ವಾಹನ ಯಂತ್ರದ ಕೃಪೆಯನ್ನು ಕಾಯುತ್ತಾ ನಿಂತಿದ್ದಾರೆ....

ವಾಹನ – ಅದು ವಾಹನವೇ ?

ಅದೂ ಒಂದು ಪಂಜರ – ಕೆಂಪು ಪಂಜರ.

ಒಂದು ಪಂಜರದಿಂದ ಮತ್ತೊಂದು ಪಂಜರಕ್ಕೆ ಕೊಂಡೊಯ್ಯುವ ಚಲಿಸುವ ಪಂಜರ.

ಎಲ್ಲರಿಗೂ ಮನೆಗೆ ಹೋಗುವ ಆತುರ.

ಮನೆ–ಆದರೆ ಅದು ಮನೆಯೇ, ಊಹೂ, ಮನೆಯಲ್ಲ ಅದು, ಪಾರಿವಾಳದ ಗೂಡು.

ಆ ಗೂಡಿನಿಂದ ಈ ಗೂಡು–ಈ ಗೂಡಿನಿಂದ ಆ ಗೂಡು–ನಡುವೆ ದಿನದ ಜೀವನದ ಬಟ್ಟೆಯನ್ನು ನೇಯುವ ಕೆಂಪು ಪಂಜರದ ಲಾಳಿ.

ಇದು ಜೀವನ !

ಅತ್ತಿಂದಿತ್ತ, ಇತ್ತಿಂದತ್ತ ಸುತ್ತುತ್ತಿರುವ ಹಲಬಗೆಯ ನೂರಾರು ವಾಹನಗಳಂತೆ, ಅವಳ ಮೆದುಳಿನಲ್ಲಿ ಯೋಚನೆಗಳು ಸುತ್ತುತ್ತಿದ್ದವು. ಒಳಕಣ್ಣು ಬೇರೇನನ್ನೋ ಬೆದಕುತ್ತಿದ್ದರೂ, ಹೊರ ಕಣ್ಣು ಅಭ್ಯಾಸವಶದಿಂದ ಹೆಜ್ಜೆಯನ್ನು ನಡೆಸುತ್ತಿತ್ತು.

ಅದೇ ಅಭ್ಯಾಸ ಬಲದಿಂದ ಕಾಲು ಚರ್ಚ್‌ಗೇಟ್ ಸ್ಟೇಷನ್ನಿನ ಮುಂಭಾಗದಲ್ಲಿ ಬಂದು ನಿಂತಿತು. ಗಡಿಯಾರವನ್ನು ನೋಡಿಕೊಂಡಳು ಪ್ರಭಾ.

ಇನ್ನೂ ಮೂರು ನಿಮಿಷವಿದೆ ತನ್ನ ಗಾಡಿ ಹೊರಡಲು.

ಎಷ್ಟು ಜನ, ಎಷ್ಟು ಜನ....ಹೋಗುವವರು, ಬರುವವರು–ಎಲ್ಲರಿಗೂ ಆತುರ. ಯಾವುದೋ ಕಾಣದ ಮಿಗ ಬೆನ್ನಟ್ಟದ ಬೇಟೆಗಳಂತೆ ಧಾವಿಸುತ್ತಿದ್ದಾರೆ.

ಮೈಮರೆತವರನ್ನು ಎಚ್ಚರಿಸುವಂತೆ ಕರ್ಕಶವಾಗಿ ಶಿಳ್ಳು ಹಾಕುತ್ತದೆ ವಿದ್ಯುತ್–ರೈಲು.

ಇನ್ನೆರಡು ನಿಮಿಷ ಅವಕಾಶ ಎಂದಿತು ಕೈ ಗಡಿಯಾರ.

ಅಷ್ಟರಲ್ಲಿ ಹೇಗಾದರೂ, ಆ ನೂಕು ನುಗ್ಗಲಿನಲ್ಲಿ ಎಡೆ ಮಾಡಿಕೊಂಡು

ರೈಲಿನೊಳಗೆ ಕೂಡಬೇಕು. ನಿಂತ ರೈಲು, ನುಗ್ಗುವ ಜನ, ಕೈ ಗಡಿಯಾರ ಆ ಮಾತನ್ನು ಹೇಳಿದವು. ಹೆಜ್ಜೆ ತಾನೇ ಸರುಗಿತು.

ಅವಸರವಾಗಿ ಹೋಗುವ ಹತ್ತಾರು ಜನದ ಗುಂಪು, ತಾನೇ ಅವಳನ್ನು ಒತ್ತರಿಸಿ ಮುಂದೆ ತಳ್ಳಿತು.

ರೈಲಿನ ಡಬ್ಬಿಯ ಮುಂದೂ ಅದೇ ಗುಂಪು. ಅದೇ ನೂಕಲು, ತಳ್ಳಾಟ.

ಗುಂಪು, ನೂಕಲ್ಲಿ, ಅವಕಾಶ ಸಿಕ್ಕಲ್ಲಿ ತೂರು; ನೂಕಿದತ್ತ ಕಡೆ—

ಇಷ್ಟೇನೇ ಜೀವನ?

ತಟಕ್ಕನೆ ಏಕೋ ಅವಳಿಗೆ ಎಲ್ಲವೂ ಬೇಸರವಾಯಿತು. ಮನಸ್ಸು ಕರ್ಕಶವಾಯಿತು. ಆ ಗುಂಪು, ಗದ್ದಲ, ನೂಕಲು, ಅವಸರ, ಗಜಿಬಿಜಿ ಎಲ್ಲವೂ ಅಸಹ್ಯವಾಯಿತು. ಏಕೋ ಅಲ್ಲಿ ಒಂದು ಗಳಿಗೆ ನಿಂತರೂ, ಉಸಿರು ಕಟ್ಟಿ ಸಾಯುವೆನೇನೋ ಎನಿಸಿತು. ರೈಲ್ವೆ ನಿಲ್ದಾಣ ಕರಾಳಪ್ರೇತಗಳ ಹೂಂಕಾರರವದಿಂದ, ಭೀಷಣ ನರ್ತನದಿಂದ ತುಂಬಿದಗಾಳಿ, ಸತ್ತ ಕಗ್ಗವಿಯಂತೆ ತೋರಿತು.

ತನ್ನ ನಿತ್ಯದ ರೈಲು ಹೋಗುವುದನ್ನೂ, ಫೋನಿನಲ್ಲಿ ಶಾಲಿನಿಗೆ ಕೊಟ್ಟ ಮಾತನ್ನೂ ಮರೆತು, ವೇಗವಾಗಿ ನಿಲ್ದಾಣದಿಂದ ಹೊರಬಂದು, ಬಯಲಿನಲ್ಲಿ ನಿಂತಳು.

ಒಂದು ಗಳಿಗೆ ಎಲ್ಲಿ ಹೋಗಬೇಕು, ಮುಂದೇನು ಮಾಡಬೇಕು ಎಂಬುದು ತೋಚಲಿಲ್ಲ. ಬಳಿಕ ನೆಲೆಯಿಲ್ಲದೆ ತೂಗುವ ಮನಸ್ಸನ್ನು ಸಾವರಿಸಿಕೊಂಡು, ಕಡಲಕರೆಯತ್ತ ಹೆಜ್ಜೆ ಹಾಕಿದಳು.

ಚೌಪಾತಿಯ ದಂಡೆಯಲ್ಲೂ ಗಜಿಬಿಜಿ, ಜನಜಂಗುಳಿ. ಆದರೆ ಕಡಲತ್ತ ದಿಟ್ಟಿಸಿದಾಗ, ಆ ಅಪಾರ ನೀಲವಿಸ್ತಾರವನ್ನು ಕಂಡು, ಅವಳ ಮನಸ್ಸಿನ ತೊಯ್ದಾಟ ಕೊಂಚ ಕಡಮೆಯಾಯಿತು. ಕಡಲ ಕೋಟಿ ಅಲೆಗಳ ಉಯ್ಯಾಲೆಯ ಮೇಲೆ ತೂಗಿ ಬಂದ ಗಾಳಿ, ಅವಳ ಕಾದ ಮೆದುಳಿಗೆ ಕೊಂಚ ತಂಪು ಎರೆಯಿತು. ಸಾಗರವನ್ನು ನೋಡನೋಡುತ್ತಾ, ಅವಳ ಮನಸ್ಸಿನ ಅಲ್ಲಕಲ್ಲೋಲವೂ ಕ್ರಮೇಣ ಶಾಂತವಾಗಿ, ಮೈ ಹಗುರಾಯಿತು. ಬಿಸಿಯಾರುತ್ತಿದ್ದ ಮರಳಿನ ಮೇಲೆ ಮೈ ಒರಗಿಸಿದಳು–ತಾಯ ತೊಡೆಯ ಮೇಲೆ ಮಲಗಿದಂತಾಯಿತು ಅವಳಿಗೆ.

ತಾಯ ತೊಡೆ....ತನ್ನ ಮನೆ....

ದಡಕ್ಕೆ ಅಪ್ಪಳಿಸಿ ಹಿಂದೆರಳುವ ಅಲೆಗಳಂತೆ ಅವಳ ಮನಸ್ಸೂ, ಸುರುಳಿ ಸುರುಳಿ ಸುತ್ತುತ್ತಾ ಎಲ್ಲೋ, ಕಾಣದ ಮತ್ತಾವುದೋ ತೀರದತ್ತ, ಬಿಟ್ಟು ಬಂದ ತವರಿನತ್ತ ಜಾರುತ್ತಿತ್ತು.

ಆ ಮನೆ, ಬಿಟ್ಟು ಬಂದ ಆ ಬಾಳು....

ಅಲೆ ಹಿಂದೆ ಹಿಂದೆ ಸರಿದು ಜಾರುತ್ತಿತ್ತು........

ಹತ್ತಿರದಲ್ಲೇ ಸಣ್ಣ ದನಿಯಲ್ಲಿ ಸಿಳ್ಳು ಹಾಕಿದ ಸದ್ದು ಕೇಳಿತು. ಹಾಗೇ ಕಾಲಿಗೆ ಸಣ್ಣಕಲ್ಲು ಬಡಿದಂತಾಯಿತು. ಕಣ್ಣು ತೆರೆದು ನೋಡಿದಳು. ಬಳಿ ಯಲ್ಲೇ ಕುಳಿತವನೊಬ್ಬ, ಅವಳು ಕಣ್ಣು ತೆರೆದು ತನ್ನ ಕಡೆ ನೋಡಿದುದನ್ನು ಕಂಡು–

"ಎಕ್ಸ್‌ಕ್ಯೂಸ್ ಮಿ. ಎಲ್ಲೋ ಹಾಕಲು ಹೋದ ಕಲ್ಲು ನಿಮಗೆ ತಗುಲಿತು. ವೆರಿ ವೆರಿ ಸಾರಿ" ಎಂದ.

ಅವನ ಬಾಯಿ ಕ್ಷಮಾಪಣೆ ಬೇಡಿದರೂ, ಅವನ ಕಣ್ಣು ಹಸಿವಿನಿಂದ, ಅವಳ ಮೊಗವನ್ನೇ ನೋಡುತ್ತಿತ್ತು.

ಹೆಣ್ಣಿಗೆ ಹಸಿದ ಹೆಬ್ಬಾವು!

ಇಂಥವರನ್ನೆಷ್ಟೋ ಜನರನ್ನು ಕಂಡಿದ್ದಳು ಪ್ರಭಾ. ಒಂಟಿ ಹೆಣ್ಣು ಕಂಡ ಕೂಡಲೇ ಕಾಮ ಕೆರಳುವ ಜನ–ದೀಪದ ಕಂಭ ಕಂಡ ಕೂಡಲೇ ಕಾಲೆತ್ತಿ ನಿಲ್ಲುವ ನಾಯಿ!

ಅವನನ್ನು ಕಂಡು ಅವಳಿಗೆ ಹೇಸಿಗೆಯಾಯಿತು.

"ಮೈ ಮೇಲೆ ಎಚ್ಚರವಿರಲಿ. ಇಲ್ಲವಾದರೆ ಕಾಲಲ್ಲಿ ಚಪ್ಪಲಿ ಇದೆ" —ಎಂದಳು. ಅವನು ಮುಖ ತಗ್ಗಿಸಿ ಜಾಗ ಬಿಟ್ಟ.

"ಥೂ. ನಾಯಿ ಬಾಳು" ಎಂದು ತನ್ನೊಳಗೇ ಅವನನ್ನು ಶಪಿಸಿದಳು.

ಎಲ್ಲ ಕಡೆಯಲ್ಲೂ ಇಷ್ಟೆ. ಹೋದ ಕಡೆಯಲ್ಲೆಲ್ಲಾ ಇದೇ ಕಾಮದ ಕಣ್ಣು ....ಮನೆಯಲ್ಲಿ, ಬೀದಿಯಲ್ಲಿ, ಆಫೀಸಿನಲ್ಲಿ, ರೈಲಿನಲ್ಲಿ, ಬೀಚಿನಲ್ಲಿ–ಎಲ್ಲ ಕಡೆ ಯಲ್ಲೂ ಇದೇ ಕಳ್ಳ ಬೆಕ್ಕಿನ ಹಾಲು ಕಂಡ ನೋಟ.

ಆಫೀಸಿನಲ್ಲಿ ಟೈಪ್ ಮಾಡುವಾಗ ಕೊಂಚ ಸೆರಗು ಜಾರಿದರೆ ಎಷ್ಟು ಕಣ್ಣು ತಿರುಗುತ್ತವೆ ಇವಳತ್ತ....

ರೈಲಿನಲ್ಲಿ ಹೋಗುವಾಗ, ನೂಕಾಟದಲ್ಲಿ ಸ್ಪರ್ಶಸುಖದಿಂದ ತೃಪ್ತರಾಗು ವವರು ಎಷ್ಟು ಜನ....

ಫ್ಲಾಟಿನ ಎದುರು ಬದಿಯ ಫ್ಲಾಟಿನಲ್ಲಿ ಒಂದು ಸಂಸಾರವಿದೆ. ಅದರ ಯಜಮಾನನೂ ಅಷ್ಟೆ–ಅವಕಾಶ ದೊರೆತಾಗ ಇವಳತ್ತ ಕೆಕ್ಕರಿಸಿ ನೋಡು ತ್ತಾನೆ....

ಬೀಚಿನಲ್ಲೂ ಇದೇ ಬೇಟೆಯ ಕಮಟು ನಾತ....ಬೀದಿಯಲ್ಲೂ ಇದೇ ಕಣ್ಣು ಬೇಟೆ....

ಒಮ್ಮೊಮ್ಮೆ ಅವಳಿಗೆ ಇದನ್ನು ಕಂಡು ನಗು ಬರುತ್ತದೆ, ಒಮ್ಮೊಮ್ಮೆ ಬೇಸರವಾಗುತ್ತದೆ, ಮತ್ತೊಮ್ಮೆ ಸಿಟ್ಟು ಕೆರಳುತ್ತದೆ....

ಗಂಡು–ಹೆಣ್ಣು.

ಇದೇನೇ ಈ ಬಾಳಿನ ಅರ್ಥ? ಗಂಡಿನ ದೃಷ್ಟಿಯಲ್ಲಿ ಹೆಣ್ಣಿಗೆ ಇದಕ್ಕಿಂತ ಹೆಚ್ಚಿನ ಅರ್ಥ ಬೇರೇನೂ ಇಲ್ಲವೇ?

ಅರ್ಥ....ವ್ಯರ್ಥತೆಗೆ ಅವಕಾಶ ಕೊಡದ ಅರ್ಥ....

ಅವಳ ಬಾಳಿನ ಸಮಸ್ಯೆ ಮತ್ತೊಮ್ಮೆ ಅವಳ ಕಣ್ಣೆದಿರು, ಹಲ್ಲು ಕಿಸಿದು ನಿಂತಿತು....

ಅವಳ ಬಾಳಿನ ಗಂಡು....ಅವಳೇ ಬಯಸಿದ ಗಂಡು....ಅವಳನ್ನು ಬಯಸಿದ ಗಂಡು....

ಅಲೆ, ದಡವನ್ನು ತಾಡಿಸಿದ ಅಲೆ ಹಿಂದೆ ಹಿಂದೆ ಜಾರುತ್ತಿತ್ತು.... ಯಾವುದೋ ಕಾಣದ ದೂರದ ತೀರದತ್ತ....ಅವಳ ಇಂದಿನ ಬಾಳಿನ ಮೂಲ ದತ್ತ........

ಅವಳ ಬಾಳು!

ಬಯಸಿ ಕಟ್ಟಿದ ಬಾಳಿನ ಗೋಪುರ....

"ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತೆ"!

ಅವಳ ಕರುಳನ್ನು ಹಿಂಡಿದಂತಾಗಿ, ಕಣ್ಣು ಬೇಡ ಬೇಡವೆಂದರೂ ತೇವವಾಯಿತು. ಮೆದುಳಿನಲ್ಲಿ ಮತ್ತೊಮ್ಮೆ ಜ್ವಾಲಾಮುಖಿ ಕೆದರಿತು.

೧

ಜ್ವಾಲಾಮುಖಿ !

ಆ ಘಟನೆ ನಡೆದುದು ಅವಳ ಚಿಕ್ಕಂದಿನಲ್ಲಾದರೂ, ಅವಳ ಜೀವನದಲ್ಲಿ ಮೊಟ್ಟಮೊದಲ ಬಾರಿಗೆ ಜ್ವಾಲಾಮುಖಿ ಕೆದರಿ ಹೊಗೆಯಾಡಿದ ದಿನ ಅವಳಿಗೆ ಈಗಲೂ ಚೆನ್ನಾಗಿ ನೆನಪಿದೆ.

ಒಂದು ದೃಷ್ಟಿಯಲ್ಲಿ ಹೇಳುವುದಾದರೆ ಆ ಘಟನೆಯೇ ಅವಳ ಇಂದಿನ ಜೀವನಕ್ಕೆ ನಾಂದಿ ಎನ್ನಬಹುದು.

ಆಗಿನ್ನೂ ಅವಳಿಗೆ ಲಂಗ ಉಡುವ ವಯಸ್ಸು ಆಗಲೂ – ಈಗಲೂ ಅಷ್ಟೆ – ಅವಳಿಗೆ ತಂದೆಗಿಂತ ತಾಯಿಯ ಮೇಲೇ ಹೆಚ್ಚು ಪ್ರೀತಿ. ಫ್ರಾಯ್ಡ್‌ನ ಪಂಥದ ಮನೋವಿಜ್ಞಾನಿಗಳು ಮಗಳಿಗೆ ತಂದೆಯ ಮೇಲೂ, ಮಗನಿಗೆ ತಾಯಿಯ ಮೇಲೂ ಪ್ರೀತಿ ಇರುತ್ತದೆ ಎನ್ನುತ್ತಾರೆ. ಆದರೆ ಅದೆಷ್ಟು ನಿಜವೋ ಸುಳ್ಳೋ, ಅಥವಾ ಅವಳ ಮನೋರೀತಿಯೇ ಅಸ್ವಾಭಾವಿಕವೋ, ಅವಳಿಗೆ ತಂದೆಗಿಂತ ತಾಯಿಯ ಮೇಲೇ ಹೆಚ್ಚು ಪ್ರೀತಿ.

ಅವಳ ತಂದೆ ಸಂಜೀವರಾಯರಿಗೇನೋ, ತಮ್ಮ ಗಂಡು ಮಕ್ಕಳಿಗಿಂತ, ಈ ಮಗಳ ಮೇಲೇ ಹೆಚ್ಚು ಪ್ರೀತಿ. ಪ್ರಭಾ ಅವರ ಪ್ರಾಣ ಪದಕ. ಅವಳು ತನ್ನ ಬಾಳಿನಲ್ಲಿ ಸ್ವಲ್ಪಮಟ್ಟಿಗೆ 'ಹಟಮಾರಿ'ಯಾಗಲು ಅವರ ಆ ಪ್ರೀತಿಯ ಹೆಚ್ಚಳವೂ ಒಂದು ಕಾರಣವೋ ಏನೋ. ಅವಳ ಮಾತು, ಅವರಿಗೆ ಆಜ್ಞೆ. ಒಮ್ಮೊಮ್ಮೆ ಮಾತು ನಿರೀಕ್ಷಿತ ಕೆಲಸ ಮಾಡದಿದ್ದಾಗ ಯಾಚಿತವಾಗಿಯೋ, ಅಯಾಚಿತವಾಗಿಯೋ ಬರುವ ಹುಬ್ಬಿನ ಕೊಂಕು, ಕಂಬನಿಯ ಹನಿ ಮಾತಿನ ಬೆಂಬಲಕ್ಕೆ ನಿಂತು, ಬೇಕಾದ ಕೆಲಸ ಮಾಡಿಸುತ್ತದೆ; ಅವಳಿಗೆ ಬೇಕಾದುದು, ಅವಳನ್ನು ಹುಡುಕಿಕೊಂಡು ಬರುತ್ತದೆ.

ಇದ್ದ ಒಬ್ಬಳೇ ಮಗಳ ಬೇಡಿಕೆಗಳನ್ನು ನೆರವೇರಿಸುವುದು ರಾಯರಿಗೆ ಏನೂ ಕಷ್ಟದ ಕೆಲಸವಾಗಿರಲಿಲ್ಲ. ಕಂಟ್ರಾಕ್ಟ್ ಕೆಲಸದಲ್ಲಿ, ಬ್ಯಾಂಕಿನಲ್ಲಿ ಕೊಳೆಯುವಷ್ಟು ಹಣ ಬರುತ್ತಿತ್ತು. ಅವರ ಸುತ್ತಾಟವೆಲ್ಲಾ ಶ್ರೀಮಂತರ ಗುಂಪಿನಲ್ಲಿ. ಅವರಿಗೆ ತಾವೂ ಅವರಂತೇ ಇರಬೇಕು. ಅವರ ಜೀವನದ ರೀತಿಯನ್ನು ತಾವೂ ಪಾಲಿಸಬೇಕು, ಸಿರಿವಂತಿಕೆಯ ಸೂಚಕಗಳಾದ ಬಹಿರಾಡಂಬರವೆಲ್ಲಾ ತಮ್ಮ ಮನೆಯಲ್ಲಿ ಇರಬೇಕು – ತಿರುಗಲು ಕಾರು, ಮನೆಯಲ್ಲಿ ರೇಡಿಯೊ, ಅಡಿಗೆ ಮನೆಯಲ್ಲಿ ರೆಫ್ರಿಜರೇಟರ್, ಊಟಕ್ಕೆ ಪಿಂಗಾಣಿ

ಪದಾರ್ಥ, ಮೇಜಿನೂಟ, ಬಾರ್‌ಗೆ ಹಾಜರಿ ಹಾಕುವುದು, ಗಾಲ್ಫ್ ಆಟ–ಇವೇ ಸಂಸ್ಕೃತಿಯ ಪರಮಾವಧಿ ಎಂದು ಕಲಿತವರು; ಆಧುನಿಕತೆಯ ಅವಿಚ್ಛಿನ್ನ ಭಕ್ತರು.

ಈಗಲೂ ಅದೆಲ್ಲಾ ಜ್ಞಾಪಿಸಿಕೊಂಡಾಗ ಪ್ರಭಾಗೆ ಒಮ್ಮೊಮ್ಮೆ ಅನುಮಾನ ವಾಗುತ್ತದೆ – ಅವರಿಗೆ ತನ್ನ ಮೇಲೆ ಅಷ್ಟು ಪ್ರೀತಿ ಇದ್ದುದಕ್ಕೆ ಕಾರಣ ಒಬ್ಬಳೇ ಮಗಳೆಂದೋ, ಅಥವಾ ಆಧುನಿಕತೆಯ ಅಭಿಮಾನವೋ? ಈಗಲೂ ಅವಳಿಗೆ ಆ ಸಮಸ್ಯೆ ಇತ್ಯರ್ಥವಾಗಿಲ್ಲ.

ಒಂದು ದೃಷ್ಟಿಯಲ್ಲಿ ಪ್ರಭಾ, ಸಂಜೀವರಾಯರು ತಮ್ಮ ಆಧುನಿಕತೆ ಯನ್ನು ಮೆರೆಸಲು ಸಾಧನವೂ ಆಗಿದ್ದಳು. ತಾವು ಕಂಡ ಇತರ ಶ್ರೀಮಂತರ ಹೆಣ್ಣುಮಕ್ಕಳಂತೆಯೇ ಪ್ರಭಾಳನ್ನು ತಯಾರುಮಾಡಲು ರಾಯರು ಪ್ರಯತ್ನ ಪಡುತ್ತಿದ್ದರು. ಅವಳು ಮಾತು ಕಲಿಯುವುದನ್ನು ಆರಂಭಿಸುತ್ತಿದ್ದ ಹಾಗೇ ಇಂಗ್ಲೀಷ್ ಅಭ್ಯಾಸ ಆರಂಭವಾಗಿತ್ತು. ಅವಳನ್ನು ನೋಡಿಕೊಳ್ಳಲು ದಾಯಿ ಬಂದಿದ್ದಳು. ಪೌಡರು, ಸ್ನೋ, ರೂಜ್, ನೈಲ್ ಪಾಲಿಷ್‌ಗಳ ಪಾಠವೂ ಬಹು ಮೊದಲಿನಲ್ಲೇ ಆಗಿತ್ತು. ಇದೆಲ್ಲದರಲ್ಲೂ ಪ್ರಭಾ ರಾಯರಿಗೆ ತೃಪ್ತಿ ಕೊಟ್ಟಿದ್ದಳು. ಆದರೆ ಅವಳ ವಿಷಯದಲ್ಲಿ ಅವರಿಗೊಂದೇ ಅಸಮಾಧಾನ– ಹುಟ್ಟಿನಿಂದಲೇ ಪ್ರಭಾ ಸಂಗೀತ ವೈರಿ. ಇದರಿಂದಾಗಿ ಅವಳಿಗೆ ನರ್ತನ, ಸಿತಾರ್ ವಾದನವನ್ನು ಕಲಿಸುವುದಾಗಲಿಲ್ಲವಲ್ಲಾ ಎಂದು ರಾಯರ ಮನಸ್ಸಿಗೆ ಕಿರಿಕಿರಿ. ಆದರೂ ಚಿಕ್ಕ ವಯಸ್ಸಿನಲ್ಲೇ ಅವಳು 'ಪರಂಗಿ' ಹುಡುಗರಂತೆ ಇಂಗ್ಲೀಷ್ ಮಾತನಾಡುವುದು, ಅವಳ 'ಟೇಬಲ್ ಮ್ಯಾನರ್ಸ್', ಅತಿಥಿಗಳು ಬಂದಾಗ ನಡೆದುಕೊಳ್ಳುವ ರೀತಿಗಳನ್ನು ಎಷ್ಟು ಮೆರೆಸಿದರೂ ಅವರಿಗೆ ಸಮಾಧಾನವಿಲ್ಲ. ಈ ಹೆಮ್ಮೆಗೆ ಸಾಧನವೆಂದೇ ಅವಳ ಮೇಲೆ ಅವರಿಗಷ್ಟು ಅಭಿಮಾನವಿತ್ತೋ ಏನೋ.

ತಮ್ಮ ಗಂಡು ಮಕ್ಕಳನ್ನೂ ರಾಯರು ಇದೇ ಬಗೆಯ ಸಂಪ್ರದಾಯದಲ್ಲೇ ತಯಾರು ಮಾಡಿದ್ದರು. ಅವರ ಬಣ್ಣ ಒಂದನ್ನು ಬಿಟ್ಟರೆ, ಉಳಿದುದೆಲ್ಲವೂ 'ಥೇಟ್ ಪರಂಗಿ.'

ಮಕ್ಕಳ ವಿಷಯದಲ್ಲಿ ಇಷ್ಟು ದೂರ ಬೆಳೆದ ರಾಯರ ಆಧುನಿಕತೆಯ ಅಭಿಮಾನ ಏಕೋ ಹೆಂಡತಿಯವರೆಗೂ ಹಬ್ಬಿರಲಿಲ್ಲ. ಮಕ್ಕಳಿಗೆ ಅನ್ವಯಿಸುವ ಯಾವ ಆಧುನಿಕತೆಯ ತತ್ವವನ್ನೂ, ಅವರು ಹೆಂಡತಿಗೆ ಅನ್ವಯಿಸಿರಲಿಲ್ಲ.

ಮಕ್ಕಳ ತಾಯಿ, ಗೃಹಕೃತ್ಯದ ಜವಾಬ್ದಾರಿಯನ್ನು ನೋಡಿಕೊಳ್ಳುವ ಮೇಸ್ತ್ರಿ ಎಂಬಷ್ಟೇ ಅಭಿಮಾನ ಆಕೆಯ ವಿಷಯದಲ್ಲಿ. ರಾಯರು ಪ್ರಯತ್ನ ಮಾಡಿದ್ದರೆ, ಮಕ್ಕಳಂತೆ ಆಕೆಯೂ ಆಧುನಿಕಳಾಗುವುದು ಸಾಧ್ಯವಿತ್ತೋ ಏನೋ, ಆದರೆ ಆಕೆ ಆಧುನಿಕಳಾಗಲು 'ನಾಲಾಯಖ್ಖು' ಎಂದೇ ರಾಯರ ಸಿದ್ಧಾಂತ. ಮಕ್ಕಳಿಗಿದ್ದ ಯಾವ ಸ್ವಾತಂತ್ರ್ಯವೂ ಆಕೆಗೆ ಇರಲಿಲ್ಲ. ತನ್ನ ಮಕ್ಕಳ ವಿಷಯದಲ್ಲೂ ಆಕೆಗೆ ಸ್ವಾತಂತ್ರ್ಯವಿರಲಿಲ್ಲ.

ಆದರೆ ಇದರ ಪರಿಣಾಮ ರಾಯರ ಹೆಂಡತಿ ರತ್ನಮ್ಮನ ಮನಸ್ಸಿನ ಮೇಲೆ ಹೇಗಾಗಿತ್ತೋ ಅದು ಯಾರಿಗೂ ತಿಳಿಯದು. ಸುಖವಾಗಲಿ ದುಃಖವಾಗಲಿ ಆಕೆಗೆ ಹೆಚ್ಚು ಮಾತನಾಡಿಯೇ ತಿಳಿಯದು. ಗಂಡನೊಂದಿಗಾಗಲಿ, ಮಕ್ಕಳೊಂದಿಗಾಗಲಿ ಯಾರೊಂದಿಗೂ ಹೆಚ್ಚು ಮಾತನಾಡುವ ಜೀವವಲ್ಲ. ಗಂಡನೆಂದರೆ ಪ್ರತ್ಯಕ್ಷ ದೇವರು ಎಂಬಷ್ಟು ಗೌರವ; ಅವರು ಏನು ಮಾಡಿದರೂ ಸರಿ ಎಂಬ ನಂಬಿಕೆ. ಆದರೂ ರಾಯರ ಧೋರಣೆಯ ನಡವಳಿಕೆಯಿಂದ ಆಕೆಯ ಜೀವಕ್ಕೂ ಒಮ್ಮೊಮ್ಮೆ ನೋವಾಗುವುದಾದರೂ ಅದನ್ನು ಯಾರ ಎದುರಿಗೂ ತೋರಿಸಿಕೊಳ್ಳುತ್ತಿರಲಿಲ್ಲ.

ತನ್ನ ಮಕ್ಕಳ ಮೇಲೂ ಆಕೆಗೆ ತುಂಬಾ ಪ್ರೀತಿ ಇದ್ದಿತಾದರೂ, ಒಂದು ದಿನವಾದರೂ ಸ್ವಾತಂತ್ರ್ಯ ವಹಿಸಿ ಅವರಿಗೆ, ಹೀಗೆ ಮಾಡಬೇಕು, ಇದು ಮಾಡಬೇಕು ಎಂದು ಹೇಳಿದವಳಲ್ಲ. ಗಂಡು ಮಕ್ಕಳ ವಿಷಯದಲ್ಲಿ ಆಕೆ ತನ್ನೆಲ್ಲ ಬಯಕೆಗಳನ್ನು ತುಳಿದು, ಗಂಡನ ಇಚ್ಛೆಗೇ ತಲೆಬಾಗಿದ್ದರೂ, ಮಗಳ ವಿಷಯದಲ್ಲಿ ಮಾತ್ರ ಒಮ್ಮೊಮ್ಮೆ ಎಷ್ಟು ಬೇಡವೆಂದರೂ ಆಕೆಯ ಹೃದಯದಲ್ಲಿ ಬಯಕೆ ಕಿಡಿಗೆದರುವುದು. ತನಗೆ ತಿಳಿದಂತೆ ಮಗಳಿಗೆ ಅಲಂಕಾರ ಮಾಡಬೇಕು, ತನಗೆ ತೃಪ್ತಿಯಾಗುವ ಶೃಂಗಾರ ಮಾಡಬೇಕು ಎನಿಸುವುದು. ಆದರೆ ಅಲ್ಲೂ ಹೆದರಿಕೆಯೇ. ಗಂಡ ಒಪ್ಪಿಯಾನೋ ಇಲ್ಲವೋ, ಏನಂದಾರೋ ಎಂಬ ಭಯ. ಆದರೂ ಆ ಚಪಲ ತಡೆಯಲಾರದೆ, ಗಂಡ ಮನೆಯಲ್ಲಿಲ್ಲದಾಗ, ಒಂದು ಗಳಿಗೆ ಮಗಳಿಗೆ ತನಗೆ ಬೇಕಾದ ಹಾಗೆ ಜಡೆಹಾಕಿ, ಹೂ ಮುಡಿಸಿ ಸಂತೋಷಪಟ್ಟು ಮರುಗಳಿಗೆಯೇ ಬದಲಾಯಿಸುವಳು.

ಒಂದು ದಿನ ರತ್ನಮ್ಮನ ಈ ಮಾತೃಸಹಜವಾದ ಬಯಕೆಯೇ ಪ್ರಭಾವತಿಯ ಮಿದುಳಿನಲ್ಲಿ ಜ್ವಾಲಾಮುಖಿ ಆಸ್ಫೋಟನವಾಗಲು ಕಾರಣವಾಯಿತು.

ಆಗ ಮಲ್ಲಿಗೆ ಮೊಗ್ಗಿನ ಕಾಲ. ಆ ದಿನ ಸಂಜೆ ಪ್ರಭಾವತಿಯ ವಯಸ್ಸಿನ ನೆರೆಮನೆಯ ಹುಡುಗಿ, ಮೊಗ್ಗಿನ ಜಡೆ ಹಾಕಿಕೊಂಡು, ಸೀರೆ ಉಟ್ಟು ತನ್ನ ಅಲಂಕಾರವನ್ನು ತೋರಿಸಲು ಇವರ ಮನೆಗೆ ಬಂದಿತ್ತು. ಅದನ್ನು ನೋಡಿದ ಪ್ರಭಾವತಿ "ಅಮ್ಮಾ, ನನಗೂ ಹಾಗೇ ಜಡೆ ಹಾಕೇ" ಎಂದು ಕೇಳಿದಳು. ರತ್ನಮ್ಮನಿಗೂ ತನ್ನ ಮಗಳನ್ನು ಹಾಗೆ ಅಲಂಕಾರ ಮಾಡಿ ನೋಡಬೇಕು ಎನಿಸಿತು. ಮನೆಯ ಮುಂದಿನ ತೋಟದ ಬಳ್ಳಿಯಲ್ಲಿ ರಾಸಿರಾಸಿಯಾಗಿ ಅರಳಿದ್ದ ದುಂಡು ಮಲ್ಲಿಗೆಯ ಮೊಗ್ಗು ಆ ಬಯಕೆಗೆ ಗಾಳಿ ಬೀಸಿತು.

ಮರುದಿನ ಸಂಜೆ ರತ್ನಮ್ಮ ಮಗಳ ಚೋಟುದ್ದದ ಕೂದಲಿಗೆ ತನ್ನ ಚೌಲಿಯನ್ನು ಸೇರಿಸಿ, ಮೊಗ್ಗಿನ ಜಡೆ ಹೆಣೆದು, ತನ್ನ ಸೀರೆಯನ್ನೇ ಕಚ್ಚೆಪಟ್ಟು ಉಡಿಸಿ, ತನ್ನ ಒಡವೆಗಳನ್ನು ಹಾಕಿ ಸಿಂಗರಿಸಿದಳು. ಅಲಂಕಾರ ಮಾಡಿಕೊಂಡ ಪ್ರಭಾವತಿ, ಗರಿ ಬಿಚ್ಚಿದ ನವಿಲಿನಂತೆ, ಹಿಗ್ಗಿನಿಂದ ಓಡಾಡುವ ದೀಪದ ಕುಡಿ ಯಂತೆ ಕುಣಿದಾಡುವುದನ್ನು ನೋಡಿ, ಆಕೆಯ ಎದೆ ತುಂಬಿ ಬಂತು. ಮಗಳ ಹಿಗ್ಗು ಆಕೆಗೆ ತನ್ನ ಬಾಲ್ಯವನ್ನೂ ನೆನಪಿಗೆ ತಂದಿತು. ತನ್ನ ಆನಂದವನ್ನು ಗಂಡನೊಂದಿಗೆ ಪಾಲುಮಾಡಿಕೊಳ್ಳಬೇಕೆನಿಸಿತಾದರೂ, ಇದು ಅವರಿಗೆ ಸರಿ ಹೋಗದಿರಬಹುದು ಎನಿಸಿ, ಆದಷ್ಟು ಬೇಗ ಅದೆಲ್ಲವನ್ನು ತೆಗೆಯಬೇಕು ಎಂದು ಕೊಂಡಳು. ಆದರೆ ಅದನ್ನು ಬಿಚ್ಚಲು ಪ್ರಭಾವತಿಯೇ ಒಪ್ಪಲಿಲ್ಲ.

"ಪಪ್ಪ ಬೈಯುತ್ತಾರೆ ತೆಗೆದುಬಿಡಮ್ಮ" ಎಂದು ಮಗಳನ್ನು ಬೇಡಿದರು ರತ್ನಮ್ಮ.

"ಊಹೂ" ಪ್ರಭಾವತಿ ರಾಗ ತೆಗೆದು ತಲೆಯಲ್ಲಾಡಿಸಿದಳು.

"ಹಾಗೆಲ್ಲಾ ಹಟ ಮಾಡಬಾರದು ಪಬ್ಬಿ. ಬಿಚ್ಚಿಬಿಡು ಕಂದಾ. ಇನ್ನೊಂದು ದಿನ ಮತ್ತೆ ಹೀಗೇ ಜಡೆ ಹೆಣೆಯುತ್ತೇನೆ. ಮಮ್ಮಿ ಹೇಳಿದ ಮಾತು ಕೇಳೋಲ್ಲವೇ ಚಿನ್ನಾ"

"ಊಹೂ. ಇದು ಹೀಗೇ ಇರಲಿ."

"ನಾನು ಹೇಳಿದ ಹಾಗೆ ಕೇಳ್ತೀಯೋ ಇಲ್ಲವೋ ಪಬ್ಬಿ. ಬಾ ಇಲ್ಲಿ."

ಮಗಳನ್ನು ಹತ್ತಿರ ಎಳೆದುಕೊಳ್ಳಹೋದರು ರತ್ನಮ್ಮ. ಆದರೆ ಪ್ರಭಾ ವತಿ ಅವರ ಕೈಗೆ ಸಿಗದೆ, ಚಿಟ್ಟೆಯಂತೆ ದೂರ ಚಿಮ್ಮಿದಳು.

"ನೀನು ಹೀಗೆಲ್ಲಾ ಮಾಡಿದರೆ ನನಗೆ ಸಿಟ್ಟು ಬರುತ್ತೆ ಪಬ್ಬಿ"

ಕೊಂಚ ಕಟುವಾಗಿಯೇ ಆ ಮಾತನಾಡಿದರು ರತ್ನಮ್ಮ. ಆ ಮಾತು

ಕೇಳುತ್ತಿದ್ದ ಹಾಗೇ ಎಂದೂ ತಾಯಿಯಿಂದ ಗದರಿಸಿಕೊಳ್ಳದಿದ್ದ ಪ್ರಭಾವತಿಯ ಕಣ್ಣಲ್ಲಿ ನೀರಾಡಿತು. ಮಾತನಾಡದೆ, ಜಡೆಯನ್ನು ಬಿಚ್ಚಿಸಿಕೊಳ್ಳಲಾರದೆ, ಬಿಕ್ಕಿ ಬಿಕ್ಕಿ ಅಳುತ್ತಾ ತಾಯಿಯ ಮುಂದೆ ಬಂದು ಕುಳಿತಳು, ಕಟುಕನಿದಿರು ತಲೆ ಬಾಗಿಸಿದ ಕುರಿಯಂತೆ.

ಅದನ್ನು ನೋಡಿ ರತ್ನಮ್ಮನ ಕರುಳು ಹಿಸುಕಿದಂತಾಯಿತು. ಜಡೆ ಬಿಚ್ಚಲು ಕೈ ಏಳಲಿಲ್ಲ.

"ಇರಲಿ ಬಿಡು ಚಿನ್ನಾ, ಜಡೆ ಬಿಚ್ಚುವುದಿಲ್ಲ. ಇಷ್ಟಕ್ಕೇ ಕಣ್ಣೀರು ಹಾಕುತ್ತಾರೆಯೇ!"

ಎಂದು ಸೆರಗಿನ ತುದಿಯಿಂದ, ಕಂಬನಿಯೂರುತ್ತಿದ್ದ ಅವಳ ಕಣ್ಣ ಕುಡಿಯನ್ನು ಒರೆಸಿದರು. ಆದರೂ ಗಂಡ ಏನನ್ನುವನೋ ಎಂಬ ಅಳುಕೇನೂ ಅವರಿಗೆ ತಪ್ಪಿರಲಿಲ್ಲ.

ತಾಯಿ ಜಡೆ ಬಿಚ್ಚುವುದಿಲ್ಲವೆಂದರಿತು ಪ್ರಭಾವತಿಗೆ ತುಂಬಾ ಸಂತೋಷವಾಗಿ, ಒಂದು ಗಳಿಗೆಯ ಹಿಂದೆ ಮಂಕಾಗಿದ್ದ ಮುಖ, ಕುಡಿ ದೊಡ್ಡದು ಮಾಡಿದ ದೀಪದಂತೆ ಹರ್ಷದ ಕಾಂತಿಯಿಂದ ಹೊಳೆಯಿತು. ಆ ಸಂತೋಷದ ವೇಗದಲ್ಲೇ ತಾಯನ್ನು ಅಪ್ಪಿ ಮುತ್ತಿಟ್ಟಳು. ಆ ನಗುವಿಗಾಗಿ, ಬೇಕಾದರೆ ಜೀವವನ್ನೇ ಒಪ್ಪಿಸಬಹುದು ಎನಿಸಿತು ರತ್ನಮ್ಮನಿಗೆ. ಎದೆಯಲ್ಲಿ ಚಿಮ್ಮಿಬಂದ ಅಕ್ಕರೆಯಲ್ಲಿ ಮಗಳನ್ನು ತಬ್ಬಿ ಮುತ್ತಿಟ್ಟರು.

ತಾಯಿ ಮಕ್ಕಳ ಹರ್ಷೋತ್ಸವ ನಡೆದಿರುವಾಗಲೇ ಸಂಜೀವರಾಯರು ಮನೆಗೆ ಬಂದರು. ಬಾಗಿಲಲ್ಲಿ ಅವರ ಕಾರು ನಿಂತ ಸದ್ದು ಕೇಳಿದ ಕೂಡಲೇ, ತಾಯ ತೋಳಲ್ಲಿದ್ದ ಪ್ರಭಾವತಿ, ತಂದೆಗೂ ತನ್ನ ಅಲಂಕಾರವನ್ನು ತೋರಿಸಲೆಂದು, ತಾಯಿ ತಡೆಯುತ್ತಿದ್ದರೂ ಕೇಳದೆ, 'ಪಪ್ಪಾ....ಪಪ್ಪಾ' ಎಂದು ಕೂಗುತ್ತಾ ತಲೆಬಾಗಿಲಿಗೆ ಚಿಮ್ಮಿದಳು.

'ಹಲೋ ಡಾರ್ಲಿಂಗ್' ಎಂದು ಎಂದಿನಂತೆ ಉತ್ಸಾಹದಿಂದ ಮಗಳನ್ನು ಸ್ವಾಗತಿಸಿದ ಸಂಜೀವರಾಯರ ಮುಖದ ಮೇಲಿನ ನಗು, ಅವಳ ಅಲಂಕಾರವನ್ನು ಕಂಡು ಅಲ್ಲೇ ಮರೆಯಾಗಿ ಮುಖ ಬಿಗಿದುಕೊಂಡಿತು. ತನ್ನ ಅಲಂಕಾರವನ್ನು ಕಂಡ ತಂದೆಗೆ ಸಂತೋಷವಾಗಲಿಲ್ಲವೆಂದು ಯಾರೂ ಹೇಳದೆಯೇ, ಅವರ ಮುಖವ್ಯತ್ಯಾಸವನ್ನು ಕಂಡೇ ಪ್ರಭಾವತಿಗೆ ಅರಿವಾಯಿತು. ಎಂತಲೇ ಎಂದಿನಂತೆ ತಂದೆಯ ತೋಳಿಗೆ ಹಾರದೆ, ಏನು ಮಾಡಬೇಕೆಂದು ತೋಚದೆ,

ಏಕೋ ಹೆದರಿ ಅನಿಶ್ಚಯತೆಯ ತೊಟ್ಟಿಲಲ್ಲಿ ತೂಗುತ್ತಾ ನಿಂತಲ್ಲಿಯೇ ನಿಂತಳು. ಅವಳ ಮುಖದ ಮೇಲೆ ಬೆಳದಿಂಗಳಿನಂತೆ ಹೊಳೆಯುತ್ತಿದ್ದ ನಗು ಹಾಗೇ ಬಾಡಿಹೋಯಿತು. ಮಗಳ ಹಿಂದೆಯೇ ನಡುಬಾಗಿಲವರೆಗೂ ಬಂದ ರತ್ನಮ್ಮ ಅದನ್ನು ನೋಡಿ, ಬಾಗಿಲ ಹಿಂದೆ ಸರಿದು ನಿಂತರು. ಪ್ರಭಾವತಿಯ ಮುಖದ ಮೇಲಿನ ನಗೆಯು ಕೊಲೆಯಾದುದನ್ನು ಕಂಡು ಅವರ ಹೃದಯ ತಳಮಳಿಸುತ್ತಿತ್ತು.

"ಯಾರು ಈ ಅಲಂಕಾರ ಮಾಡಿದವರು?"

ಸಿಟ್ಟು ತುಳುಕುವ ಸ್ವರದಲ್ಲಿ ಕೇಳಿದರು ಸಂಜೀವರಾಯರು. ಅವರ ಸಿಟ್ಟಿನ ಸ್ವರ ಕೇಳಿ ಪ್ರಭಾವತಿಯ ನಾಲಗೆಯಲ್ಲಿ ದ್ರವ ಆರಿಹೋಗಿ ಮಾತೇ ಹೊರಡಲಿಲ್ಲ.

"ಈ ಅಲಂಕಾರ ಯಾರು ಮಾಡಿದ್ದು ಪಬ್ಬಿ" ಮತ್ತಷ್ಟು ಚುರುಕಾಗಿ ಕೇಳಿದರು ರಾಯರು.

"ಮಮ್ಮಿ" ಹೆಗಹೆದರುತ್ತಲೇ ಉತ್ತರ ಕೊಟ್ಟಳು ಪ್ರಭಾ. ಮಗಳ ಉತ್ತರದಿಂದ ರಾಯರ ಸಿಟ್ಟು ಮತ್ತಷ್ಟು ಹೆಚ್ಚಾಯಿತು. ಆ ಸಿಟ್ಟಿನಲ್ಲೇ ಹೆಂಡತಿಯನ್ನು ಕೂಗಿದರು.

"ರತ್ನಾ....ರತ್ನಾ...."

ಗಂಡನ ಕೂಗನ್ನು ಕೇಳಿ ರತ್ನಮ್ಮ ಬಾಗಿಲ ಮರೆಯಿಂದ ಮುಖ ತೋರಿಸಿ "ಏನು?" ಎಂದು ಕೇಳಿದರು.

"ಏನು? ಇದೇನಿದು?"

"ಯಾವುದು?"

"ಈ ಅಲಂಕಾರ! ಮಹರ್ನವಮಿ ಕುದುರೆಗೆ ಮಾಡುವ ಅಲಂಕಾರ ಮಾಡಿದ್ದೀಯಲ್ಲ – ಇದನ್ನೇ ಇದೇನು ಅಂತ ಕೇಳಿದ್ದು. ಎಷ್ಟು ಸಾವಿರ ಸಲ ಹೇಳಿಲ್ಲ – ಇಂಥ ಕಾಡು ಅಲಂಕಾರ ಮಾಡಬೇಡ ಅಂತ," ಸೆಟೆದು ನಿಂತು ಅಧಿಕಾರವಾಣಿಯಿಂದ ಕೇಳಿದರು ರಾಯರು.

"ಏನೋ – ಮೊಗ್ಗಿನ ಜಡೆ ಹಾಕಿ ನೋಡಬೇಕು ಎನಿಸಿತು. ಹಾಕಿದೆ!" ಮೃದುವಾದ ಧ್ವನಿಯಲ್ಲೇ ರತ್ನಮ್ಮ ಉತ್ತರ ಕೊಟ್ಟರು.

"ಹಾಕಿದೆ. ಹಾಕದೆ ಏನು ಮಾಡುತ್ತೀಯ. ನಿನಗೇ ಬಿಟ್ಟರೆ ಏನು ಬೇಕಾದ್ದು ಮಾಡುತ್ತೀಯ."

"ಅಷ್ಟೇಕೆ ಸಿಟ್ಟಾಗುತ್ತೀರ. ಮೊಗ್ಗಿನ ಜಡೆ ಚೆನ್ನಾಗಿಲ್ಲವೆ ?"

"ಇದೆ, ಇದೆ. ಬಹಳ ಚೆನ್ನಾಗಿದೆ. ತಿಗುಳರ ಹೆಣದ ಹಾಗಿದೆ."

ಮಗಳ ಅಲಂಕಾರವನ್ನು ಹೆಣದ ಅಲಂಕಾರಕ್ಕೆ ಹೋಲಿಸುವ ಅಶುಭ ಮಾತನ್ನು ಕೇಳಿ, ಎಂದೂ ಗಂಡನಿಗೆ ಎದುರಾಡದಿದ್ದ ರತ್ನಮ್ಮನಿಗೂ ತಡೆಯುವುದಾಗಲಿಲ್ಲ.

"ಬೇಕಾದರೆ ಜಡೆ ಬಿಚ್ಚಿಬಿಡಿ. ಅಂಥ ಹಾಳು ಮಾತಾಡಬೇಡಿ."

"ತಲೆಯೆಲ್ಲಾ ಹರಟಬೇಡ. ನಿನಗೆ ಯಾರು ಈ ಅಧಿಕ ಪ್ರಸಂಗ ಮಾಡು ಎಂದು ಹೇಳಿದವರು ?"

"ಯಾರು ಹೇಳುವುದೇನು. ನಾನೇ ಮಾಡಿದೆ. ನನಗೆ ಅಷ್ಟೂ ಅಧಿಕಾರವಿಲ್ಲವೆ ?"

"ಏನು ಅಧಿಕಾರ ನಿನಗೆ ?"

"ಪ್ರಭಾ ನಿಮ್ಮ ಮಗಳೇ ಅಲ್ಲ, ನನ್ನ ಮಗಳೂ."

"ನಿನ್ನ ಮಗಳು. ಅದವಳ ದುರದೃಷ್ಟ."

"ಅದೃಷ್ಟವೋ ದುರದೃಷ್ಟವೋ, ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗೆ ಬೇಕಾದಹಾಗೆ ಅಲಂಕಾರ ಮಾಡುವ ಅಧಿಕಾರ ನನಗೂ ಇದೆ."

ಬಹು ಹೊತ್ತು ಒತ್ತಿ ಹಿಡಿದ ಸ್ಪ್ರಿಂಗು, ಯಾವುದೋ ಒಂದು ದುರ್ಬಲತೆಯ ವೇಳೆಯಲ್ಲಿ ಛಟಾರನೆ ಸಿಡಿಯುವಂತೆ, ಬಹುದಿನಗಳಿಂದ ಸಹನೆಯ ಹಿಡಿಯಲ್ಲಿದ್ದ ಕ್ರೋಧ ಮೊದಲ ಬಾರಿಗೆ ಚಿಮ್ಮಿತು. ಎಂದೂ ಎದುರು ಮಾತನ್ನಾಡದ ಹೆಂಡತಿ, ಅಂದು ಅಷ್ಟು ದೂರ ಮಾತು ಬೆಳಸಿದುದನ್ನು ಕಂಡು, ಅಧಿಕಾರ ಮಾಡಿ ಅಭ್ಯಾಸವಾದ ರಾಯರಿಗೂ ತಾಳ್ಮೆ ತಪ್ಪಿತು.

"ಮಾಡಬಾರದ ಕೆಲಸ ಮಾಡಿ ಮತ್ತೆ ನಾಲಗೆ ಬೆಳಸುತ್ತೀಯಾ ಕತ್ತೆ." ಎಂದ ಹೆಂಡತಿಯತ್ತ ನುಗ್ಗಿ, ಕೆನ್ನೆಯ ಮೇಲೆ ಛಟಾರನೆ ಹೊಡೆದರು.

ಅದುವರೆಗೂ ಅವರಿಬ್ಬರ ವಾಗ್ವಾದವನ್ನು ಕೇಳಿ ಬೆದರಿ ನಿಂತ ಪ್ರಭಾ, ತಾಯಿಗೆ ಏಟು ಬಿದ್ದುದನ್ನು ಕಂಡವಳೇ–

"ಮಮ್ಮೀ ೯ ೯" ಎಂದು ಚೀರಿ, ತಾಯಿಯತ್ತ ಹಾರಿ ತಾಯತೊಡೆಗಳನ್ನು ತಬ್ಬಿ ಅಳುತ್ತಾ ನಿಂತಳು. ತನ್ನನ್ನು ತಬ್ಬಿ ನಿಂತ ಮಗಳನ್ನು ಎತ್ತಿ ಎದೆ

ಗಪ್ಪಿಕೊಂಡು ರತ್ನಮ್ಮ ಒಳಗೆ ಹೋದರು. ಒಳಗೆ ಹೋಗುವವರೆಗೂ ಹೇಗೋ ಆಕೆಯ ದುಃಖ ತಡೆದು ನಿಂತಿತ್ತು. ಒಳಗೆ ಹೋದವರೇ ನೆಲದ ಮೇಲೆ ಕುಸಿದು ಅಳಲಾಂಭಿಸಿದರು. ಪ್ರಭಾವತಿಗೆ ಏನು ತೋಚಿತೋ ಏನೋ ಜಡೆಯ ಮಲ್ಲಿಗೆ ಮೊಗ್ಗನ್ನೆಲ್ಲಾ ಪರಪರ ಕಿತ್ತು, ಓಡಿಹೋಗಿ, ಹಾಲಿನಲ್ಲಿ ನಿಂತ ತಂದೆಯ ಇದಿರು ಹಾಕಿ, ಒಳಗೆ ಬಂದು ತಾಯಿಯ ಎದೆಯಲ್ಲಿ ಮುಖ ಮರೆಸಿ–

"ಮಮ್ಮೀ....ಮಮ್ಮಿ....ಅಳಬೇಡ ಮಮ್ಮೀ...." ಎನ್ನುತ್ತಾ ತಾನೂ ಅಳಲಾರಂಭಿಸಿದಳು.

ಮಗಳ ಅಕ್ಕರೆಯನ್ನು ಕಂಡು ತಾಯ ದುಃಖ ಮತ್ತಷ್ಟು ಹೆಚ್ಚಿತು. ಸುರಿವ ಮಳೆ, ಹೊಯ್ಯುವ ಬಿರುಗಾಳಿಯಲ್ಲಿ ಒಂದನ್ನೊಂದು ಅಪ್ಪಿದ ತಾಯಿ ಹಕ್ಕಿ–ಮರಿಗಳಂತಿದ್ದರು ಆ ತಾಯಿ ಮಕ್ಕಳು.

ಕೊಂಚ ಹೊತ್ತಾದ ಮೇಲೆ ಇಬ್ಬರ ದುಃಖದ ಉಕ್ಕೂ ಇಳಿದು ಸಮಾಧಾನಕ್ಕೆ ಬಂದ ಮೇಲೆ, ಇನ್ನೂ ಬಿಕ್ಕುತ್ತಲೇ ಪ್ರಭಾ ತಾಯನ್ನು ಕೇಳಿದಳು.

"ಪಪ್ಪಾ ಏಕೆ ನಿನ್ನ ಹೊಡೆದದ್ದು ಮಮ್ಮಿ? ನನಗೆ ಜಡೆ ಹಾಕಿದ್ದಕ್ಕೆ?"

"ಅಲ್ಲ ಪಬ್ಬಿ."

"ಮತ್ತೆ ಯಾಕೆ ಮಮ್ಮಿ?"

"ನಾನು ಹೆಂಗಸಾಗಿ ಹುಟ್ಟಿದ್ದ ಪಾಪಕ್ಕಾಗಿ."

ಆ ಮಾತಿನ ಅರ್ಥ ಅಂದು ಪ್ರಭಾವತಿಗೆ ಆಗಲಿಲ್ಲ. ಸುಮ್ಮನೆ ಕಣ್ಣರಳಿಸಿ ತಾಯಿಯಾಡುವುದನ್ನು ಕೇಳಿದಳು.

"ಹೆಣ್ಣಾಗಿ ಹುಟ್ಟಬಾರದು ಪ್ರಭಾ, ಏಳೇಳು ಜನ್ಮಕ್ಕೂ ಈ ಹೆಣ್ಣು ಜನ್ಮ ಬೇಡ. ನನ್ನ ವೈರಿಗೂ ಬೇಡ."

ಅರ್ಥವಾಗದಿದ್ದರೂ, ಮರುಮಾತನಾಡದೆ ಆ ಮಾತನ್ನಾಲಿಸಿದಳು ಪ್ರಭಾವತಿ. ತಾಯಿಯ ಹೃದಯದಾಳದಿಂದ, ನಿಟ್ಟುಸಿರಿನ ಕುದಿಯೊಡನೆ ಹೊರಬಂದ ಆ ಮಾತು, ಪ್ರಭಾವತಿಯ ಹೃದಯದಲ್ಲಿ ಅಚ್ಚಳಿಯದೆ ಉಳಿಯಿತು....

ಅಂದಿನಿಂದ ಇಂದಿನವರೆಗೆ ಅವಳ ಬಾಳಿನಲ್ಲಿ ಎಷ್ಟೋ ಘಟನೆಗಳಾಗಿ ಹೋಗಿವೆ. ಎಷ್ಟೋ ನೆನಪಿನಲ್ಲಿ ಮನೆಮಾಡಿದ್ದರೂ, ಎಷ್ಟೋ ನೆನಪುಳ

ಯದೆ ಅಳಿದು ಹೋಗಿವೆ. ಆದರೆ ಇದು ಮಾತ್ರ ನೆನಪಿನಿಂದ ಮರೆಯಾಗಿಲ್ಲ. ಅಂದಿನ ಘಟನೆ, ಅಂದು ತಾಯಿಯಾಡಿದ ಮಾತು, ಮತ್ತೆ ಮತ್ತೆ ಹತ್ತಾರು ಬಾರಿ ಅವಳ ನೆನಪಿನಲ್ಲಿ ಜಾಗ್ರತವಾಗಿ ಹೊಸತನವನ್ನು ತಳೆದಿದೆ. ಅಂದು ತಾಯಿಯಾಡಿದ ಮಾತನ್ನೇ ಅವಳೂ ತನ್ನ ಜೀವನದಲ್ಲಿ ಎಷ್ಟೋ ಬಾರಿ ಅಂದುಕೊಂಡಿದ್ದಾಳೆ–

"ಹೆಣ್ಣಾಗಿ ಹುಟ್ಟಬಾರದು, ಏಳೇಳು ಜನ್ಮಕ್ಕೂ ಹೆಣ್ಣಾಗಿ ಹುಟ್ಟಬಾರದು. ಈ ಹೆಣ್ಣು ಜನ್ಮ ತನ್ನ ವೈರಿಗೂ ಬೇಡ"

ಎಷ್ಟು ನಿಜ ಆ ಮಾತು!

ಅಂದು ತಾಯಿಯ ಹೃದಯಾಂತರಾಳದ ವ್ಯಥೆಯ ನಿಟ್ಟುಸಿರಿನ ಮೂಸೆಯಲ್ಲಿ ಮೂಡಿಬಂದ ಆ ಮಾತು ತನ್ನ ಬಾಳಿನ ಗೀತೆಯ ಪಲ್ಲವಿಯಾಗಬಹುದೆಂದು ಪ್ರಭಾ ಕನಸು ಮನಸಿನಲ್ಲೂ ಊಹಿಸಿರಲಿಲ್ಲ.

ಊಹಿಸಿರಲಿಲ್ಲ, ನಿಜ. ಆದರೆ ಎಷ್ಟು ನಿಜ ಆ ಮಾತು!

೨

ಅಂದು ತಾಯಿಯ ಮಾತಿನ ನಿಜವಾದ ಅರ್ಥ ಪ್ರಭಾವತಿಗೆ ಆಗಲಿಲ್ಲ.

ಆದರೆ ಬೆಳೆಬೆಳೆಯುತ್ತಾ ಆ ಮಾತು ಎಷ್ಟು ಸತ್ಯ ಎಂಬುದು ಅರಿವಾಗತೊಡಗಿತು. ಮೊಟ್ಟಮೊದಲಬಾರಿ, ಏನಾದರೂ ಹೆಣ್ಣು ಹೆಣ್ಣೇ, ಗಂಡು ಗಂಡೇ, ಹೆಣ್ಣಿಗಿಂತ ಗಂಡು ಮೇಲು ಎನ್ನುವ ಮನೋಭಾವದ ಅರಿವನ್ನುಂಟು ಮಾಡಿಕೊಟ್ಟವರೂ ಸಂಜೀವರಾಯರೇ. ಅವಳ ತಮ್ಮ ಮೋಹನ ಅದಕ್ಕೆ ಕಾರಣವಾದ.

ವಯಸ್ಸು ಬಂದ ಹಾಗೆ ಪ್ರಭಾವತಿಗೆ, ತಾನು ಹೆಣ್ಣಾದರೂ ಗಂಡು ಹುಡುಗರು ಮಾಡಿದ ಹಾಗೆ ಮಾಡಬೇಕೆಂಬ ಬಯಕೆ. ಹಾಡು ಕಲಿಯುವುದರಲ್ಲಾಗಲಿ, ಕಸೂತಿ ಹಾಕುವುದರಲ್ಲಾಗಲಿ ಅವಳಿಗೆ ಮನಸ್ಸಿಲ್ಲ. ಅಕ್ಕಪಕ್ಕದ ಮನೆಯ ಹೆಣ್ಣುಹುಡುಗಿಯರೊಂದಿಗೆ ಆಟವಾಡಲೂ ಹೋಗುತ್ತಿರಲಿಲ್ಲ. ತನ್ನ ತಮ್ಮಂದಿರ ಹಾಗೆ ತಾನೂ ಚಂಡಾಟವಾಡಬೇಕು, ಕ್ರಿಕೆಟ್ ಆಡಬೇಕು; ಅವರೊಂದಿಗೆ ಮರಕೋತಿ ಆಟದಲ್ಲಿ ಭಾಗವಹಿಸಬೇಕು ಎಂದು ಬಯಸುವಳು. ಅವರ ಹಾಗೇ ನಾಯಿಯನ್ನು ಅಟ್ಟಿಸಿಕೊಂಡು ಓಡುವಳು, ಹಾರುವಳು, ನೆಗೆಯುವಳು. ಅವರು ಅವಳನ್ನು ತಮ್ಮೊಂದಿಗೆ ಆಟದಲ್ಲಿ

ಸೇರಿಸಿಕೊಳ್ಳದಿದ್ದರೆ ರಂಪ ಮಾಡುವಳು. ಎಷ್ಟೋ ಬಾರಿ ಅವಳು ಹಾಗೆ ಹಟ ಮಾಡಿದಾಗ, ರತ್ನಮ್ಮ—

"ಗಂಡುಹುಡುಗರು ಆಟಕ್ಕೆ ಸೇರಿಸಿಕೊಳ್ಳಲಿಲ್ಲ ಎಂದು ರಂಪ ಮಾಡಿದರೆ ಹೇಗೆ ಪಬ್ಬಿ. ನೀನು ಹೆಣ್ಣುಹುಡುಗಿಯರ ಜೊತೆ ಆಡಿಕೊ, ನಿನ್ನ ಹಾಗೆ ಅವರೂ, ಹೆಣ್ಣುಹುಡುಗೀರ ಜತೇಲಿ ಆಟಕ್ಕೆ ಬರ್ತೀವೀಂತ ಹಟ ಮಾಡ್ತಾರೆಯೇ? ಹಾಗೆಲ್ಲಾ ಮಾಡಬಾರದು" ಎಂದು ಸಮಾಧಾನ ಹೇಳುವರು. ಆದರೆ ಅವರ ಸಮಾಧಾನವಾಗಲಿ, ಬುದ್ಧಿವಾದವಾಗಲೀ ಅವಳಿಗೆ ಹಿಡಿಯುತ್ತಿಗಲಿಲ್ಲ.

"ಅವರು ಆಡೋ ಆಟ ನಾನು ಯಾಕೆ ಆಡಬಾರದು?" ಎಂದು ಮರು ಸವಾಲು ಹಾಕುವಳು.

"ಏಕೆ ಅಂದರೆ ನಾನೇನು ಹೇಳಲಿ? ಎಷ್ಟಾದರೂ ಅವರು ಗಂಡು ಹುಡುಗರು, ನೀನು ಹೆಣ್ಣು ಹುಡುಗಿ."

"ಆದ್ರೇನಾಯ್ತು. ಅವರಿಗೇನಾದರೂ ಕೊಂಬಿದೆಯೇನು?"

ಆ ಮಾತಿಗೆ ಅವರೇನು ಹೇಳಬೇಕು?

"ಹುಚ್ಚು ಹುಡುಗಿ. ನಿನಗೆ ಯಾರು ಸಮಾಧಾನ ಹೇಳಲು ಸಾಧ್ಯ. ನಾಳೆ ನಿನಗೇ ತಿಳಿಯುತ್ತೆ" ಎಂದು ನಕ್ಕು ಸುಮ್ಮನಾಗುವರು.

ಚಿಕ್ಕಂದಿನಿಂದಲೇ ಅವಳಿಗೆ ಮನೆಗೆಲಸಗಳನ್ನೆಲ್ಲಾ ಕಲಿಸಿ, ಅವಳನ್ನು ಒಳ್ಳೆ ಗೃಹಿಣಿಯನ್ನಾಗಿ ಮಾಡಬೇಕೆಂದು ರತ್ನಮ್ಮನವರ ಬಯಕೆ.

"ಆ ಹುಡುಗರೊಂದಿಗೆ ಆಟವೇನು? ಒಳ್ಳೆ ತಿಂಡಿ ಮಾಡಲಿಕ್ಕೆ ಕಲಿಸ್ತೀನಿ, ಬಾ" ಎನ್ನುವರು.

"ಊಹೂ. ಅದು ನನಗೇನೂ ಬೇಡ."

"ಏಕೆ?"

"ಮೋಹನ, ಚಂದ್ರೂನು ಕಲ್ತುಕೋತಾರೇನು?"

"ಇಲ್ಲ."

"ಅದಕ್ಕೇ ನನಗೂ ಬೇಡ."

"ಹಾಗಂದರೆ—ಅವರು ಗಂಡು ಹುಡುಗರು. ಅಡಿಗೆ ಕೆಲಸ ಕಲಿತು ಅವರೇನು ಮಾಡಬೇಕು?"

"ಯಾಕೆ ಕಲೀಬಾರ್ದು?"

"ಅವರು ಗಂಡಸರು. ದೊಡ್ಡೋರಾದ ಮೇಲೆ ಕೆಲಸಮಾಡಿ ಪಪ್ಪಾನ ಹಾಗೆ ದುಡ್ಡು ತರ್ತಾರೆ. ನೀನು ನನ್ನ ಹಾಗೇ ಅಡಿಗೆ ಮಾಡೋದನ್ನ ಕಲೀಬೇಕು."

"ಏನೂ ಬೇಡ."

"ಹಾಗಾದರೆ ನೀನೇನು ಮಾಡ್ತೀಯ?"

"ನಾನೂ ದೊಡ್ಡೋಳಾದಮೇಲೆ ಅವರ ಹಾಗೇ ದುಡೀತೀನಿ. ಕೈ ತುಂಬ ದುಡ್ಡು ತರ್ತೀನಿ."

"ಹೆಣ್ಣಾಗಿ ಹುಟ್ಟಿದ ಮೇಲೆ ಹಾಗಾಗೊಲ್ಲ ಚಿನ್ನಾ!"

"ನೀನು ಸುಳ್ಳು ಹೇಳ್ತೀಯ. ಯಾಕಾಗೊಲ್ಲ, ಪಪ್ಪಾ ಬರ್ಲಿ ಕೇಳ್ತೀನಿ"

ಎಂದು ತಂದೆ ಬಂದ ಕೂಡಲೇ ತಾಯಿಯೊಂದಿಗೆ ನಡೆದ ಸಂಭಾಷಣೆಯನ್ನು ಹೇಳಿ—

"ಪಪ್ಪಾ. ದೊಡ್ಡೋಳಾದ ಮೇಲೆ ನಾನೂ ದುಡ್ಡು ತರೋಕಾಗೋಲ್ವೆ ಪಪ್ಪಾ?" ಎಂದು ಕೇಳುವಳು.

"ಮುಂದೆ ಇದ್ದೇ ಇದೆ. ಈಗಾಗಲೇ ಈ ಹಾಳು ಹೊಲಸನ್ನೆಲ್ಲಾ ಏಕೆ ಅವಳ ತಲೇಲಿ ತುಂಬ್ತೀಯ. ನಿನ್ನ ಹಾಗೇ ಅಡಿಗೇ ಮನೇಲಿ ಬೇಯೋಕೆ ಹುಟ್ಟಿಲ್ಲ ಇವಳು." ಎಂದು ಸಂಜೀವರಾಯರು ಹೆಂಡತಿಯ ಮೇಲೆ ರೇಗಿ, ಮಗಳನ್ನು ಸಮಾಧಾನ ಮಾಡುವರು.

"ನನಗೂ ನನ್ನ ಮಗಳು ಅಡಿಗೇ ಮನೇಲಿ ಬೇಯಬೇಕು ಎಂಬ ಆಸೆಯಿಲ್ಲ. ಆದರೆ ಹೆಣ್ಣಾಗಿ ಹುಟ್ಟಿ, ಗಂಡಸರ ಹಾಗಿರಬೇಕು ಅಂದರೆ ಸಾಧ್ಯವೇ?"

"ಎಲ್ಲಾ ಸಾಧ್ಯ ಈ ಕಾಲದಲ್ಲಿ."

ಎಂದು ರಾಯರು ಮಗಳ ಪರ ವಹಿಸಿ ಮಾತನಾಡುವರು. ರತ್ನಮ್ಮ ಸುಮ್ಮನಾಗುವರು. ಪ್ರಭಾವತಿ ಗೆಲುವಿನ ಹೆಮ್ಮೆಯಿಂದ ತಾಯ ಮೊಗವನ್ನು ನೋಡಿ ಹೊರಗೆ ಓಡುವಳು.

ಹೀಗೇ ನಡೆದಿತ್ತು ಈ ಕಣ್ಣುಮುಚ್ಚಾಲೆಯಾಟ, ಆ ದಿನದವರೆಗೆ.

ಆ ದಿನ ರಾಯರೂ ಪ್ರಭಾವತಿಗೆ "ನೀನು ಹೆಣ್ಣು" ಎಂದು ಹೇಳಲೇಬೇಕಾಗಿ ಬಂದಿತು.

ಆ ದಿನ—

ತೋಟದ ಮಾಲಿ ಕರಿಯ ಮೋಹನನಿಗೆ ಕುಸ್ತಿ ಮಾಡುವುದರ ಪಟ್ಟುಗಳನ್ನು ಕಲಿಸುತ್ತಿದ್ದ. ಅದನ್ನು ನೋಡಿ ಎಂಟು ವರ್ಷ ವಯಸ್ಸಿನ ಪ್ರಭಾವತಿಗೆ ತಾನೂ ಏಕೆ ಅದನ್ನು ಕಲಿಯಬಾರದು ಎನಿಸಿತು. ಕುಸ್ತಿ ಕಲಿಯುವುದರಲ್ಲಿ ಮೋಹನ ತೋರಿಸುತ್ತಿದ್ದ ಉತ್ಸಾಹ, ಕರಿಯನನ್ನು ಬೀಳಿಸಿ, ಅವನ ಮೇಲೆ ನೆಗೆದು ಅವನು ಪಡುತ್ತಿದ್ದ ಆನಂದವನ್ನು ಕಂಡು ಅವಳಿಗೆ ತಾನೂ ಆ ಸಂತೋಷಪಡುವ ಉತ್ಸಾಹವಾಯಿತು.

"ಕರಿಯಾ, ನನಗೂ ಕುಸ್ತಿ ಹೇಳಿಕೊಡೋ" ಎಂದು ಕೇಳಿದಳು. ಕರಿಯು ಅವಳ ಪ್ರಶ್ನೆ ಕೇಳಿ ಏನು ಉತ್ತರ ಹೇಳಬೇಕೆಂದು ತಿಳಿಯದೆ ತಬ್ಬಿಬ್ಬಾದ. ಮೋಹನ ಮಾತ್ರ ಸುಮ್ಮನಿರದೆ—

"ಥತ್. ಹೆಂಗಸಿಗ್ಯಾಕೆ ಕುಸ್ತಿ?" ಎಂದ ತಾತ್ಸಾರವಾಗಿ, ತನ್ನ ತೊಡೆ ತೋಳುಗಳನ್ನು ಪಳಗಿದ ಪೈಲ್ವಾನನಂತೆ ಸವರಿಕೊಳ್ಳುತ್ತಾ. ತಾನು ಹೆಣ್ಣು ಹುಡುಗಿ ಎನ್ನುವುದು ಪ್ರಭಾವತಿಗೂ ಗೊತ್ತಾದರೂ ಮೋಹನ 'ಹೆಂಗಸು' ಎಂದು ಹೇಳಿದ ರೀತಿಯಲ್ಲಿ 'ಹೆಂಗಸು' ಎನ್ನುವ ಶಬ್ದವೇ ಅವಮಾನಸೂಚಕವಾದಂತೆ ತೋರಿ ಸಿಟ್ಟು ಬಂದಿತು.

"ನಿನ್ನ ಯಾರೂ ಕೇಳಲಿಲ್ಲ. ಭಾರಿ ಗಂಡಸು! ಸುಮ್ಮನಿರು. ಕರಿಯಾ–ನನಗೂ ಕಲಿಸ್ತೀಯೋ ಇಲ್ಲವೊ?"

"ಚಿಕ್ರಾಯ್ರು ಹೇಳಿದ್ದು ನಿಜ ಕಣ್ರವ್ವಾ. ಈ ಇದ್ಯ ಹೆಂಗಸ್ರು ಕಲಿಯೂದಲ್ಲ ನಿಮಗ್ಯಾಕ್ರವ್ವಾ ಇದು?"

"ಅದೆಲ್ಲಾ ಬೇಡ. ಈಗೇನು ಕಲಿಸ್ತೀಯೋ ಇಲ್ಲವೋ....?"

"ಸುಮ್ನೆ ನೋಡ್ತಾಇರ್ರಿ. ನಿಮಗ್ಯಾಕಿದು?"

"ಮತ್ತೆ ಅವನಿಗೆ ಯಾಕೆ ಕಲಿಸ್ತೀಯ?"

"ರಾಯರು ಕಲಿಸು ಅಂದವ್ರೆ, ಅದ್ಕೆ ಕಣ್ರವ್ವಾ." ಎಂದ ಕರಿಯ, ಈ ವಾಗ್ವಾದದಿಂದ ಸುಲಭವಾಗಿ ತಪ್ಪಿಸಿಕೊಳ್ಳುವ ದಾರಿಯನ್ನು ಯೋಚಿಸಿ.

"ಪಪ್ಪಾ ಹೇಳಿದ್ರೆ ನನಗೂ ಕಲಿಸ್ತೀಯಾ?"

"ಹೂನ್ರವ್ವಾ"

ಅಲ್ಲಿಗೇ ಆ ಮಾತು ಮುಗಿಯಬಹುದೆಂದು ಆಲೋಚಿಸಿ ಉತ್ತರ ಕೊಟ್ಟ

ಕರಿಯ. ಆದರೆ ಪ್ರಭಾವತಿಗೆ ಮಾತ್ರ ಅದನ್ನು ಅಲ್ಲಿಗೇ ಮರೆಯುವ ಆಲೋಚನೆಯೇ ಇರಲಿಲ್ಲ.

'ರಾಯರು ಕಲಿಸು ಎಂದು ಹೇಳಿದಾರೆ' ಎಂದಾಗ ಕರಿಯ ನಿಜವನ್ನೇ ಹೇಳಿದ್ದ. ರಾಯರು ಅವನಿಗೆ ಆ ಮಾತು ಹೇಳಿದುದು ನಿಜ. ಗಂಡುಮಕ್ಕಳು ವಿದ್ಯಾವಂತರಾಗುವುದರ ಜೊತೆಗೆ ದಷ್ಟಪುಷ್ಟರೂ ಆಗಿರಬೇಕೆಂಬ ಅಭಿಲಾಷೆ ಯಿಂದ, ರಾಯರು ಕರಿಯನಿಗೆ ಆ ಮಾತು ಹೇಳಿದ್ದರು. ಆದರೆ ಪ್ರಭಾವತಿಗೆ ಮಾತ್ರ ಕರಿಯ ಆ ಮಾತು ಹೇಳಿದಾಗ, ಅವನು ತನಗೆ ಕುಸ್ತಿ ಕಲಿಸಲು ಇಚ್ಛೆ ಇಲ್ಲದೆ ಸುಳ್ಳು ಹೇಳಿದನೆಂದೇ ಎನಿಸಿತ್ತು. ಎಂತಲೇ ರಾಯರು ಬರುವು ದನ್ನೇ ಕಾದಿದ್ದು, ಕೇಳಿದಳು.

"ಪಪ್ಪಾ, ಮೋನೀಗೆ ಕುಸ್ತಿ ಕಲಿಸು ಅಂತ ಕರಿಯನಿಗೆ ಹೇಳಿದ್ಯಾ?"

"ಹೂ. ಯಾಕೆ?"

"ಹಾಗಾದ್ರೆ....ಹಾಗಾದ್ರೆ...."

ಮಾತನಾಡುತ್ತಾ ಆಡುತ್ತಾ ತಂದೆಯ ಹತ್ತಿರ ಬಂದು, ಅವರ ತೊಡೆಯ ಮೇಲೆ ಕುಳಿತು, ಅವರ ಕತ್ತಿಗೆ ತೋಳು ಹಾಕಿ ಕೇಳಿದಳು ಪ್ರಭಾವತಿ—

"ಹಾಗಾದ್ರೆ....ನನಗೂ ಕುಸ್ತಿ ಹೇಳ್ಕೊಡು ಅಂತ ಕರಿಯನಿಗೆ ಹೇಳು ಪಪ್ಪ. ನೀನು ಹೇಳ್ದಿ ಇದ್ರೆ ಕಲ್ಸೋಲ್ಲಾಂತಾನೆ."

ಮಗಳ ಮಾತನ್ನು ಕೇಳಿ ರಾಯರಿಗೆ ನಗು ಬಂತು. "ಹುಚ್ಚು ಹುಡುಗಿ!" ಎಂದು ಮೃದುವಾಗಿ ಅವಳ ಕೆನ್ನೆಯನ್ನು ತಟ್ಟಿ ಗಟ್ಟಿಯಾಗಿ ನಕ್ಕು ಬಿಟ್ಟರು.

ಅವರು ತನ್ನ ಬೇಡಿಕೆಯನ್ನು ಮನ್ನಿಸಿ ಕೂಡಲೇ ಕರಿಯನನ್ನು ಕರೆದು "ಇವಳಿಗೂ ಕುಸ್ತಿ ಕಲಿಸು" ಎಂದು ಅವರು ಹೇಳುವರೆಂದು ನಿರೀಕ್ಷಿಸಿದ್ದಳು ಪ್ರಭಾವತಿ. ಆದರೆ ಅವರು ಹಾಗೆ ಮಾಡದೆ ನಕ್ಕು ಸುಮ್ಮನಾದುದನ್ನು ಕಂಡು, ಅಂಗಲಾಚುತ್ತಾ ಕೇಳಿದಳು—

"ಪಪ್ಪಾ ಡಿಯರ್....ನನಗೂ ಕುಸ್ತಿ ಕಲ್ಸು....ಪ್ಲೀಸ್....ಪ್ಲೀಸ್.... ಪಪ್ಪಾ"

ಎದೆಯಲ್ಲಿ ಮುಖ ಹುದುಗಿಸಿ ಮಗಳಾಡಿದ ಮಾತನ್ನು ಕೇಳಿ ರಾಯರು ಅವಾಕ್ಕಾದರು. ಏನು ಹೇಳಬೇಕು ಇವಳ ವಿಚಿತ್ರ ಬೇಡಿಕೆಗೆ? ಅವರು

ಕೂಡಲೇ ಉತ್ತರ ಕೊಡದೆ ಸುಮ್ಮನಿದ್ದುದನ್ನು ಕಂಡು ಮತ್ತೊಮ್ಮೆ ಕೇಳಿದಳು ಪ್ರಭಾವತಿ—

"ಹೇಳೋಲ್ವೆ ಪಪ್ಪಾ ?"

ದುಃಖ ಕಂಠದಲ್ಲಿ ಒತ್ತರಿಸಿ ಬಂದು ಮಾತಿನಲ್ಲಿ ಮಿಡಿಯುತ್ತಿತ್ತು.

"ನೀನು ಕುಸ್ತಿ ಕಲೀಬಾರ್ದು ಡಾರ್ಲಿಂಗ್."

ಆದಷ್ಟು ಮೃದುವಾದ ಧ್ವನಿಯಲ್ಲಿ ಹೇಳಿದರು ರಾಯರು.

"ಯಾಕೆ ಪಪ್ಪಾ. ನನಗೆ ಅದು ಬರೋಲ್ಲಾಂತಲೇ? ನಾನೂ ಕಲ್ತು ಕೋತೇನೆ."

"ಅದಕ್ಕಲ್ಲಮ್ಮಾ...."

"ಮತ್ತೆ ಯಾಕೆ ಪಪ್ಪಾ ?"

"ಹೆಂಗಸರು ಕುಸ್ತಿ ಕಲೀಬಾರ್ದು ಪಬ್ಬಿ."

ಹೆಂಗಸು! ತಂದೆಯ ಬಾಯಲ್ಲೂ ಅದೇ ಮಾತು.

"ಹೆಂಗಸರು ಯಾಕೆ ಕುಸ್ತಿ ಕಲೀಬಾರ್ದು ಪಪ್ಪಾ ?"

ಎಂಥ ಪ್ರಶ್ನೆ, ಎಷ್ಟು ವಿಚಿತ್ರ ಪ್ರಶ್ನೆ, ಏನೆಂದು ಹೇಳುವುದು ಅದಕ್ಕೆ! ಅವಳ ಪ್ರಶ್ನೆಗೆ ಸಮಾಧಾನಕರವಾದ ಉತ್ತರ ತಿಳಿಯದೆ, ರಾಯರು ಕೊಂಚ ಗಡುಸಾಗಿ,

"ಏಕೆ ಅಂದರೆ, ಹೆಂಗಸಾದ್ದಕ್ಕೆ. ಹೆಂಗಸು ಕಲಿಯೋದು ಹೆಂಗಸು ಕಲೀಬೇಕು, ಗಂಡಸು ಕಲಿಯೋದು ಗಂಡಸು ಕಲೀಬೇಕು. ಗಂಡಸಿಗೆ ಕುಸ್ತಿ, ಹೆಂಗಸಿಗೆ ಕಸೂತಿ. 'ಹೆಂಗಸಿಗೆ ಯಾಕೆ ಕುಸ್ತಿ ಚಿಂತೆ?'"

ಎಂದರು. ಮತ್ತೆ ಅವಳು ಪ್ರಶ್ನೆ ಕೇಳದಿರಲೆಂದು—

"ರತ್ನಾ, ಪಬ್ಬೀನ ಒಳಗೆ ಕರಿ" ಎಂದು ಹೆಂಡತಿಗೆ ಹೇಳಿ ತೊಡೆಯ ಮೇಲಿದ್ದ ಮಗಳನ್ನು ಬಲವಂತವಾಗಿ ಕೆಳಗೆ ಇಳಿಸಿ, ಉಡುಪು ಬದಲಿಸಲು ಹೋದರು.

"ಪಬ್ಬೀ, ಬಾ" ಎಂದು ರತ್ನಮ್ಮ ಒಳಗಿನಿಂದ ಕೂಗಿದರು. ಆದರೆ ಪ್ರಭಾವತಿ ಒಳಗೆ ಹೋಗಲಿಲ್ಲ. ತಂದೆ ತೊಡೆಯಿಂದ ಇಳಿಸಿ ನಿಲ್ಲಿಸಿದ ಕಡೆಯೇ ನಿಂತಿದ್ದಳು, ಕಣ್ಣಲ್ಲಿ ಕಂಬನಿಯ ಕೋಡಿ ಹರಿಸುತ್ತಾ.

ಹೆಂಗಸು!

ದುಃಖ, ನಿರಾಶೆಯ ತೆರೆಗಳ ನಡುವೆ ಅರ್ಥವಾಗದ ನೂರಾರು ಭಾವನೆಗಳು ಅವಳ ಮೆದುಳಿನಲ್ಲಿ ಸುಳಿ ಸುತ್ತಲಾರಂಭಿಸಿದವು.

ಹೆಂಗಸಾದ್ದರಿಂದ ಕುಸ್ತಿ ಕಲಿಯಬಾರದು....

ಮೋಹನ ಕರಿಯನೊಂದಿಗೆ ಸೆಣಸುವುದು....ತೊಡರುಗಾಲು ಕೊಟ್ಟು ಕೆಳಗೆ ಬೀಳಿಸುವುದು....ಬೆನ್ನು ಮೇಲಾಗಿ ಮಲಗಿದ ಅವನ ಕತ್ತಿಗೆ ತೋಳು ಹಾಕಿ ಎಳೆದು ಧೂಳಿನಲ್ಲಿ ಹೊರಳಿಸಿ 'ಚಿತ್....ಚಿತ್' ಎಂದು ಕೂಗುವುದು ....ತೊಡೆಯನ್ನು ತಟ್ಟಿ, ತೋಳನ್ನು ಕುಣಿಸುತ್ತಾ, ಕರಿಯನ ಮೇಲೆ ಬೀಳಲು ಸಂದು ನೋಡುತ್ತಾ ಅವನ ಸುತ್ತಲೂ ಚಕ್ರಾಕಾರವಾಗಿ ಸುತ್ತುವುದು.... ಅವನು ಹಿಡಿಯಲು ಸರಕ್ಕನೆ ಕೈಚಾಚಿದಾಗ ಛಂಗನೆ ಹಿಂದೆ ನೆಗೆದು, ತಟಕ್ಕನೆ ಅವನ ಬೆನ್ನ ಹಿಂದೆ ಬಂದು, ಅವನ ಕಾಲ ನಡುವೆ ನುಸಿದು ಬೀಳಿಸುವುದು.... ಆ ಉತ್ಸಾಹ....ಆ ನಗು....ಆ ಆನಂದ....

ಹೆಣ್ಣಾಗಿ ಹುಟ್ಟಿದುದರಿಂದ ಅದಾವುದೂ ತನಗಿಲ್ಲ.

ಎಂದೂ, ಯಾವುದನ್ನೂ ತನಗಿಲ್ಲವೆಂದು ಹೇಳದ ತಂದೆಯೂ ಇಂದು ಆ ಮಾತಾಡಿದರು....

ತಾನು ಗಂಡಾಗದೆ ಹೆಣ್ಣಾದ್ದರಿಂದ....

ನಾನೇಕೆ ಹೆಣ್ಣಾದೆ?....

ಒತ್ತರಿಸಿ ಬಂದ ದುಃಖದಲ್ಲಿ ನಿಂತಲ್ಲಿ ನಿಲ್ಲಲಾರದೆ, ತಾಯ ಬಳಿಗೆ ಓಡಿ ಹೋಗಿ, ಅವರ ಕುತ್ತಿಗೆಗೆ ಜೋತು ಬಿದ್ದು, ಬಿಕ್ಕುತ್ತಾ ಕೇಳಿದಳು—

"ಮಮ್ಮಿ, ನಾನೇಕೆ ಹೆಂಗಸಾಗಿ ಹುಟ್ಟಿದೆ?"

ರತ್ನಮ್ಮ ಮಗಳ ಮಾತಿಗೆ ಏನೂ ಉತ್ತರ ಕೊಡದೆ, ಭಾರವಾಗಿ ನಿಟ್ಟುಸಿರಿಟ್ಟರು. ಅವರು ಹೇಳಬೇಕೆಂದು ಬಯಸದೆಯೇ ಮಾತು ಅವರ ಬಾಯಿಂದ ಹೊರಬಂತು—

"ಅದು ನಮ್ಮ ದುರದೃಷ್ಟ ಪಬ್ಬಿ."

ದುರದೃಷ್ಟ!

ಹೆಣ್ಣಾಗಿ ಹುಟ್ಟುವುದು ದುರದೃಷ್ಟ. ಗಂಡಸಾಗಿ ಹುಟ್ಟುವುದು ಅದೃಷ್ಟ.

ತಟಕ್ಕನೆ 'ಗಂಡಸಿನ'ನ ಮೇಲೇ ಪ್ರಭಾವತಿಯ ಹೃದಯದಲ್ಲಿ ಹಗೆತನ ಹೆಡೆಯಾಡಿತು. ಸಿಟ್ಟಿನಿಂದ ಕಾಲನ್ನು ನೆಲಕ್ಕೆ ಅಪ್ಪಳಿಸಿದಳು.

೩

ಪ್ರಭಾವತಿ ಬೆಳೆದು ದೊಡ್ಡವಳಾಗುತ್ತಾ ಬಂದಳು. ಅವಳ ವಯಸ್ಸು ಹೆಚ್ಚಿದಂತೆ, ಬುದ್ಧಿ ಬಲಿತಂತೆ, ತನ್ನ ಹೆಣ್ಣುತನದ ಅರಿವಾದಂತೆ, ಹೆಜ್ಜೆಗೊಂದು ಬಾರಿ ತನ್ನ ಹೆಣ್ಣುತನದ ಅರಿವನ್ನುಂಟುಮಾಡಿಕೊಡುವ ಗಂಡಸಿನ ಬಗ್ಗೆ ಅವಳಲ್ಲಿ ಹಗೆತನ ಬೆಳೆಯಿತು. ಅಷ್ಟೇವುಟ್ಟಗೆ ಗಂಡಿಗೆ ತಾನಾವುದರಲ್ಲೂ ಕಡಮೆಯಾಗಬಾರದೆಂಬ ಛಲ ಹುಟ್ಟಿತು ಅವಳಿಗೆ. ಕಾರು ನಡೆಸುವುದು, ಸೈಕಲ್ ಸವಾರಿ, ಟೆನ್ನಿಸ್ ಯಾವುದರಲ್ಲೂ ಅವಳು ಯಾರಿಗೂ ಕಡಮೆಯಲ್ಲ. ಈ ಛಲವೇ ಅವಳು ಟೈಪ್‌ರೈಟಿಂಗ್ ಕಲಿಯಲು ಕಾರಣವಾದುದು. ಯಾರಾದರೂ ಅವಳು ಹೆಂಗಸೆಂದು ತಿಳಿದು ವಿಶೇಷ ರೀತಿಯಲ್ಲಿ ವರ್ತಿಸಿದರೆ, ಅವಳಿಗೆ ಅದರಿಂದ ಸಂತೋಷವಾಗುವ ಬದಲು ಇನ್ನಿಲ್ಲದಷ್ಟು ಸಿಟ್ಟು ಬರುತ್ತಿತ್ತು. ಅವರ ಮನೆಗೆ ಬರುತ್ತಿದ್ದವರೆಲ್ಲಾ ಸಾಧಾರಣವಾಗಿ ಅವರಷ್ಟೇ ಆಧುನಿಕತೆಯ ಸಂಪ್ರದಾಯದವರೇ. ಹೆಂಗಸಿನ ಕೈಯ ಕರ್ಚೀಫು ಜಾರಿದರೆ, ಪುಸ್ತಕ ಕೆಳಗೆ ಬಿದ್ದರೆ, ಹೆಣ್ಣು ಅದನ್ನು ಎತ್ತಿಕೊಳ್ಳಲು ಬಿಡದೆ, ಹತ್ತಿರದಲ್ಲಿದ್ದ ಗಂಡಸರು ಅದನ್ನು ಎತ್ತಿಕೊಡುವರು. ಕುಳಿತುಕೊಳ್ಳುವಾಗ ಮೊದಲು ಹೆಂಗಸರನ್ನು ಕೂಡಲು ಬಿಟ್ಟು ಬಳಿಕ ತಾವು ಕುಳಿತುಕೊಳ್ಳುವರು, ಇಲ್ಲವೇ ಹೆಂಗಸರನ್ನು ಕೂಡಿಸಿ ತಾವು ನಿಲ್ಲುವರು. ಹೆಜ್ಜೆಗೊಮ್ಮೆ ಇವರು ಹೆಂಗಸರು, ಇವರನ್ನು ಕಾಪಾಡುವ ಭಾರ ನಮ್ಮದು ಎಂಬ ರೀತಿಯಲ್ಲಿ ವರ್ತಿಸುವರು. ಅವರ ಈ ಪೋಷಕತ್ವದ ಧೋರಣೆಯನ್ನು ಕಂಡು ಪ್ರಭಾವತಿಗೆ ಅವರ ಮೇಲೆ ಸಿಟ್ಟು ಉಕ್ಕಿ ಬರುವುದು. ಆ ಸಿಟ್ಟಿನಲ್ಲೇ ಎಷ್ಟೋ ಬಾರಿ ಅಸಭ್ಯವೆನ್ನುವ ಹಾಗೆ ಒರಟಾಗಿ ನಡೆದುಕೊಂಡಿದ್ದಳು.

ಒಂದು ದಿನ ಅವರ ಮನೆಗೆ ನಾಲ್ಕಾರು ಜನ ಅತಿಥಿಗಳು ಬಂದಿದ್ದರು. ಅವರಲ್ಲೊಬ್ಬ ೧೮-೨೦ ವಯಸ್ಸಿನ ಯುವಕ. ಗಂಡಸಾದರೂ ಹೆಣ್ಣಿನಂಥ ದುರ್ಬಲ ವ್ಯೈಯವನು. ಧರಿಸಿದ ಸೂಟಿನ ಭಾರದಿಂದ ಭೂಮಿಯ ಮೇಲಿರಬಹುದು, ಇಲ್ಲವಾದರೆ ಗಾಳಿಗೆ ಹಾರಿ ಹೋಗಬೇಕು-ಅಷ್ಟು ಧೃಡಾಂಗ! ಅಂಥವನು, ಪ್ರಭಾವತಿ ಎಲ್ಲರಿಗೂ ಕೊಡಲೆಂದು ಕಾಫಿ ತಿಂಡಿಯ ತಟ್ಟೆಗಳನ್ನಿಟ್ಟ ಟ್ರೇಯನ್ನು ಹೊತ್ತು ತಂದಾಗ ತಟಕ್ಕನೆ ಎದ್ದು ನಿಂತು—

"ಇಲ್ಲಿ ಕೊಡಿ, ನಾನು ತೆಗೆದುಕೊಳ್ಳುತ್ತೇನೆ" ಎಂದ.

ಪ್ರಭಾವತಿ ಅವನ ಕೈಗೆ ಟ್ರೇ ಕೊಡದೆ ಅವನನ್ನು ಸಖಶಿಖಾಂತವಾಗಿ

ನೋಡಿದಳು. ಅವನ 'ಸಾಭ್ಯಸ್ತಿಕೆ'ಯನ್ನು ಕಂಡು ಅವಳಿಗೆ ನಗು ಬಂತು. ಟ್ರೇ ಅವಳಿಗೇ ಭಾರವಾಗಿತ್ತು. ಇನ್ನು ಅದನ್ನು ಅವನು ಹೊರುವುದೇ?

"ಟ್ರೇ ಏನೋ ಕೊಡಬಹುದು, ಆದರೆ...."

ನಗುನಗುತ್ತಾ ಮಾತಾಡಿ ಅರೆಮಾತಿನಲ್ಲಿ ನಿಲ್ಲಿಸಿದಳು ಪ್ರಭಾವತಿ.

"ಏನು ಆದರೆ? ನಾನು ಮುಟ್ಟಬಾರದೆಂದೇ?"

"ಅಲ್ಲ."

"ಮತ್ತೇನು ಯೋಚನೆ?"

"ಟ್ರೇ ನಿಮ್ಮ ಕೈಗೆ ಕೊಟ್ಟರೆ ಬಳಿಕ ನಿಮ್ಮನ್ನೂ ಟ್ರೇಯನ್ನೂ ಕೂಡಿ ಸಿಯೇ ಹೊರಬೇಕಾಗುವುದೇನೋ ಎಂದು...."

ಪ್ರಭಾವತಿಯ ಮಾತು ಕೇಳಿ ಅಲ್ಲಿದ್ದವರೆಲ್ಲಾ ಬಿದ್ದು ಬಿದ್ದು ನಕ್ಕರು. ಪ್ರಭಾವತಿಗೂ ನಗು ತಡೆಯುವುದಾಗಲಿಲ್ಲ. ಅವಳೂ ನಕ್ಕಳು. ಅವಳ ಮಾತು, ನಗುವಿನ ಆಘಾತಕ್ಕೆ ಸಿಕ್ಕ ಯುವಕ, ಮುಖ ಕೆಂಚಗೆ ಮಾಡಿ ಕುಕ್ಕರಿಸಿಕೊಂಡ. ಆಗ ಬಾಯಿ ಮುಚ್ಚಿಕೊಂಡವನು ಹೋಗುವವರೆಗೂ ತುಟಿ ಬಿಚ್ಚಲಿಲ್ಲ. ಗಳಿಗೆಗೊಂದು ಬಾರಿ ಅವನ ಮುಖ ಕೆಂಪು-ಬಿಳುಪಾಗುತ್ತಿತ್ತು. ಹೋಗುವಾಗಲೂ ದುರ್ದಾನ ತೆಗೆದುಕೊಂಡವನಂತೆ ಹೊರಟುಹೋದ.

ಅದನ್ನು ಕಂಡು ಸಂಜೀವರಾಯರಿಗೆ ಕೆಡುಕೆನಿಸಿತು. ಅವನ ದೇಹ ದೌರ್ಬಲ್ಯವನ್ನು ಅಂಥಾ ಚುಚ್ಚುಮಾತುಗಳಿಂದ ಪ್ರಭಾವತಿ ಹಂಗಿಸಬಾರದಾಗಿತ್ತು ಎನಿಸಿತು. ಮಗಳಿಗೆ ಅದೇ ಮಾತನ್ನೇ ಹೇಳಿದರು.

"ಅವನನ್ನು ಅಷ್ಟು ಅವಮಾನ ಮಾಡಬಾರದಾಗಿತ್ತು ಪಬ್ಬಿ."

"ಅವನು ನನ್ನನ್ನು ಮಾತ್ರ ಅವಮಾನ ಮಾಡಬಹುದೇ?"

"ನಿನಗೇನು ಅವಮಾನ ಮಾಡಿದ ಅವನು?"

"ಟೀ ಟ್ರೇ ಹೊರುವ ಶಕ್ತಿ ನನಗಿಲ್ಲವೇ? 'ನಾನು ತೆಗೆದುಕೊಳ್ಳುತ್ತೇನೆ' ಎಂಬ ಮಾತಿನ ಅರ್ಥವೇನು? ನಾನು ದುರ್ಬಲಳು, ಅದನ್ನು ಹೊರುವ ಶಕ್ತಿ ನನಗಿಲ್ಲ, ಎಂದಲ್ಲವೆ?"

"ನೀನು ತಿಳಿದುಕೊಂಡುದು ತಪ್ಪು ಅರ್ಥ. ಹಾಗೆ ಹೇಳುವುದು ಸಾಭ್ಯಸ್ತಿಕೆ."

"ಇದು ಸಾಭ್ಯಸ್ತಿಕೆಯಲ್ಲ ಡ್ಯಾಡಿ, ಹೆಣ್ಣಿನ ಅಪಮಾನ. ಹೆಣ್ಣು ದುರ್ಬಲಳು ಎಂದು ಗಂಡು ಅನೂಚಾನವಾಗಿ ಹೇಳುತ್ತಾ ಬಂದುದೇ ಇಂದು

ಸಾಭ್ಯಸ್ತಿಕೆ ಎನಿಸಿಕೊಂಡಿದೆ. ಅಂಥ ಸಾಭ್ಯಸ್ತಿಕೆ ನನಗೆ ಬೇಕಾಗಿಲ್ಲ. ಅಂಥ ಸಾಭ್ಯಸ್ತಿಕೆಯಿಂದ ನನಗಾಗಬೇಕಾದುದೇನೂ ಇಲ್ಲ." ನುಡಿಯ ಕಿಡಿಗರೆಯುತ್ತಾ ಪ್ರಭಾವತಿ ಮಾತು ಮುಂದುವರಿಸಿದಳು "ನನಗೆ ಟ್ರೇ ಹೊರಲು ಸಹಾಯ ಮಾಡುತ್ತಾನಂತೆ, ಆ ಪ್ರಾಣಿ? ತನ್ನ ಮೈ ತಾನೇ ಹೊತ್ತರೆ ಸಾಲದೆ? ತಾನೇ ತಿರುಕನಾದವನು ನಮಗೆ ತಿರುಪೆ ಹಾಕಲು ಬಂದರೆ ಅದನ್ನು ಅಪಮಾನವೆನ್ನಬೇಕೋ, ಸಾಭ್ಯಸ್ತಿಕೆ ಎಂದು ಸ್ವೀಕರಿಸಬೇಕೊ?"

"ಹಾಗಲ್ಲ ಪಬ್ಬಿ. ಸಾಮಾನ್ಯವಾಗಿ ಹೆಂಗಸು ದುರ್ಬಲಳು."

"ಯಾರು ಹಾಗೆಂದವರು? ಗಂಡಸರು! ಅಲ್ಲವೇ? ಯುಗಯುಗಾಂತರದಿಂದ ಈ ಮಾತಾಡಿ ಆಡಿ ಸ್ತ್ರೀಯನ್ನು ದುರ್ಬಲಳನ್ನಾಗಿ ಮಾಡಿ, ಡ್ರಾಯಿಂಗ್ ರೂಂ ಪೀಸಿನ ಹಾಗೆ, ಬರೀ ಅಲಂಕಾರದ ವಸ್ತುವಾಗಿ ಮಾಡಿದಾರೆ ಈ ಗಂಡಸರು. ಅದನ್ನು ನಾನೊಪ್ಪುವುದಿಲ್ಲ ಡ್ಯಾಡಿ. ಗಂಡಸಿಗಿದ್ದಷ್ಟೇ ಶಕ್ತಿ ಹೆಂಗಸಿಗೂ ಇದೆ. ಹೆಂಗಸಿಗೆ ಶಕ್ತಿ ಇಲ್ಲ ಎನ್ನುವವರನ್ನು ಕಂಡರೆ ಗುಂಡು ಹಾಕಬೇಕು ಎನಿಸುತ್ತದೆ."

ಎಂದವಳೇ ಪ್ರಭಾವತಿ ಮಾತು ಮುಂದುವರಿಸದೆ, ಬಿರುಗಾಳಿಯಂತೆ ಒಳಗೆ ಹೋದಳು. ನಿಜವಾಗಿಯೂ ಅವಳ ಮೈ ಸಿಟ್ಟಿನಿಂದ ಕಂಪಿಸುತ್ತಿತ್ತು. ಮಗಳ ಮಾತಿನಲ್ಲಡಗಿದ್ದ ಆಕ್ರೋಶವನ್ನು ಕಂಡು ಸಂಜೀವರಾಯರು ದಂಗು ಬಡಿದು ಕುಳಿತರು.

ಸ್ತ್ರೀ ದುರ್ಬಲಳು ಎನ್ನುವ ಗಂಡಸರ ಮೇಲೆ ಇದ್ದಷ್ಟೇ ಸಿಟ್ಟು, ಪುರುಷನೇ ಸರ್ವಸ್ವ ಎಂದು ನಂಬಿದ ಹೆಂಗಸರ ಮೇಲೂ ಪ್ರಭಾವತಿಗಿತ್ತು.

ಇವಳಿಗೆ ತದ್ವಿರುದ್ಧ ಇವಳ ಗೆಳತಿ ಕೋಮಲ. ಇದೇ ಮಾತಿಗಾಗಿಯೇ ಅವರಿಬ್ಬರ ನಡುವೆ ವಿರಸವಾಗಿತ್ತು.

ಪ್ರಭಾವತಿಯ ಗೆಳತಿಯರ ಗುಂಪಿನಲ್ಲಿ ಕೋಮಲೆಯಷ್ಟು ರೂಪವತಿ ಮತ್ತಾರೂ ಇರಲಿಲ್ಲ. ಅವಳ ಕೇದಗೆಯ ಬಣ್ಣದ ಬಳ್ಳಿಯಂಥ ಮೈ, ಬಾದಾಮಿಯಾಕಾರದ ಮುಖ, ನೀಳವಾದ ಅಗಲವಾದ ಶುಭ್ರವಾದ ಕಣ್ಣು, ಕೆಂಪು ತುಂಬುತುಟಿಗಳ ಪುಟ್ಟ ಬಾಯಿ, ಮಾಟವಾದ ಎಸಳಾದ ಮೂಗು, ಸಣ್ಣ ಸೊಂಟ, ಗುಂಗುರು ಗುಂಗರಾಗಿ ಎಷ್ಟು ಬಾಚಿದರೂ ಸಣ್ಣಗೆ ಕೆದರಿ ಗಾಳಿಯುಲ್ಲಾಡುವ ಕೂದಲು, ಆಕರ್ಷಕವಾದ ವಕ್ಷಸ್ಥಲ- ಗಂಡಸರಿರಲಿ,

ಹೆಂಗಸರೂ ಒಂದು ಗಳಿಗೆ ನಿಂತು ನೋಡಿ ಅಸೂಯೆಪಡುವಂಥ ಚಲುವೆ, ಆ ಸೌಂದರ್ಯವನ್ನು ಎಷ್ಟೆಷ್ಟು ಅಲಂಕರಿಸಿದರೂ ಅವಳಿಗೆ ತೃಪ್ತಿಯಿಲ್ಲ.

ಕೋಮಲ ಎಷ್ಟು ರೂಪವತಿಯೋ ಅಷ್ಟೇ ಸೋಮಾರಿ. ಅವಳಿಗೆ ಎಲ್ಲ ಕೆಲಸವನ್ನೂ ಬೇರೆ ಯಾರಾದರೂ ಮಾಡಿಕೊಡಬೇಕು. ಹೂವಿದ್ದಲ್ಲಿ ದುಂಬಿಗಳಿಗೆ ಕೊರತೆಯೇ. ಅವಳಿಗೆ ಸೇವೆ ಮಾಡಲು ಯಾರಾದರೂ ಒಬ್ಬರು ಸಿದ್ಧವಾಗಿರುತ್ತಿದ್ದರು. ಸಣ್ಣ ಪುಟ್ಟ ಕೆಲಸಕ್ಕೂ 'ಪ್ಲೀಸ್' ಎಂದು ಕಣ್ಣ ನೋಟವನ್ನು ಭಾರವಾಗಿ ವಾಲಿಸಿ ಕೇಳುವಳು. ತನ್ನ ರೂಪದ ಬಂಡ ವಾಳವ ಮೇಲೆ ಸೋಮಾರಿತನದ ಕೊಬ್ಬು ಬೆಳಸಬಹುದೆಂದು ಅವಳಿಗೆ ಬಾಲ್ಯದಿಂದಲೂ ಮನವರಿಕೆಯಾಗಿತ್ತು. ಅದಕ್ಕೆಂದೇ ದುರ್ಬಲತೆಯ ಸೋಗನ್ನು ಹಾಕುತ್ತಿದ್ದಳು.

"ನನಗಂತೂ ಜಡೆ ಬಾಚುವಾಗ ಕೂಂಬ್ ಹಿಡಿದರೂ ಕೈ ನೋವು ಬರುತ್ತದೆ" ಎನ್ನುವಳು. ಯಾವ ಕೆಲಸಕ್ಕಾದರೂ ಸರಿಯೆ 'ತನ್ನ ಕೈಲಾಗು ವುದಿಲ್ಲ' ಎಂದು ಇತರರಿಂದ ಆ ಕೆಲಸ ಮಾಡಿಸಿಕೊಳ್ಳುವುದರಲ್ಲಿ ಅವಳಿಗೆ ಹೀನಾಯವೇನೂ ಕಾಣುತ್ತಿರಲಿಲ್ಲ. ಹೆಣ್ಣಿಗೆ ದುರ್ಬಲತೆ ಸ್ವಾಭಾವಿಕವೆಂದೇ ಅವಳ ವಾದ.

ಆದರೆ ಪ್ರಭಾವತಿಗೆ ಈ ಮನೋಭಾವ ಸರಿಹೋಗುತ್ತಿರಲಿಲ್ಲ. ಅವಳ ದೃಷ್ಟಿಯಲ್ಲಿದು ಪರೋಪಜೀವಿಯ ಮನೋಭಾವ; ಅಪಮಾನದ ಕೆಲಸ.

ಒಂದು ದಿನ ಪ್ರಭಾವತಿ 'ಟೀ'ಗಾಗಿ ಕೋಮಲೆಯ ಮನೆಗೆ ಹೋಗಿ ದ್ದಳು. ಇನ್ನೂ ನಾಲ್ಕಾರು ಜನ ಗೆಳತಿಯರೂ ನೆರೆದಿದ್ದರು. ತನ್ನ ಸ್ನೇಹಿತ ರನ್ನು ಟೀಗೆ ತಾನು ಆಹ್ವಾನಿಸಿದ್ದರೂ, ಅವರಿಗೆ ಸರಬರಾಯಿ ಮಾಡುವ ಭಾರವೆಲ್ಲಾ, ಅವರ ಮನೆಯಲ್ಲಿದ್ದ ಅವಳ ತಾಯಿಯ ತಮ್ಮ ಸುರೇಶನ ಮೇಲೆ ಬಿದ್ದಿತ್ತು. ಸುರೇಶ ಕೋಮಲೆಯ ರೂಪಕ್ಕೆ ಮನಸೋತವನೆಂಬುದು ಅವಳ ಗೆಳತಿಯರ ಗುಂಪಿನಲ್ಲೆಲ್ಲಾ 'ಬಹಿರಂಗ ರಹಸ್ಯ'. ಕೋಮಲೆಗೆ ಅವನ ಮೇಲೆ ಏನು ಪ್ರೀತಿ ಇತ್ತೋ ಇರಲಿಲ್ಲವೋ, ಆದರೂ ಅವನ ಆಕಾಂಕ್ಷೆಯನ್ನು ಮಾತ್ರ ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದಳು. ಕಾಲೇಜಿಗೆ ಬರುವಾಗ ಅವನು ಅವಳ ಪುಸ್ತಕಗಳನ್ನು ಹಿಡಿದುಕೊಂಡು ಜೊತೆಗೆ ಬರಬೇಕು; ಮಧ್ಯಾಹ್ನ ಮನೆಯಿಂದ ಕಾಫಿ, ತಿಂಡಿ ಸರಬರಾಯಿ ಮಾಡಬೇಕು; ಮತ್ತೆ ಸಂಜೆಗೆ ಪುಸ್ತಕ ಹೊರಲು ಬರಬೇಕು. ಅವಳು ಎಲ್ಲಿ ಹೋಗಲಿ,

ಬರಲಿ ಬೆಂಗಾವಲಾಗಿ ಇದ್ದೇ ಇರಬೇಕು. ಸುರೇಶನ ಈ ಅವಿಚ್ಛಿನ್ನ ಸೇವೆ, ಅವಳ ಗೆಳತಿಯರಿಗೆಲ್ಲಾ ವಿನೋದದ ವಿಷಯವಾಗಿತ್ತು. ಅದು ಸಹಜವೇ ಆದರೂ, ಆ ನಗೆಚಾಟಿಕೆಯಲ್ಲಿ ಕೋಮಲೆಯೂ ಧಾರಾಳವಾಗಿ ಭಾಗವಹಿಸುತ್ತಿದ್ದುದನ್ನು ಕಂಡು ಪ್ರಭಾವತಿಗೆ ಮೈ ಕಿಡಿಕಿಡಿಯಾಗುತ್ತಿತ್ತು.

ಉಳಿದವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದಮೇಲೆ, ಪ್ರಭಾವತಿ ಕೋಮಲ ಇಬ್ಬರೇ ಮಾತನಾಡುತ್ತಾ ಕುಳಿತಿದ್ದರು. ಸಂಜೆ ಸರಿದು ಕತ್ತಲಾಗುವ ಹೊತ್ತಾದುದರಿಂದ ಗಾಳಿ ತಣ್ಣಗಾಗುತ್ತಿತ್ತು.

"ಸುರೇಶ್...." ಮೃದುವಾದ ಧ್ವನಿಯಲ್ಲಿ ಕೂಗಿದಳು ಕೋಮಲ.

"ಏನು ಕೋಮಲಾ?" ಅವಳ ಕರೆಗೇ ಕಾದಿದ್ದವನಂತೆ ಬಂದು ಕೇಳಿದ ಸುರೇಶ.

"ತುಂಬಾ ಛಳಿಗಾಳಿ. ಸ್ವೆಟ್ಟರ್ ತಂದುಕೊಡುತ್ತೀಯಾ, ಪ್ಲೀಸ್." ಸುರೇಶ ಹೋಗಿ ಸ್ವೆಟ್ಟರು ತಂದುಕೊಟ್ಟ.

"ಥ್ಯಾಂಕ್ಸ್" ಎಂದು ಆ ಸೇವೆಯ ಋಣ ಬಗೆಹರಿಸಿದಳು.

ಪ್ರಭಾವತಿಗೆ ಅದನ್ನು ಕಂಡು ಸಿಟ್ಟು ಬಂತು. ಪಾಪ, ಅವನಿಗೆ ಆ ದಿನ ಒಂದು ಗಳಿಗೆಯೂ ಬಿಡುವು ಕೊಟ್ಟಿರಲಿಲ್ಲ. ಕಾಲು ನೆಲದ ಮೇಲೆ ಊರಲೂ ಅವಕಾಶ ಕೊಟ್ಟಿರಲಿಲ್ಲ. ದುಡಿಯುತ್ತಾನೆ ಎಂದು ಇಷ್ಟು ದುಡಿಸುವುದೇ? ಎದ್ದು ಹೋಗಿ ಸ್ವೆಟ್ಟರು ತರುವಷ್ಟೂ ಶಕ್ತಿ ಇಲ್ಲವೇ ಇವಳಿಗೆ?

"ನಿನ್ನದು ಕಲ್ಲೆದೆ ಕೋಮಲಾ."

"ಏಕೆ?"

"ತೀರಾ ಅಷ್ಟು ಓಡಾಡಿಸುವುದೇ? ಸ್ವೆಟ್ಟರ್ ತರಲಿಕ್ಕೂ ಆತನೇ ಬರಬೇಕೇ?"

"ನಾನೇನು ಮಾಡಲಿ ಪ್ರಭಾ. ನನ್ನದು ತುಂಬಾ ಡೆಲಿಕೇಟ್ ಕಾನ್‌ಸ್ಟಿಟ್ಯೂಷನ್. ಅಷ್ಟು ದೂರ ಓಡಾಡಿದರೂ ಸಾಕಾಗುತ್ತೆ."

"ಸುಳ್ಳು ಹೇಳುವುದಕ್ಕೂ ಒಂದು ಮಿತಿ ಬೇಕು ಕೋಮಲಾ."

"ನಾನೇನು ಸುಳ್ಳು ಹೇಳಿದೆ ಪ್ರಭಾ?"

"ಸ್ವೆಟ್ಟರು ತರಲಿಕ್ಕೂ ಕೈಲಾಗುವುದಿಲ್ಲ ಎನ್ನುತ್ತೀಯಲ್ಲಾ, ನೀನೇನು ಮೇಣದ ಗೊಂಬೆಯೇ? ಗಂಟೆಗಟ್ಟಲೆ ಷಟಲ್‌ಕಾಕ್ ಆಡುತ್ತಿ. ಇದಕ್ಕೆ

ಮಾತ್ರ ಆಯಾಸವೇ? ಕುದುರೆ ಕಂಡರೆ ಕಾಲು ನೋವು. ದುಡಿಯಲಿಕ್ಕಿದ್ದಾನೆ, ರೋಕಲಿ. ಇಷ್ಟೇ ಅಲ್ಲವೇ? ಇವೆಲ್ಲಾ ಬರೀ ಸೋಗು."

"ಹಾಗೂ ಅನ್ನು, ತಪ್ಪೇನು. ಅದು ಅವನು ನನ್ನ ರೂಪಕ್ಕೆ ಸಲ್ಲಿಸುವ ಅಭಿನಂದನೆ. ನಿನಗಾರೂ ಹೀಗೆ ಸೇವೆ ಮಾಡುವವರಿಲ್ಲಾ ಎಂತ ನಿನಗೆ ಹೊಟ್ಟೆ ಉರಿ ಅಲ್ಲವೇ?"

ಸ್ವಲ್ಪ ಸೆಟೆದುಕೊಂಡೇ, ಪ್ರಭಾವತಿಯ ಮನಸ್ಸಿಗೆ ಮುಳ್ಳು ಮುರಿಯುವ ಧ್ವನಿಯಲ್ಲಿ ಮಾತನಾಡಿದಳು ಕೋಮಲ.

"ರೂಪಕ್ಕೆ ಅಭಿನಂದನೆ? ಅವನ ದೃಷ್ಟಿಯಲ್ಲಿ ಇರಬಹುದು. ಆದರೆ ನಿಜವಾಗಿ ಹೇಳಬೇಕೆಂದರೆ ಇದು ರೂಪದ ವ್ಯಭಿಚಾರ." ಪ್ರಭಾವತಿಯೂ ರೇಗಿ ಉತ್ತರ ಕೊಟ್ಟಳು.

"ಷಟಪ್" ಕೋಮಲಾ ಕೆರಳಿ ಹೇಳಿದಳು.

"ಕೆಲಸಕ್ಕಂತೂ ನಿನ್ನದು ಡೆಲಿಕೇಟ್ ಕಾನ್ಸಿಟ್ಯೂಷನ್. ಆದರೆ ಸ್ವಲ್ಪ ಸತ್ಯದಿಂದ ಆರೋಗ್ಯವೇನೂ ಕೆಡುವುದಿಲ್ಲ ಕೋಮಲಾ. ಡೆಲಿಕೇಟ್! ಏನು ಡೆಲಿಕೇಟ್? ಮೈಯೇ, ಮನಸ್ಸೇ? ನಿನ್ನಂಥವರಿಂದಲೇ ಹೆಂಗಸರಿಗೆ 'ಡೆಲಿಕೇಟ್' ಎಂಬ ಅಪಖ್ಯಾತಿ; ಗಂಡಸರಿಗೆ ತಾವು ಮೇಲು ಎನ್ನುವ ದುರಹಂಕಾರ. ನೀನು, ನಿನ್ನಂಥವರು ಶುದ್ಧ 'ಪ್ಯಾರಸೈಟ್ಸ್' ನಿಮ್ಮಂಥವರಿಗೆ ರೂಪವಿರುವುದೂ ಒಂದು ಕ್ರೈಂ. ಹೆಣ್ಣುತನಕ್ಕೇ ಅವಮಾನ ಮಾಡಬೇಡ ಕೋಮಲಾ!"

ಮತ್ತಷ್ಟು ಕಟುವಾಗಿ, ಗಾಯದ ಮೇಲೆ ಉಪ್ಪುಕಾಗದದಿಂದ ಉಜ್ಜುವಂತೆ ಹೇಳಿದಳು ಪ್ರಭಾವತಿ. ಅವಳ ಮಾತು ಕೇಳಿ ಕೋಮಲೆಯ ಮುಖ ಕ್ರೋಧದಿಂದ ಬಿಳುಪೇರಿತು. ಆಡಲೋ ಬೇಡವೋ ಎಂದು ಎರಡು ಮೂರು ಬಾರಿ ತುಟಿ ಕಚ್ಚಿ, ಕಡೆಗೆ ಬಿಗಿದ ಧ್ವನಿಯಲ್ಲಿ ಹೇಳಿದಳು—

"ಏನಾದರಾಗಲಿ, ಹೆಂಗಸರ ವಿಚಾರ ನಿನಗೇಕೆ ಪ್ರಭಾ."

ಆ ಮಾತು ಕೇಳಿ ಪ್ರಭಾ ಕೆಂಡ ತುಳಿದವಳಂತೆ ಅಳುಕಿದಳು. ಅವಳೆದೆಯ ಮೇಲೆ ಮಾತು ಚಾಟಿಯ ಏಟಿನಂತೆ ಎರಗಿತು. ತನ್ನ ಮಾತಿನ ಕಠೋರ ಪರಿಣಾಮವನ್ನು ಅರಿತರಿತೂ ಕೋಮಲಾ ಮುಂದುವರಿಸಿ ಹೇಳಿದಳು—

"ನಿನ್ನೊಂದಿಗೆ ಇದೆಲ್ಲಾ ಮಾತಾಡಲೇ ಬಾರದಾಗಿತ್ತು. ಎಕ್ಸ್‌ಕ್ಯೂಸ್

ಮಿ. ಐ ಥಾಟ್ ಯೂ ಟೂ ವರ್ ಎ ಉಮನ್" (ಕ್ಷಮಿಸು. ನೀನೂ ಹೆಂಗಸು ಎಂದು ತಿಳಿದಿದ್ದೆ.)

ಏಟಿನ ಮೇಲೆ ಏಟು ತಿಂದ ಹುಲ್ಲೆಯಂತೆ ಮಿಡುಕಿದಳು ಪ್ರಭಾವತಿ. ಒಂದು ಗಳಿಗೆ ಕ್ರೋಧದಿಂದ ಅವಳ ಅಂಗಾಂಗದಲ್ಲೂ ಬಿಸಿನೆತ್ತರುಕ್ಕಿ, ಮರು ಗಳಿಗೆಯೇ ಹಿಮಶೀತಲವಾಯಿತು. ಹರಿತವಾದ ಚೂರಿಯಂಥ ದೃಷ್ಟಿಯಿಂದ ಕೋಮಲೆಯನ್ನು ನೋಡುತ್ತಾ—

"ಥ್ಯಾಂಕ್ಸ್ ಫಾರ್ ದಿ ಕಾಂಪ್ಲಿಮೆಂಟ್ಸ್" (ಹೊಗಳಿಕೆಗೆ ವಂದನೆ) ಎಂದವಳೇ ಮರುಮಾತಾಡದೆ, ಕಾಲಲ್ಲಿ ಮೆಟ್ಟಿದ ಚಪ್ಪಲಿಯನ್ನು ಚಟಪಟಿಸುತ್ತಾ ವೇಗವಾಗಿ ಹೊರಬಿದ್ದಳು.

ಅವಳ ಬೆನ್ನಹಿಂದೆ ಕೋಮಲಾ ಕಠೋರವಾಗಿ ನಕ್ಕ ನಗುವಿನ ಮುಳ್ಳು ಧ್ವನಿ ಕೇಳಿಸಿತು.

೪

"ಕ್ಷಮಿಸಿ. ನೀವೂ ಹೆಂಗಸೆಂದು ತಿಳಿದಿದ್ದೆ."

ಕೋಮಲೆ ನೆನಪಿಸಿದ ಆ ಮಾತು ಕತ್ತಲಲ್ಲಿ ಚಕ್ರಾಕಾರನಾಗಿ ಸುತ್ತುವ ಕೊಳ್ಳಿಯಂತೆ, ಕ್ರೋಧ ತುಂಬಿದ ಪ್ರಭಾವತಿಯ ಮಿದುಳಿನಲ್ಲಿ ಸುತ್ತುತ್ತಿತ್ತು.

ಅವಳ ಹೃದಯವನ್ನಿರಿಯುವ ಅಣಕವಾದ ಆ ವಾಗ್ಬಾಣವನ್ನು ಪ್ರಭಾವತಿಯ ಮೇಲೆ ಮೊಟ್ಟಮೊದಲು ಪ್ರಯೋಗಿಸಿದವನು ಚಂದ್ರಶೇಖರ. ಕಾಲೇಜಿನ ಸೆಮಿನಾರ್‌ನಲ್ಲಿ 'ಸ್ತ್ರೀ ಸ್ವಾತಂತ್ರ್ಯ'ದ ಬಗ್ಗೆ ಭಾಷಣಮಾಲೆ ನಡೆದ ದಿನ.

ಸಭಾಭವನ ಹುಡುಗರಿಂದ ಕಿಕ್ಕಿರಿದಿತ್ತು. ಮಹಾರಾಣಿ ಕಾಲೇಜಿನ ಒಂದಿಬ್ಬರು ಹುಡುಗಿಯರೂ ಭಾಷಣಮಾಲೆಯಲ್ಲಿ ಭಾಗವಹಿಸಿದ್ದರಿಂದ, ಆ ಕಾರ್ಯಕ್ರಮಕ್ಕೆ ಇತರ ಹುಡುಗಿಯರೊಂದಿಗೆ ಪ್ರಭಾವತಿಯೂ ಹೋಗಿದ್ದಳು. ನಾಲ್ಕಾರು ಜನ ಹುಡುಗರೂ, ಹುಡುಗಿಯರೂ ಸ್ತ್ರೀ ಸ್ವಾತಂತ್ರ್ಯಬೇಕು–ಬೇಡಗಳ ಬಗ್ಗೆ ಭಾಷಣ ಮಾಡಿದರು. ಭಾಷಣಮಾಲೆಯಲ್ಲಿ ಭಾಗವಹಿಸಿದ ಹುಡುಗಿಯರೆಲ್ಲರೂ ಸ್ತ್ರೀಗೆ ಸ್ವಾತಂತ್ರ್ಯ ಬೇಕೇ ಬೇಕು ಎಂದು ವಾದಿಸಿದರೂ,

ಆ ಭಾಷಣವನ್ನು ಕೇಳಿ ಪ್ರಭಾವತಿಗೆ ಸಂತೋಷವಾಗುವ ಬದಲು ಸಿಟ್ಟು ಬಂತು. ಅದಕ್ಕೆ ಕಾರಣ ಆ ಹುಡುಗಿಯರು ವಿಷಯ ಸಮರ್ಥನೆ ಮಾಡಿದ ಧೋರಣೆ. ಅವರು ಭಾಷಣದಲ್ಲಿ ಸ್ತ್ರೀ ಪುರುಷನ ದಾಸ್ಯದಿಂದ ಮುಕ್ತಳಾಗ ಬೇಕೆಂಬ ಬೇಡಿಕೆಯಿದ್ದರೂ, ಅದರಲ್ಲಿ ಪುರುಷನನ್ನು ಯಾಚಿಸುವ ಧ್ವನಿ ಇತ್ತು. ಹುಡುಗರು ಮಾತನಾಡಿದುದರಲ್ಲೂ ಏನೋ ದಾನ ಕೊಡುವ ಧೋರಣೆ. ಅವರ ಮಾತಿನಲ್ಲಿ ಅಂತರ್ಗತವಾದ ಈ ಧೋರಣೆಯನ್ನು ಅರಿತು, ಪ್ರಭಾವತಿಗೆ ರೇಗಿತು. ಭಾಷಣ ಮಾಡಬೇಕೆಂದು ಬರದಿದ್ದರೂ, ಅಧ್ಯಕ್ಷರು 'ಬೇರೆ ಯಾರಾದರೂ ಭಾಷಣ ಮಾಡುವವರಿದ್ದರೆ ಮಾತನಾಡಬಹುದು' ಎಂದಾಗ ತಾನೂ ತನ್ನ ಹೆಸರಿನ ಚೀಟಿ ಕಳಿಸಿದಳು. ತನ್ನ ಭಾಷಣದ ಸರದಿ ಬಂದಾಗ, ಅದೇ ಕ್ರೋಧ ಉದ್ವೇಗದಲ್ಲೇ ಭಾಷಣ ಮಾಡಿದಳು:

"ಇದುವರೆಗೆ ನಾಲ್ಕಾರು ಜನ ನನ್ನ ಸೋದರ, ಸಹೋದರಿಯರು, ಸ್ತ್ರೀಗೆ ಸ್ವಾತಂತ್ರ್ಯ ಬೇಕೇ ಬೇಕು ಎಂದು ಮಾತನಾಡಿದಾರೆ. ಸ್ತ್ರೀಗೆ ಯಾವ ಯಾವ ಕಾರಣಕ್ಕಾಗಿ ಸ್ವಾತಂತ್ರ್ಯ ಬೇಕು ಎಂಬ ಬಗ್ಗೆ ಸಾಧಾರವಾಗಿ ವಿಷಯ ವಿವೇಚನೆ ಮಾಡಿದಾರೆ.

"ಸ್ತ್ರೀಗೆ ಸ್ವಾತಂತ್ರ್ಯ ಬೇಕು ಎಂದು ವಾದಿಸಿ ಕೆಲವರು ವಿದ್ಯಾರ್ಥಿಗಳೂ ಮಾತನಾಡಿದಾರೆ. ಅವರಿಗೆ ನನ್ನ ಅಭಿನಂದನೆಗಳು. ಆದರೆ ಅವರು ವಿಷಯವನ್ನು ಪೋಷಿಸಿದ ಧೋರಣೆ ಖಂಡನಾರ್ಹ. ಅವರ ದೃಷ್ಟಿಯಲ್ಲಿ ಹೆಣ್ಣಿಗೆ ಸ್ವಾತಂತ್ರ್ಯ ಬೇಕು ಪುರುಷನ ತಾಯಿಯಾಗಿ, ಮಡದಿಯಾಗಿ, ಸೋದರಿಯಾಗಿ, ಅವನ ಬಾಳನ್ನು ರಸಮಯವಾಗಿ ಮಾಡಿದ ಅದ್ಭುತ ಸೇವೆಗೆ ಪಾರಿತೋಷಕರೂಪವಾಗಿ, ಪುರುಷನು ಕೃತಜ್ಞತಾಪೂರ್ವಕವಾಗಿ ಹೆಣ್ಣಿಗೆ ಸ್ವಾತಂತ್ರ್ಯವನ್ನು ಕರುಣಿಸಬೇಕು. ಅವರ ಸಹೃದಯತೆ ಸ್ವಾಗತಾರ್ಹವಾದರೂ, ಈ ದಾನದ ಮನೋಭಾವನೆ ತಿರಸ್ಕಾರಾರ್ಹ. ಸಮಾನ ಸ್ವತಂತ್ರತೆಯಿಂದ ಜನಿಸಿದ ಹೆಣ್ಣಿನ ಶೋಷಣೆಯಿಂದಲೇ ಕೊಬ್ಬಿದ ಪುರುಷವರ್ಗದಿಂದ ಇದಕ್ಕಿಂತ ಉತ್ತಮವಾದ ಮನೋಭಾವ ನಿರೀಕ್ಷಿಸುವುದು ತಪ್ಪು. ಎಂತಲೇ ಆ ದೃಷ್ಟಿಯಲ್ಲಿ ಅವರ ಧೋರಣೆ ಕ್ಷಮಾರ್ಹವಾಗಬಹುದು.

"ಪುರುಷರ ಈ ಅಹಂಕಾರಪೂರ್ಣ ಅನುಗ್ರಹದ ಧೋರಣೆಗಿಂತ ಶೋಚನೀಯವಾದುದು, ಖಂಡನೀಯವಾದುದು, ನಾಚಿಕೆಗೇಡಾದುದು,

ಹೆಣ್ಣು ಗಂಡಿನಿಂದ ಸ್ವಾತಂತ್ರ್ಯ ಬೇಡುವ ರೀತಿ. ಹತ್ತಿಪ್ಪತ್ತು ವರ್ಷ ನಿಷ್ಠೆಯಿಂದ ಸೇವೆ ಸಲ್ಲಿಸಿ, ಸೇವೆಯಲ್ಲೇ ವೃದ್ಧನಾದ ಆಳು, ದಣಿಯಿಂದ 'ಪಿಂಚನಿ'ಯನ್ನು ಬೇಡುವಂತೆ, ಇವರು ಪುರುಷನಿಂದ, ಶತಶತಮಾನಗಳ ಸೇವೆಯ, ದಾಸ್ಯದ ಪಾರಿತೋಷಕವಾಗಿ ಸ್ವಾತಂತ್ರ್ಯವನ್ನು ಕೇಳುತ್ತಿದ್ದಾರೆ. ಗಾಂಧೀಜೀ ಭಾರತ ಸ್ವಾತಂತ್ರ್ಯಕ್ಕಾಗಿ ಕ್ರಾಂತಿಯ ಕರೆ ಕೊಟ್ಟ ಕಾಲದಲ್ಲಿ ಶಾಸನಸಭಾಭವನಗಳಲ್ಲಿ ಬ್ರಿಟಿಷರಿಂದ ಬಿಡುಗಡೆಯ ವರವನ್ನು ಬೇಡಿದ ದೇಶಭಕ್ತರ ದೇಶಭಕ್ತಿಯಷ್ಟೇ, ಈ ಹೆಂಗಸರ ಸ್ತ್ರೀತ್ವ ಭಕ್ತಿಯೂ ಬರೀ ಅಣಕವಾಗಿದೆ, ನಗೆಪಾಟಲಾಗಿದೆ.

"ಈ ದಿನವೂ ಒಂದಿಬ್ಬರು ವಿದ್ಯಾರ್ಥಿಗಳು ಹಲವಾರು ದೃಷ್ಟಿಯಿಂದ ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು ಎಂದು ಹೇಳಿದ್ದಾರೆ. ಅದರ ಯುಕ್ತಾ ಯುಕ್ತತೆಯ ಬಗ್ಗೆ, ನಾನೀಗ ವಿವೇಚನೆ ಮಾಡಬೇಕಾಗಿಲ್ಲ. ಇಂದು ಸ್ತ್ರೀಯಲ್ಲಿ ಸ್ವಾತಂತ್ರ್ಯಕ್ಕೆ ಅನರ್ಹತೆ ಎಂದು ಕಂಡುಬರುವ ಗುಣಗಳು, ಶತ ಶತಮಾನಗಳ ಪುರುಷ ದಾಸ್ಯದ ಪರಿಣಾಮವೆಂಬುದನ್ನು ಮರೆತು ಅವರು ಮಾತನಾಡಿದಾರೆ – ಅದು ಸ್ವಾಭಾವಿಕವೇ. ಹುಲಿಗೆ ತಾನು ತಿಂದ ಹಸುವಿನ ನೆನಪಿರಬೇಕು ಎಂದು ಯಾರೂ ನಿರೀಕ್ಷಿಸುವುದಿಲ್ಲ. ಅದು ಹಸು ತನಗೆ ಬೆದರು ವುದರಿಂದ ತನ್ನ ಆಹಾರಕ್ಕಾಗೇ ಹುಟ್ಟಿದ ಪ್ರಾಣಿ ಎಂದು ಭಾವಿಸುವುದೂ ಆ ದೃಷ್ಟಿಯಿಂದ ಸಹಜವೇ. ಸ್ತ್ರೀ ಸ್ವಾತಂತ್ರ್ಯದ ವಿರುದ್ಧ ಮಾತನಾಡಿದ ಆ ಮಿತ್ರರಿಗೆ ನನ್ನ ಅಭಿನಂದನೆಗಳು. ಸ್ತ್ರೀಯ ಬಗ್ಗೆ ತೋರಿಕೆಯ ಸಹಾನುಭೂತಿ ತೋರಿಸುವ ಹಿತಶತ್ರುಗಳಿಗಿಂತ ಅವರು ಮೇಲು – ತಮ್ಮ ಶತ್ರು ಯಾರು, ಅವರ ಸ್ವರೂಪವೇನು ಎಂದು ತೋರಿಸಿದಾರೆ ಇವರು. ಇವರೂ ನಮ್ಮ ಶತ್ರು ಗಳು. ಈ ಇಬ್ಬಗೆಯ ಶತ್ರುಗಳನ್ನು ಗೆಲ್ಲದೆ ಸ್ತ್ರೀಗೆ ಮುಕ್ತಿ ಸಾಧ್ಯವಿಲ್ಲ. ಇಂಥವರನ್ನು ನಾನು ದ್ವೇಷಿಸುತ್ತೇನೆ. ಆದರಲ್ಲಿ ಸಂಶಯವೇ ಇಲ್ಲ.

"ಆದರೆ ಇವರಿಗಿಂತ ಹೆಚ್ಚಾಗಿ ದ್ವೇಷಿಸುವುದು ನಾನು ಈ ಹಿಂದೆ ಹೇಳಿದ ಗುಲಾಮ ಮನೋಭಾವದ, ಅನುಗ್ರಹ ಯಾಚಕರಾದ ಹೆಂಗಸರನ್ನು. ಹೆಂಗಸ ರಿಗೆ ಗಂಡಸರಿಗಿಂತ ಹೆಚ್ಚಾಗಿ ಈ ಬಗೆಯ ಹೆಂಗಸರೇ ಪ್ರಚಂಡ ವೈರಿಗಳು. ಪುರುಷನ ಬಳಿ ಯಾಚನೆಗೆ ಹೊರಟ ಇವರು ಪುರುಷನ ಪ್ರತಿಷ್ಠೆಗೆ ಕೋಡು ಮೂಡಿಸಿ, ಹೆಣ್ಣಿನ ದಾಸ್ಯಶೃಂಖಲೆಯನ್ನು ಮತ್ತಷ್ಟು ಬಿಗಿ ಮಾಡುತ್ತಿದ್ದಾರೆ. ಈ ದಾಸ್ಯ ದೈವೀಕೃತವಾದದ್ದು, ಈ ಶಾಪ ಪುರುಷಾನುಗ್ರಹದಿಂದ ಮಾತ್ರವೇ

ನಿವಾರಣೆಯಾಗತಕ್ಕದ್ದು ಎಂಬ ಮನೋಭಾವವನ್ನು ಬೆಳಸುತ್ತಾರೆ. ಎಂತಲೇ ಇವರು ಹೆಣ್ಣಿಗೆ ಹೆಚ್ಚಿನ ವೈರಿಗಳು.

"ಹೆಣ್ಣು ಸ್ವತಂತ್ರಳಾಗಬೇಕು, ನಿಜ. ಆದರೆ ಯಾಚನೆಯಿಂದ, ಪರಾನುಗ್ರಹದಿಂದ ಯಾರೂ ಸ್ವತಂತ್ರರಾಗಲು ಸಾಧ್ಯವಿಲ್ಲ. ಹೆಣ್ಣು ಸ್ವತಂತ್ರಳಾಗಬೇಕಾದರೆ ಮೊಟ್ಟಮೊದಲು ಆಕೆಗೆ ನಾನು ಜನ್ಮತಃ ಸ್ವತಂತ್ರಳು, ಪುರುಷ ಸ್ವಾರ್ಥಕ್ಕೆ ಬಲಿಯಾಗಿ ಗುಲಾಮಳಾಗಿದೇನೆ ಎಂಬ ಅರಿವು ಬರಬೇಕು. ಸ್ವಾತಂತ್ರ್ಯ ಅನುಗ್ರಹವಾಗದೆ, ಬಲಿದಾನದ ಸಿದ್ಧಿಯಾಗಿ ಬರಬೇಕು. ಹಾಗಾಗಬೇಕಾದರೆ ದಾಸ್ಯಮನೋಭಾವದ ವೈರಿಗಳನ್ನು ಮಟ್ಟಹಾಕುವಂತೆಯೇ, ಯಾಚಕ ಮನೋಭಾವದ ಈ ಸಂಗಡಿಗರನ್ನೂ ಮಟ್ಟಹಾಕಬೇಕು.

"ಹೆಣ್ಣಿಗೆ ಮುಕ್ತಿ ಬೇಕು, ಸ್ವಾತಂತ್ರ್ಯ ಬೇಕು. ಪುರುಷ ದಾಸ್ಯ ನಿರ್ಮೂಲವಾಗಬೇಕು. ಅದಕ್ಕೆ ಮೊದಲು ಈ ಹೆಣ್ಣೆನಿಸಿಕೊಂಡ ಹಿತಶತ್ರುಗಳಿಂದ ಮುಕ್ತಿಯಾಗಬೇಕು. ಮನೆಯಲ್ಲೇ ಅಡಗಿದ ಈ ವೈರಿ ನಿರ್ಮೂಲನ ಸ್ತ್ರೀ ಸ್ವಾತಂತ್ರ್ಯ ಸಮರದ ಮೊದಲ ಹೆಜ್ಜೆ. ಎದ್ದೇಳಿ – ಈ ವೈರಿ ಮರ್ಧನ ಕಾರ್ಯಕ್ಕೆ.

"ಸ್ತ್ರೀ ಸ್ವಾತಂತ್ರ್ಯ ಚಿ ರಾ ಯು ವಾ ಗ ಲಿ, ಪುರುಷ ಯಾಚಕ ಪಡೆ ನಿರ್ನಾಮವಾಗಲಿ."

ಪ್ರಭಾವತಿಯ ಈ ಅನಿರೀಕ್ಷಿತ, ಆಕ್ರೋಶಪೂರ್ಣ ಭಾಷಣವನ್ನು ಕೇಳಿ ಸಭೆಗೆ ಗರ ಹೊಡೆದಂತಾಯಿತು. ಪ್ರತಿ ಭಾಷಣಾನಂತರವೂ ಚಪ್ಪಾಳೆ ತಟ್ಟುವ ವಿನೋದಕ್ಕಾಗೇ ಬಂದಿದ್ದವರಿಗೂ, ಚಪ್ಪಾಳೆ ತಟ್ಟಬೇಕೆಂಬುದು ನೆನಪಾಗಲಿಲ್ಲ. ಅವಳಿಗಿಂತ ಮೊದಲು ಭಾಷಣ ಮಾಡಿದ ಹುಡುಗಿಯರ ಮುಖಗಳೆಲ್ಲವೂ ಆರತಿ ಮುಕ್ಕುಳಿಸಿದಂತಿತ್ತು. ಆ ದಿನದ ಸಭೆಯಲ್ಲಿ ಭಾಗವಹಿಸಿದವರೆಲ್ಲರೂ, ಅಂದು ಬಹು ಭಾಗ ಮನೋರಂಜನೆ, ಲಘು ವಿಚಾರ ವಿಮರ್ಶೆಯನ್ನು ನಿರೀಕ್ಷಿಸಿದ್ದರೇ ಹೊರತು, ಇಂಥ ಕ್ರೋಧ, ಹಿಂಸೆ, ಹಗೆತನಗಳ ಲಾವಾಪ್ರವಾಹಕ್ಕೆ ಸಿದ್ಧವಾಗಿರಲಿಲ್ಲ. ಒಂದು ಗಳಿಗೆ ಎಲ್ಲರಿಗೂ ಹಿಡಿದು ಬಿಟ್ಟಂತಾಯಿತು. ಕೆಂಪು ಸೀರೆ, ಕೆಂಪು ಕುಬುಸಗಳನ್ನು ಧರಿಸಿ, ಭಾಷಣದ ಆವೇಶದಿಂದ ಮುಖ ಕೆಂಪಾಗಿ, ನಿಶ್ಶಬ್ದತೆಯ ನಡುವೆ ವೇದಿಕೆಯಿಂದಿಳಿದ ಪ್ರಭಾವತಿ, ಬೆಂಕಿಯ ಕುಡಿಯಂತೆ ಕಂಡಳು.

ಅಷ್ಟು ಹೊತ್ತು ನಿಶ್ಶಬ್ದವಾಗಿದ್ದ ಸಭೆಯಲ್ಲಿ, ಬಳಿಕ ಮೌನ ಸತ್ತು

ಗಜಬಿಜಿ ಗುಸಪಿಸಗಳಾರಂಭವಾಯಿತು. 'ಅಮೆಜಾನ್' 'ಫೈರ್ ಬ್ರಾಂಡ್' 'ಪುರುಷ ದ್ವೇಷಿ' ಎಂದಾಡಿದ ಮಾತುಗಳು ಪ್ರಭಾವತಿಯ ಕಿವಿಗೂ ಬಿದ್ದವು. ಆದರೆ ಅದ್ಯಾವುದರ ಪರಿವೆಯೂ ಇದ್ದಂತಿರಲಿಲ್ಲ.

ಅಧ್ಯಕ್ಷ ಭಾಷಣ, ವಂದನಾರ್ಪಣೆಗಳು ಹೇಗೆ ಮುಗಿಯಿತೋ ಅವಳಿಗೆ ತಿಳಿಯದು. ಕಾರ್ಯಕ್ರಮ ಮುಗಿದ ಕೂಡಲೇ ಎದ್ದು ಹೊರಬಂದಳು. ಜೊತೆಯ ಹುಡುಗಿಯರೊಂದಿಗೆ ಬೆರೆಯಲೂ ಅವಳಿಗೆ ಮನಸ್ಸಿರಲಿಲ್ಲ. ಒಂಟಿಯಾಗಿಯೇ ಹೆಜ್ಜೆ ಹಾಕಿದಳು.

ಪ್ರಭಾವತಿಗೆ ಎಂದೂ ಭಾಷಣ ಮಾಡಿ ಅಭ್ಯಾಸವಿರಲಿಲ್ಲ. ಉಳಿದವರ ಭಾಷಣಗಳ ಕೇಳಿಕೆಯ ಫಲವಾಗಿ ಮೂಡಿ ಬಂದ ಕ್ರೋಧ ಅವಳಿಂದ ಭಾಷಣ ಮಾಡಿಸಿತ್ತು. ಅಷ್ಟೇ ಅಲ್ಲ. ಆ ಹೊತ್ತಿನ ಸ್ಫೂರ್ತಿಯಲ್ಲಿ ಅವಳ ವಿಚಾರಧಾರೆ ಸ್ಪಷ್ಟವಾಗಿತ್ತು, ನಿಚ್ಚಳವಾಗಿತ್ತು. ಅದೆಲ್ಲದರ ಬಗ್ಗೆ ಅವಳು ಹೆಚ್ಚು ಯೋಚಿಸಿಯೇ ಇರಲಿಲ್ಲ. ಆದರೂ ಆ ಮಾತಾಡಿದ್ದಳು. ಎಂತಲೇ ಆ ಭಾಷಣದ ಪರಿಣಾಮ, ಉಳಿದವರ ಮೇಲಾದುದಕ್ಕಿಂತ ಹೆಚ್ಚು ಅವಳ ಮೇಲಾಗಿತ್ತು. ಅದನ್ನೇ ಯೋಚಿಸುತ್ತ ನಡೆದಿದ್ದಳು.

ಅಷ್ಟು ದೂರ ಹೋದ ಮೇಲೆ ಯಾರೋ ಹಿಂದಿನಿಂದ ಕೂಗಿದಂತಾಯಿತು. ತಿರುಗಿ ನೋಡಿದಳು. ಯೂನಿಯನ್ನಿನ ಕಾರ್ಯದರ್ಶಿ ಚಂದ್ರಶೇಖರ್. ಸ್ತ್ರೀ ಸ್ವಾತಂತ್ರ್ಯದ ಪರವಾಗಿ ಭಾಷಣ ಮಾಡಿದವರಲ್ಲಿ ಆತನೂ ಒಬ್ಬ.

"ಕ್ಷಮಿಸಿ" ಎಂದು ಆತ ಮಾತನ್ನು ಆರಂಭಿಸಿದ.

"ನನ್ನಿಂದ ಏನಾಗಬೇಕಾಗಿತ್ತು?" ನಡೆಯುತ್ತಲೇ ಕೇಳಿದಳು ಪ್ರಭಾವತಿ.

"ಈ ದಿನ ನಿಮ್ಮ ಭಾಷಣ ತುಂಬಾ ವಿಚಾರ ಪ್ರಚೋದಕವಾಗಿತ್ತು. ಕಂಗ್ರ್ಯಾಚ್ಯುಲೇಷನ್ಸ್. ನಾವಾರೂ ಸೀರಿಯಸ್ ಆಗಿ ಮಾತನಾಡಿರಲಿಲ್ಲ. ಹಾಗೆ ಮಾತನಾಡುವುದು ಇಂದಿನ ಸಭೆಯ ಉದ್ದೇಶವೂ ಆಗಿರಲಿಲ್ಲ. ನಿಮ್ಮ ಭಾಷಣದಿಂದ ಇಂದಿನ ಸಭೆಗೆ ಬೇರೊಂದು ಸ್ವರೂಪವೇ ಬಂದಿತು."

"ಥ್ಯಾಂಕ್ಸ್."

"ಪುರುಷರ ವಿಷಯದಲ್ಲಿ ನಿಮಗಷ್ಟು ದ್ವೇಷವಿದೆ ಎಂದು ನಾನು ತಿಳಿದಿರಲಿಲ್ಲ."

"ಕಟುಕನ ಮೇಲೆ ಕುರಿಮರಿಗೆ ಪ್ರೀತಿ ಇರಬೇಕು ಎಂದು ಭಾವಿಸಿದರೆ ಯಾರ ತಪ್ಪು?"

"ಅದು ಹೋಗಲಿ, ನಿಮ್ಮ ಜಾತಿಯ ಮೇಲೇ ನಿಮಗಷ್ಟು ದ್ವೇಷವೇ?"

"ಇರಬಾರದೇನು?"

"ಹಾಗಲ್ಲ, ಹೆಂಗಸರಿಗೆ ಹೆಂಗಸರ ಮೇಲೆ ಅಭಿಮಾನವಿರುವುದು ಸಹಜ...."

"ಇರಬಹುದು," ತಾತ್ಸಾರವಾಗಿ ಹೇಳಿದಳು ಪ್ರಭಾವತಿ.

"ಅಂದರೆ...."

"ಏನು ಅಂದರೆ....?"

"ಓ. ನನ್ನ ತಪ್ಪು ಕ್ಷಮಿಸಿ. ಐ ಥಾಟ್ ಯೂ ಟೂ ವರ್ ಏ ಉಮನ್!"

ನಗುನಗುತ್ತಾ ನುಡಿದ ಚಂದ್ರಶೇಖರ. ಅವನ ಕಟಕಿ ನುಡಿಯನ್ನು ಕೇಳಿ, ನಡೆಯುತ್ತಲೇ ಮಾತನಾಡುತ್ತಿದ್ದ ಪ್ರಭಾವತಿ ತಟಕ್ಕನೆ ನಿಂತು ಅವನ ಮುಖ ನೋಡಿದಳು. ಹತ್ತಿರದಲ್ಲೇ ಹೋಗುತ್ತಿದ್ದ ಕೆಲವರು ಹುಡುಗರ ಕಿವಿಗೆ ಚಂದ್ರಶೇಖರನ ಮಾತು ಬಿದ್ದು, ಅವರೂ ನಕ್ಕರು. ಆ ನಗು ಪ್ರಭಾವತಿಯಲ್ಲಿ ಸಿಟ್ಟನ್ನು ಕೆರಳಿಸಿತು.

"ನಿಮ್ಮ ಅಭಿನಂದನೆಗಳ ಕಾರ್ಯಕ್ರಮ ಮುಗಿದಿದ್ದರೆ, ಇನ್ನು ನಿಮ್ಮ ದಾರಿ ಹಿಡಿಯಬಹುದು."

"ದ....ದಯವಿಟ್ಟು....ತಪ್ಪು ತಿಳಿದುಕೊಳ್ಳಬೇಡಿ...."

"ತಪ್ಪು ತಿಳಿದುಕೊಳ್ಳುವುದು? ಅದು ಸಾಧ್ಯವಿಲ್ಲ. ಹೀನ ನಡತೆ ನಿಮ್ಮ ಹುಟ್ಟು ಗುಣ" ಎಂದು ಮುಖಕ್ಕೆ ರಾಚಿದಂತೆ ಹೇಳಿ ಪ್ರಭಾವತಿ ಸರಸರ ಹೆಜ್ಜೆ ಹಾಕಿದಳು. ಅವನಾಡಿದ ಕಟಕಿ ನುಡಿ ಅವಳ ಬೆನ್ನಟ್ಟಿತು.

ಅಂದಿನಿಂದ 'ಕ್ಷಮಿಸಿ. ನೀವೂ ಹೆಂಗಸು ಎಂದಿದ್ದೆ' ಎಂದ ಚಂದ್ರಶೇಖರನ ಮಾತು, ಹೇಗೋ ಹೇಗೊ ಹರಡಿ, ಸೆಂಟ್ರಲ್ ಕಾಲೇಜಿನ ಆವರಣದಲ್ಲೆಲ್ಲಾ ಹಬ್ಬಿ, ಮಹಾರಾಣಿ ಕಾಲೇಜಿನಲ್ಲೂ ಹರಡಿತು. ಆ ಮಾತು ಪ್ರಭಾವತಿಯನ್ನು ಕೆಣಕಲು ಅವಳ ಸಹಪಾಠಿಗಳಿಗೊಂದು ಸಾಧನವಾಯಿತು.

ಆ ಮಾತು ಪ್ರಭಾವತಿಯ ಹೃದಯದಲ್ಲಿ ಮುಳ್ಳಿನಂತೆ ಅಳುಪುತ್ತಿತ್ತು. ಆ ಮಾತು ಕಿವಿಗೆ ಬಿದ್ದಾಗೊಮ್ಮೆ ಕೆಂಡ ತುಳಿದಂತೆ ಮಿಡುಕುವಳು. ಚಂದ್ರ

ಶೇಖರನ ವಿಷಯದಲ್ಲಿ ಅವಳ ಹೃದಯದಲ್ಲಿ ಹಿಂಸೆ ಹೊಗೆಯಾಡುವುದು. ಆದರೆ ಮರುಗಳಿಗೆಯೇ ಅದನ್ನು ಮರೆಯಲು ಪ್ರಯತ್ನ ಮಾಡುವಳು.

ಇಂದು ಮತ್ತೆ ಕೋಮಲ ಆ ಮಾತಾಡಿ, ಪ್ರಭಾವತಿಯ ಹೃದಯದಲ್ಲಿ ಕೆಂಡವನ್ನು ಕಲಕಿದ್ದಳು. ಅಂದಿನಿಂದ ಪ್ರಭಾವತಿ ಎಂದೂ ಮತ್ತೆ ಕೋಮಲೆಯೊಂದಿಗೆ ಮಾತನಾಡಲಿಲ್ಲ.

ಮತ್ತೆ ಅವಳ ಹೃದಯದಲ್ಲಿ ಚಂದ್ರಶೇಖರನ ಬಗ್ಗೆ ಹಿಂಸೆ ಜಾಗ್ರತವಾಯಿತು. ಗಂಡಸಿನ ಬಗ್ಗೆ ಅವಳ ಹಗೆ ಬೆಳೆಯಿತು.

೫

ಪ್ರಭಾವತಿಯ ಮನಸ್ಸಿನಲ್ಲಿ ಪುರುಷದ್ವೇಷ ಬೆಳೆದಂತೆ, ಅವಳ ಮೈಯಲ್ಲಿ ಹೆಣ್ಣುತನವೂ ಬೆಳೆಯುತ್ತಿತ್ತು. ಹದಿನಾರನೆಯ ವಯಸ್ಸಿಗೇ ಅವಳಲ್ಲಿ ಹೆಣ್ಣುತನ ಅರಳಿದ್ದರೂ, ಅದು ಪ್ರಭಾವತಿಯ ಮನೋರಂಗದಲ್ಲಿ ಯಾವ ಮಾರ್ಪಾಟನ್ನೂ ಮಾಡಿರಲಿಲ್ಲ. ಗಂಡಸಿಗೆ ಸರಿಗೈಯಾಗಿ ಬಾಳಬೇಕೆಂಬ ಹಂಬಲ, ಅವಳ ಹೆಣ್ಣುತನದ ಭಾವನೆಯನ್ನು ಬಹುಮಟ್ಟಿಗೆ ತುಳಿದಿಡಲು ಕಾರಣವಾಗಿತ್ತು. ಗಂಡು – ಹೆಣ್ಣಿನ ಸಖ್ಯದ ವಿಷಯ ಅವಳಿಗೆ ವೈಯಕ್ತಿಕವಾಗಿ ಅನುಭವವಾಗದಿದ್ದರೂ ಅರಿಯದ ವಿಷಯವಾಗಿರಲಿಲ್ಲ. ಆ ಸಖ್ಯವೂ ಅವಳ ದೃಷ್ಟಿಯಲ್ಲಿ ಒಂದು ಬಗೆಯ ಹೆಣ್ಣಿನ ಗುಲಾಮಗಿರಿಯ ಚಿಹ್ನೆ. ಎಂತಲೇ ಬಯಕೆಗಳನ್ನೆಲ್ಲಾ ತುಳಿದಿಟ್ಟಿದ್ದಳು.

ಅವಳಿಗೆ ಆದಾವುದೂ ಚಿಂತೆ ಇರಲಿಲ್ಲವಾದರೂ, ಅವಳ ತಾಯಿಗೇನೋ ಮಗಳು ದೊಡ್ಡವಳಾದ ಚಿಂತೆ ಇದ್ದೇ ಇತ್ತು. ಆಗಾಗ ಆಕೆ ಗಂಡನೊಂದಿಗೆ ಮಗಳ ಮದುವೆಯ ವಿಚಾರ ಪ್ರಸ್ತಾಪ ಮಾಡುವಳು. ಸಂಜೀವರಾಯರಿಗೂ ಮಗಳ ಮದುವೆಯ ವಿಚಾರದಲ್ಲಿ ಅವಸರವಿರಲಿಲ್ಲವಾದರೂ, ಆ ಯೋಚನೆ ಇಲ್ಲದಿರಲಿಲ್ಲ. ಒಮ್ಮೊಮ್ಮೆ ಗಂಡಹೆಂಡಿರಿಬ್ಬರೂ ಕಲೆತು, ಯೋಗ್ಯವಾದ ಸಂಬಂಧಗಳು ಎಲ್ಲಿವೆ, ಏನು ವಿಷಯ ಎಂದು ಚರ್ಚಿಸುವರು. ಅವರ ಚರ್ಚೆ ಪ್ರಭಾವತಿಯ ಕಿವಿಗೂ ಬೀಳುವುದು. ಆದರೂ ಅವಳು ಅದಕ್ಕೂ ತನಗೂ ಸಂಬಂಧವಿಲ್ಲವೆಂಬಂತೆ ಇದ್ದುಬಿಡುತ್ತಿದ್ದಳು.

ಒಮ್ಮೆ ರತ್ನಮ್ಮನ ನೆಂಟರೊಬ್ಬರು ಬಂದಾಗ, ಪ್ರಭಾವತಿ ಅತ್ತಕಡೆ ಗಮನ ಕೊಡಲೇಬೇಕಾದ ಪರಿಸ್ಥಿತಿ ಬಂತು.

ವೆಂಕಪ್ಪಯ್ಯ ಸಂಜೆ ಕಾಫಿ ಕುಡಿಯುತ್ತಾ ಕುಳಿತಾಗ, ಪ್ರಭಾವತಿ ಕಾಲೇಜಿನಿಂದ ಬಂದಳು. ವೆಂಕಪ್ಪಯ್ಯ ಅಲ್ಲಿದ್ದುದನ್ನು ಕಂಡು ತನ್ನ ಕೋಣೆಗೆ ಹೋದಳು.

"ಇವಳೇ ದೊಡ್ಡ ಮಗಳಲ್ಲವೇ ರತ್ನಮ್ಮ?" ವೆಂಕಪ್ಪಯ್ಯ ಕೇಳಿದರು, ತನ್ನಿದಿರು ಹಾದುಹೋದ ಪ್ರಭಾವತಿಯನ್ನು ಕಂಡು.

"ಹೂ."

"ಓದುತ್ತಿದ್ದಾಳೇನು ?"

"ಹೂ."

"ಯಾವ ಕ್ಲಾಸು ?"

"ಸೀನಿಯರ್ ಇಂಟರ್."

"ವಯಸ್ಸೆಷ್ಟಾಯಿತು ?"

"ಹದಿನೇಳಕ್ಕೆ ಬಂತು ಮಾವಯ್ಯ."

"ಹದಿನೇಳು. ಹೆಚ್ಚೇ ಆಯಿತು. ಇನ್ನೂ ಎಲ್ಲೂ ಗಂಡು ನೋಡಿಲ್ಲ ವೇನು ?"

ಅವರಾಗಿಯೇ ಪ್ರಭಾವತಿಯ ಮದುವೆಯ ಪ್ರಸ್ತಾಪವೆತ್ತಿದ್ದನ್ನು ಕೇಳಿ, ರತ್ನಮ್ಮನಿಗೆ, ಅವರಿಗೆ ಸರಿಯಾದ ಗಂಡು ಯಾವುದಾದರೂ ಗೊತ್ತಿರಬಹು ದೇನೋ ವಿಚಾರಿಸಬೇಕು ಎಂದು ಆಸೆಯಾಯಿತು.

"ನಾವು ಎಲ್ಲೆಲ್ಲೋ ನೋಡುತ್ತಾ ಇದೀವಿ. ಆದರೆ ಯಾವುದೂ ನಿಷ್ಕರ್ಷೆ ಯಾಗಿಲ್ಲ. ನಿಮಗೆ ಯಾವುದಾದರೂ ಸರಿಯಾದ ವರ ಗೊತ್ತಿದೆಯೇ ಮಾವಯ್ಯ ?"

"ಗಂಡಿಗೇನು ಬರ, ಎರಡು ಮೂರು ಇವೆ—ನಾನು ನೋಡಿದ ಹಾಗೆ. ಅವಳ ಜಾತಕ ಇದೆಯೇನು ?"

"ಹೂ."

"ಜಾತಕ ಇದ್ದರೆ ಕೊಟ್ಟಿರು, ನೋಡೋಣ" ಎಂದರು ವೆಂಕಪ್ಪಯ್ಯ. ಹತ್ತಿರದ ರೂಮಿನಲ್ಲೇ ಕೂತ ಪ್ರಭಾವತಿಗೆ ಅವರ ಸಂಭಾಷಣೆ ಕೇಳಿಸು ತ್ತಿತ್ತು. ಮಾತು ತನ್ನ ಜೀವನಕ್ಕೆ ಸಂಬಂಧಿಸಿದ್ದಾದರೂ ಅವಳು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ.

ಆದರೆ ವೆಂಕಪ್ಪಯ್ಯ ಹೋಗುವಾಗ ಪ್ರಭಾವತಿಯ ಜಾತಕ ತೆಗೆದು

ಕೊಂಡು ಹೋಗಿ, ಹದಿನೈದೇ ದಿನಗಳಲ್ಲಿ, ಸಂಜೀವರಾಯರು ಒಪ್ಪಬಹು ದಾದ ಸಂಬಂಧವನ್ನು ಪತ್ತೆ ಹಚ್ಚಿ, ಅವರು ಒಪ್ಪುವುದಾದರೆ, ಪರಸ್ಪರ ಭೇಟಿಗೆ ಹುಡುಗನನ್ನು ಕರೆದುಕೊಂಡು ಬರುವುದಾಗಿ ಕಾಗದ ಬರೆದರು.

ರತ್ನಮ್ಮನವರಿಗೇನೊ ವೆಂಕಪ್ಪಯ್ಯ ಸೂಚಿಸಿದ ಸಂಬಂಧ ಒಪ್ಪಿಗೆ ಯಾಗಿತ್ತು. 'ಬನ್ನಿ ಎಂದೇ ಕಾಗದ ಬರೆದುಬಿಡಿ' ಎಂದು ಸೂಚಿಸಿದಳು. ಆದರೆ ಸಂಜೀವರಾಯರು ಮಗಳು ಈಗಲೇ ಮದುವೆಗೆ ಒಪ್ಪುವಳೋ ಇಲ್ಲವೋ ತಿಳಿದುಕೊಂಡು ಕಾಗದ ಬರೆಯೋಣ ಎಂದರು. ಮಗಳನ್ನು ಮದುವೆಗೆ ಒಪ್ಪಿಸುವ ಜವಾಬ್ದಾರಿಯನ್ನು ರತ್ನಮ್ಮನವರೇ ವಹಿಸಿಕೊಂಡರು. ಸಂಜೆಗೆ ಪ್ರಭಾವತಿ ಕಾಲೇಜಿನಿಂದ ಹಿಂದಿರುಗಿದ ಮೇಲೆ, ಮಗಳ ಮುಂದೆ ಆ ವಿಷಯ ಎತ್ತಿದರು.

ಮದುವೆಯ ವಿಷಯ ಕೇಳಿದ ಕೂಡಲೇ ಪ್ರಭಾವತಿ, ಆಕಸ್ಮಿಕವಾಗಿ ಹಾವು ಕಂಡವಳಂತೆ ಬೆದರಿದಳು. ಒಂದು ಗಳಿಗೆ ಸುಮ್ಮನಿದ್ದು ಬಳಿಕ ಖಚಿತವಾಗಿ ಹೇಳಿದಳು—

"ಮದುವೆ-ಆ ವಿಷಯವನ್ನೇ ನನ್ನ ಮುಂದೆ ಎತ್ತಬೇಡ."

"ಹಾಗಂದರೆ ಹೇಗೆ ಪ್ರಭಾ. ಹೆಣ್ಣಾಗಿ ಹುಟ್ಟಿದವಳು ಮದುವೆ ಯಾಗದಿದ್ದರೆ ಆಗುತ್ತದೆಯೇ? ಇವತ್ತಲ್ಲ ನಾಳೆ ಆಗಲೇಬೇಕು. ಎಂದಾ ದರೂ ಒಂದು ದಿನ ಅದು ತಪ್ಪಿದ್ದಲ್ಲ. ಅದಕ್ಕೇ ಒಳ್ಳೇ ಸಂಬಂಧ ಬಂದಾಗ ಆ ವಿಚಾರ ಮಾಡಬೇಕು. ನಿನಗೆ ಹುಡುಗ ಒಪ್ಪಿಗೆಯಾಗದಿದ್ದರೆ ಬೇಡ. ಹಾಗೆಂದು ಮದುವೆಯೇ ಬೇಡವೆಂದರೆ ಆಗುತ್ತದೆಯೇ?"

"ಹುಡುಗ ಬೇಕಾದ ಹಾಗಿರಲಿ, ಲಕ್ಷಾಧೀಶ್ವರನಾಗಲಿ-ಮದುವೆಯೇ ಬೇಡ ಎಂದಾಗ ಯಾವುದು ಹೇಗಿದ್ದರೇನು?"

"ವಿಚಿತ್ರವಾಗಿ ಮಾತಾಡುತ್ತೀಯ ತಾಯಿ. ಮದುವೆಯೇ ಬೇಡ ಎಂದರೆ ಹಾಗೇ ಇರುತ್ತೀಯೇನು?"

"ಹೂ."

"ಚೆನ್ನಾಯಿತು. ನಿನ್ನ ಹಾಗೆ ಮಾತಾಡುವವರನ್ನು ನಾನೆಲ್ಲೂ ಕಾಣ ಲಿಲ್ಲ"

"ಏನಾದರೂ ಅಂದುಕೋ ಮಮ್ಮಿ. ಈ ವಿಷಯ ಮಾತ್ರ ನನ್ನ ಮುಂದೆ ಹೇಳಲೇ ಬೇಡ" ಎಂದು ಖಚಿತವಾಗಿ ಹೇಳಿ, ತಾಯಿ ಆ ಮಾತನ್ನು

ಮತ್ತೆ ಮುಂದುವರಿಸಲು ಅವಕಾಶ ಕೊಡದೆ ಎದ್ದು ಹೋದಳು. ಮಗಳ ಮನೋಭಾವವನ್ನು ಕಂಡು ರತ್ನಮ್ಮನಿಗೆ ಆಶ್ಚರ್ಯವಾಯಿತು. 'ಇವಳು ಹೀಗೇ ಬೆಳೆದರೆ ಮುಂದೇನು ಗತಿ' ಎಂದು ಚಿಂತೆಯಾಯಿತು. ತನ್ನ ಮಾತು ಕೇಳದಿದ್ದರೆ ಹೋಗಲಿ, ತಂದೆಯ ಮಾತಾದರೂ ಕೇಳಬಹುದೆಂದು, ನಡೆದುದನ್ನೆಲ್ಲಾ ಸಂಜೀವರಾಯರಿಗೆ ಹೇಳಿ, 'ನೀವಾದರೂ ನಿಮ್ಮ ಮಗಳಿಗೆ ಬುದ್ಧಿ ಹೇಳಿ. ನನ್ನ ಮಾತು ಅವಳಿಗೆ ಯಾವ ಲೆಕ್ಕಕ್ಕೂ ಇಲ್ಲ' ಎಂದರು. ಬೇರೆ ದಾರಿಗಾಣದೆ ಸಂಜೀವರಾಯರೇ ಮಗಳ ಮುಂದೆ ಆ ವಿಷಯ ಎತ್ತಿದರು. ಅವರಿಗೂ ಪ್ರಭಾವತಿ ಅದೇ ಉತ್ತರ ಕೊಟ್ಟಳು.

"ಸದ್ಯಕ್ಕೆ ಮದುವೆ ಬೇಡವೆಂದರೆ ಬೇಡ, ಪ್ರಭಾ. ಆದರೆ ಹೆಣ್ಣಾಗಿ ಹುಟ್ಟಿ ಮದುವೆಯೇ ಬೇಡವೆಂದರೆ ಆಗುತ್ತದೆಯೇ?" ಸಂಜೀವರಾಯರು ಕೇಳಿದರು.

"ಅಂದರೆ ಹೆಣ್ಣಾಗಿ ಹುಟ್ಟಿದ ಮಾತ್ರಕ್ಕೆ ಮದುವೆ ಮಾಡಿಕೊಂಡೇ ತೀರಬೇಕೆ?"

"ಹೂ."

"ಎಷ್ಟೋ ಜನ ಗಂಡಸರು ಮದುವೆ ಇಲ್ಲದೆ ಹಾಗೇ ಇರುವುದಿಲ್ಲವೇ ಪಪ್ಪಾ."

"ಇರುತ್ತಾರೆ. ಆದರೆ ನೀನು ಗಂಡಸಲ್ಲವಲ್ಲ."

"ಹೆಣ್ಣಾಗಿ ಹುಟ್ಟಿದ್ದಕ್ಕೆ ಈ ಭಿನ್ನತೆ ಏಕೆ? ಗಂಡಸರು ಮದುವೆ ಇಲ್ಲದೆ ಇರಬಹುದಾದರೆ ಹೆಂಗಸರೂ ಮದುವೆ ಇಲ್ಲದೆ ಇರಬಾರದೇಕೆ? ಹೆಣ್ಣಿಗೆ ಮದುವೆಯೊಂದೇ ಭವಿಷ್ಯವೇ?"

"ಅಷ್ಟಲ್ಲದೆ ಹೆಂಗಸಿಗೆ ಬೇರೇನು ಬೇಕು ಪ್ರಭಾ?"

"ನಮ್ಮ ಶಿಕ್ಷಣ, ವಿದ್ಯಾಭ್ಯಾಸ, ಸಂಗೀತ, ಕುಶಲಕಲೆ ಇವೆಲ್ಲವೂ...."

"ಅವೆಲ್ಲವೂ ಸಂಸಾರವನ್ನು ಸುಂದರ ಮಾಡುವುದಕ್ಕೆ, ಒಳ್ಳೆ ಹೆಂಡತಿ, ಒಳ್ಳೆ ತಾಯಿಯಾಗುವುದಕ್ಕೆ ಸಾಧನ." ಖಚಿತವಾದ ಧ್ವನಿಯಲ್ಲಿ ರಾಯರು ಉತ್ತರವಿತ್ತರು.

"ಹಾಗಾದರೆ ಗಂಡಸಿನ ಹಾಗೆ ಹೆಂಗಸು ವಿವಾಹದಿಂದ ಸ್ವತಂತ್ರವಾಗಿರಲು ಸಾಧ್ಯವೇ ಇಲ್ಲವೇ?"

"ಊಹೂ. ಅದು ಪ್ರಕೃತಿ ಧರ್ಮ. ಹೆಣ್ಣು ಎಷ್ಟು ಸ್ವತಂತ್ರಳೆಂದು

ಕೊಂಡರೂ ಗಂಡನ್ನು ಅವಲಂಬಿಸಲೇಬೇಕು."

"ಏತಕ್ಕಾಗಿ ಅವಲಂಬಿಸಬೇಕು, ಊಟಕ್ಕೆ ತಾನೇ? ಅದನ್ನು ಹೆಣ್ಣೇ ದುಡಿದರೋ....!"

"ಬರೀ ಅನ್ನದ ಪ್ರಶ್ನೆಯಲ್ಲ ಅದು ಪ್ರಭಾ. ಗಂಡು ಹೆಣ್ಣಿನ ಬಂಧನ ಅದಕ್ಕಿಂತ ಆಳವಾದುದು. ಸ್ವತಂತ್ರವಾಗಿರಬೇಕೆಂದ ಹೆಣ್ಣುಗಳು ಕಡೆಗಾವ ಕೊನೆ ಮುಟ್ಟುವುವೆಂದು ನಾನು ಬಲ್ಲೆ. ಆದ್ದರಿಂದ ಈ ಹುಡುಗಾಟ ಬಿಟ್ಟು ಬಿಡು. ನಾನು ಹೇಳಿದ ಹಾಗೆ ಕೇಳು. ಇಲ್ಲದ ಹಟ ಮಾಡಬೇಡ. ಯೋಚನೆಮಾಡಿ ಉತ್ತರ ಕೊಡು."

ಆಧುನಿಕಳಲ್ಲದ ತಾಯಿಯ ಮತ್ತು ಆಧುನಿಕರೆಂದುಕೊಂಡ ತಂದೆಯ ಬಾಯಿಂದಲೂ ಇದೇ ಮಾತು ಕೇಳಿ, ಪ್ರಭಾವತಿಯ ಮನೋದಿಗಂತವನ್ನು ಕತ್ತಲು ಕವಿದಂತಾಯಿತು. ಮಿದುಳಿನಲ್ಲಿ ಬಿರುಗಾಳಿ ಮೊರೆಯತೊಡಗಿತು.

ಯಾವ ವಿಷಯದ ಬಗ್ಗೆ ಯೋಚಿಸಬಾರದೆಂದು ಅವಳು ತುಳಿದಿಟ್ಟದ್ದಳೋ, ಇಂದು ಅದೇ ಸಮಸ್ಯೆ ಸೇಡು ತೀರಿಸಿಕೊಳ್ಳುವಂತೆ ಭೂತಾಕಾರವಾಗಿ ಮೇಲೆದ್ದು ಅವಳ ಕಣ್ಣೆದಿರು ನಿಂತಿತು.

ಮದುವೆ!

ಹೆಣ್ಣಿನ ಬಾಳಿಗೆ, ಬಯಕೆಗೆ, ಕನಸಿಗೆ, ಎಲ್ಲಕ್ಕೂ ಇದೇ ಕೊನೆಯೇ? ಹೆಣ್ಣಿನ ಇಡೀ ಬಾಳು ಈ ಘಟನೆಗೆ ಸಿದ್ಧತೆಯೇ? ಅದರಾಚೆ....?

ಮದುವೆಯಾದ ಬಳಿಕ ಹೆಣ್ಣಿನ ಗತಿ ಏನೆಂಬುದು ಅವಳಿಗೆ ಗೊತ್ತಿತ್ತು.

ಪ್ರಭಾವತಿಯ ಹಾಗೇ ಹೆಣ್ಣು ಸ್ವತಂತ್ರಳಾಗಬೇಕೆಂದು ಬಯಸುತ್ತಿದ್ದ ಅವಳ ಗೆಳತಿ ರೇವತಿ, ಹಾಸಿಗೆ ತೊಟ್ಟಿಲುಗಳ ನಡುವೆ ಅಲೆಯುತ್ತಾ ಅವೆರಡಕ್ಕಾಗಿ ಗಂಡನ ಸುತ್ತ ಸುತ್ತುವ ಉಪಗ್ರಹವಾಗಿದ್ದಳು.

ಮದುವೆಗೆ ಮೊದಲು ರೇವತಿ, ಕ್ಲಾಸಿನಲ್ಲಿ ಎಲ್ಲ ವಿಷಯದಲ್ಲೂ ಮೊದಲು. ಅಂಥ ಚುರುಕು ಹುಡುಗಿಯರೇ ಇರಲಿಲ್ಲ. ಓದಿನಲ್ಲಿ, ಹಾಡಿನಲ್ಲಿ, ಉತ್ಸಾಹದಲ್ಲಿ....

ಈಗ–ಬರೀ ಉಪಗ್ರಹ—

ತನ್ನ ಭವಿಷ್ಯವೂ ಇಷ್ಟೇನೇ? ಎಷ್ಟೆಷ್ಟು ಹೋರಾಡಿದರೂ ಕೊನೆಗೆ ಇದೇ ಗತಿ ಶರಣೆ ಹೆಣ್ಣಿಗೆ?

ಏಕೆ, ಏಕೆ ಹೆಣ್ಣು ತಾನಾಗಿ ಒಪ್ಪಿ ಗಂಡಿನ ದಾಸ್ಯಕ್ಕೆ ಬಲಿಯಾಗ

ಬೇಕು. ಅದರಿಂದ ದೂರವಾಗಿ, ಸ್ವತಂತ್ರವಾಗಿ ನಿಲ್ಲುವುದು ಸಾಧ್ಯವೇ ಇಲ್ಲವೇ ?

ರೇವತಿಯನ್ನೇ ಈ ಪ್ರಶ್ನೆ ಕೇಳಿದ್ದಳು ಪ್ರಭಾವತಿ–'ನಿನ್ನಂಥವಳೂ ಗಂಡಿನ ಗುಲಾಮಳಾಗುವುದೇ?'

"ಇದು ಗುಲಾಮಗಿರಿಯಲ್ಲ ಪ್ರಭಾವತಿ. ಇದರ ಸವಿಯನ್ನು ನೀನು ಕಾಣೆ."

"ಏನು ಸವಿ ?"

"ಮದುವೆಯಾಗದ ನಿನಗೆ ನಾನು ಅದು ಏನೆಂದು ಹೇಳಲಿ ? ಸಕ್ಕರೆಯನ್ನೇ ಕಾಣದವರಿಗೆ ಸಕ್ಕರೆಯ ಸಿಹಿ ಹೀಗೆಂದು ಹೇಳುವುದು ಸಾಧ್ಯವೇ ? ಮದುವೆಯಾದ ಮೇಲೆ ನಿನಗೇ ತಿಳಿಯುತ್ತದೆ. ಮದುವೆಯಾದ ಮೇಲೆ ಬಾ, ಆಗ ಹೇಳುತ್ತೇನೆ" ಎಂದು ಪ್ರಭಾವತಿಗೆ ಅರ್ಥವಾಗದ ತೃಪ್ತಿಯ ನಗು ನಕ್ಕಿದ್ದಳು ರೇವತಿ.

ಏನು ಸವಿ, ಏನು ಸುಖ ?

ಹೆಣ್ಣು ಗಂಡಿಗೆ ಹೀಗೇಕೆ ಮರುಳಾಗಬೇಕು ? ಹಕ್ಕಿ ತಾನೇ ಪಂಜರಕ್ಕೆ ಜೋತು ಬೀಳಬೇಕೇ?

ಇದುವರೆಗೆ ಪ್ರಭಾವತಿ ಗಂಡು ಹೆಣ್ಣಿನ ಬಾಳಬೆಸುಗೆಯ ಸಮಸ್ಯೆಯ ಬಗ್ಗೆ ವಿಚಾರ ಮಾಡಿರಲಿಲ್ಲ. ತನಗದು ಸಂಬಂಧವಿಲ್ಲವೆಂಬಂತೆ ದೂರವಾಗಿದ್ದಳು.

ಇಂದದು ಅವಳಿದಿರು ಕೆರಳಿ ನಿಂತಿದೆ–ಉತ್ತರ ಬೇಡಿ.

ತಾನು ಬೀದಿಯಲ್ಲಿ ಹೋಗುವಾಗ, ಕಾಲೇಜಿಗೆ ಹೋಗಿ ಬರುವಾಗ, ಗಂಡಸರ ನಡುವೆ ಸುಳಿದಾಗ ಹತ್ತಾರು ಕಣ್ಣು ತನ್ನ ಕಡೆ ನೋಡುವುದನ್ನು ಅವಳು ಅರಿತಿದ್ದಳು. ನೋಡಿ ತಾತ್ಸಾರ ಮಾಡಿದ್ದಳು.

ಈಗ ಆ ಕಣ್ಣುಗಳೇ ಅವಳ ಬಾಳನ್ನು ಸೆರೆ ಹಿಡಿದ ಬಲೆಯಾಗಿ ಬಂದಿವೆ.

ಎಷ್ಟೋ ಬಾರಿ ತನ್ನ ಗೆಳತಿಯರೊಂದಿಗೆ ಅವಳು ಈ ವಿಚಾರ ಚರ್ಚಿಸಿದ್ದಳು–ಚಲನಚಿತ್ರದ ಬಗ್ಗೆಯೋ, ಕವಿತೆಯ ಬಗ್ಗೆಯೋ, ಹಾಡಿನ ಬಗ್ಗೆಯೋ ಚರ್ಚಿಸುವ ನಿರ್ಲಿಪ್ತತೆಯಿಂದ.

ಗಂಡೆಂದಾಗ ಅವಳ ಗೆಳತಿಯರು ಎಷ್ಟೋ ಜನ ಉದ್ರೇಕಿತರಾಗುವುದನ್ನು ಕಂಡಿದ್ದಳು.

ಹಾಗೇಕೆ? ಅವಳಿಗೆ ಮಾತ್ರ ಆ ಅನುಭವವಾಗಿರಲಿಲ್ಲ. ಇತರ ಹುಡುಗಿಯರ ವಿಷಯದಲ್ಲಿ ಕೊಂಚ ಸಲಿಗೆಯಿಂದ ವರ್ತಿಸುವ ಗಂಡಸರೂ ಅವಳ ವಿಷಯದಲ್ಲಿ ಎಚ್ಚರವಾಗಿದ್ದರು.

ಒಬ್ಬ ಹುಡುಗ ಅವಳನ್ನು 'ಹಿಮರಾಶಿ' ಎಂದು ಕರೆದಿದ್ದ.

ತಾನು ಹೆಣ್ಣಲ್ಲವೇ? ಆ ಹುಡುಗ ಕರೆದಂತೆ ಹಿಮರಾಶಿಯೇ? ಅಥವಾ ಚಂದ್ರಶೇಖರ ಅಣಕಿಸಿ ಹೇಳಿದ ಹಾಗೆ ಹೆಣ್ಣಿನ ಆಕಾರವಿದ್ದೂ ಹೆಣ್ಣಲ್ಲವೇ? ತನ್ನೊಳಗೇಕೆ ಈ ಶೀತಲತೆ....

ಹೀಗಿರುವುದು ಮೇಲೇ, ಹಾಗಿರುವುದು ಉತ್ತಮವೇ?

ಈ ಸಮಸ್ಯೆಯ ಮಥನ ಅವಳ ಮಿದುಳಿನಲ್ಲಿ ನಡೆದಾಗಲೇ ಮೊಟ್ಟ ಮೊದಲ ಬಾರಿ ಅವಳು ತನ್ನನ್ನು ತದೇಕಚಿತ್ತದಿಂದ ಗಮನಿಸುವ ಶಾಂತಾರಾಮನ ಕಣ್ಣುಗಳನ್ನು ಗಮನಿಸಿದ್ದು.

ಬಟ್ಟೆಯುಟ್ಟ ಅವಳ ಮೈಯನ್ನು ಬೆತ್ತಲೆ ಮಾಡಿ ನೋಡುವಂತಿತ್ತು ಅವನ ಹರಿತವಾದ ದೃಷ್ಟಿ. ಆ ನೋಟ ಅವಳ ಮೈ ಸೋಕಿದಾಗ ಅವಳೆಂದೂ ಅನುಭವಿಸದ ವಿಚಿತ್ರ ಭಾವನೆಯೊಂದು ಅವಳ ಮೈಯನ್ನು ವ್ಯಾಪಿಸಿತು. ಅವಳ ಮೈಯ ರಕ್ತ ಕಾವೇರಿ, ಮುಖಕ್ಕೇರಿತು. ಆ ನೋಟವನ್ನು ನೋಡಲಾರದೆ ಸರಿದು ಹೋದಳು. ಆದರೂ ಅದರ ನೆನಪು ಮಾಸಲಿಲ್ಲ. ಹೋದತ್ತ ಬಂದತ್ತ ಅವಳನ್ನು ಕಾಡುತ್ತಿತ್ತು—ಆ ಹಸಿದ ಪಶುವಿನ ಬಿಸಿನೋಟ.

ಶಾಂತಾರಾಮ ಅವಳ ಕೊನೆಯ ತಮ್ಮ ಚಂದ್ರುವಿಗೆ ಪಾಠ ಹೇಳಿ ಕೊಡಲು ಬರುವ ಯುವಕ. ಎರಡು ವರ್ಷಗಳಿಂದ ಆತ ಮನೆಗೆ ಬರುತ್ತಿದ್ದರೂ ಪ್ರಭಾವತಿ ಆತನನ್ನು ಗಮನಿಸಿರಲಿಲ್ಲ. ಮನೆಯಲ್ಲಿ ಓಡಾಡುವ ಡ್ರೈವರು, ಮಾಲಿ, ಕೆಲಸದಾಳುಗಳಂತೆಯೇ ಆತನೂ ಒಬ್ಬ ಬಂದು ಹೋಗುತ್ತಾನೆ ಎಂದು ಭಾವಿಸಿದ್ದಳು. ಅವಳೂ ಆತನತ್ತ ನೋಡುತ್ತಿದ್ದಳು. ಆತನೂ ಅವಳತ್ತ ನೋಡುತ್ತಿದ್ದ. ಆದರೆ ಅವನ ಕಣ್ಣನೋಟವನ್ನಾಗಲಿ, ಅದು ತನ್ನನ್ನು ಹಿಂಬಾಲಿಸುವುದನ್ನಾಗಲಿ ಅವಳು ಲೆಕ್ಕಿಸಿರಲಿಲ್ಲ.

ಈಗ—

ಅವನು ಕಣ್ಣುಮರೆಯಾದರೂ ಆ ನೋಟ ಅವಳ ಸುತ್ತಲೂ ಸುತ್ತು

ತ್ತಿರವಂತಿದೆ. ಆ ಅನುಭವದಿಂದ ಅವಳಿಗೆ ಮೊದಲು ಅವನ ಮೇಲೆ ಸಿಟ್ಟು ಬಂತು.

ಒಂದು ದಿನ ಅವನು ತನ್ನನ್ನು ಹಾಗೆ ನೋಡುತ್ತಿದ್ದಾಗ, ಅದೇ ಸಿಟ್ಟಿನಲ್ಲೇ ಕೇಳಿದನು—

"ಅದೇಕೆ ಹಾಗೆ ನೋಡುತ್ತೀರಿ?"

ಕೋಣೆಯಲ್ಲಿ ಬೇರೆ ಯಾರೂ ಇಲ್ಲದುದನ್ನು ಗಮನಿಸಿ ಆತ ಉತ್ತರ ಕೊಟ್ಟ—

"ಸುಂದರ ವಸ್ತುವನ್ನು ನೋಡಬಯಸುವುದು ಕಣ್ಣಿನ ಚಪಲ."

ಆ ಮಾತನ್ನು ಆತನು ಹೇಳಿದಾಗ, ಅವನ ಎದೆಗಾರಿಕೆಗೆ ಸಿಟ್ಟು ಬಂದು, ಅವನ ಕಪಾಳಕ್ಕೆ ಬಿಗಿಯಬೇಕು ಎನಿಸಿತು ಅವಳಿಗೆ. ಒಂದು ಗಳಿಗೆ ಆ ಸಿಟ್ಟು ಉರಿಯಿತು. ಮರುಗಳಿಗೆ ಮಾತಿನ ಚಾತುರಿಗಾಗಿ ನಗು ಬಂತು.

ಅವನು ಅವಳನ್ನು ಸುಂದರಿ ಎಂದ ದಿನ ಮೊದಲ ಬಾರಿಗೆ ಪ್ರಭಾವತಿ ತನ್ನನ್ನು ತಾನು ಹೆಣ್ಣಾಗಿ ಕನ್ನಡಿಯಲ್ಲಿ ನೋಡಿಕೊಂಡಳು. ಅವಳಿಗೆ ತಾನು ಸುಂದರಿ ಎಂದು ಎಂದೂ ಅನಿಸಿರಲಿಲ್ಲ. ಆದರೂ ಅವನ ಮಾತು ಅವಳ ಮುಖಕ್ಕೂ ಮೋಡಿ ಮಾಡಿ, ಅವಳ ಕಣ್ಣಿಗೂ ಅವಳು ಸುಂದರಿಯಾಗಿ ಕಾಣುವಂತೆ ಮಾಡಿತು. ಆ ಮಾತಿನಲ್ಲಿ ಅಷ್ಟು ಶಕ್ತಿಯಿದೆಯೇ?

ಯಾವುದೋ ಶಕ್ತಿ ಅವಳನ್ನು ಅವನ ಬಳಿ ಸೆಳೆಯುತ್ತಿತ್ತು. ಬೇಡ ಬೇಡವೆಂದರೂ ಆ ಕಣ್ಣ ನೋಟವನ್ನು ಬಯಸುವಂತೆ ಮಾಡಿತು. ಅವನು ಮಾತಾಡುವಾಗ ಸಿಟ್ಟಾಗಬೇಕೆನಿಸಿದರೂ, ಅವಳಿಗೆ ಹೇಳದೆ ಕೇಳದೆ ನಗು ಬರುವುದು. ಮತ್ತೊಮ್ಮೆ ಅವನ ಬಾಯಲ್ಲಿ ಸುಂದರಿಯೆಂದು ಕರೆಸಿಕೊಳ್ಳಬೇಕೆನಿಸುವುದು. ಒಂಟಿಯಾಗಿ ಕುಳಿತಾಗ ಅವನ ಹಸಿದ ನೋಟ ಅವಳನ್ನು ಕಾಡುವುದು.

ಒಮ್ಮೊಮ್ಮೆ ಒಂಟಿಯಾಗಿ ಕುಳಿತು ಪ್ರಭಾವತಿ ಹೀಗೇಕೆಂದು ಚಿಂತಿಸುವಳು. ತನ್ನ ಮನಸ್ಸು ಅವನ ನೆನಪಿನ ದಾಸ್ಯತ್ವಕ್ಕೆ ಶರಣಾಯಿತೆನಿಸಿ, ತನ್ನ ಮನೋದೌರ್ಬಲ್ಯದ ಬಗ್ಗೆ ತನ್ನ ಮೇಲೆ ಸಿಟ್ಟು ಬರುವುದು. ಹಾಗೆನಿಸಿದಾಗ ಮೂರು ನಾಲ್ಕು ದಿನ ಅವನನ್ನು ನೋಡುವುದನ್ನೇ ತಪ್ಪಿಸುವಳು. ಆದರೆ ಐದನೆಯ ದಿನ, ಅವಳಿಗರಿವಾಗದಂತೆಯೇ ಅವಳು ಅವನ ಕಣ್ಣ ಮುಂದೆ ಸುಳಿ

ಯುವಳು. ಅವಳನ್ನು ನೋಡಿ ಅವನು ನಸುನಕ್ಕಾಗ, ಅವಳಿಗೆ ವಿಚಿತ್ರವಾದ ಆನಂದವಾಗುವುದು.

ಹುಲ್ಲಿನೊಳಗಿನ ಕಿಡಿ ಎಷ್ಟು ದಿನ ಬರೀ ಹೊಗೆಯಾಗಿರಲು ಸಾಧ್ಯ? ಒಂದಲ್ಲ ಒಂದು ದಿನ ಅದು ಉರಿಯಾಗಿ ಉರಿಯಲೇ ಬೇಕು. ಅವನ ಸ್ನೇಹವೂ ಅಷ್ಟೆ.

ಒಂದು ದಿನ ಸಂಜೆ ಪ್ರಭಾವತಿ ಮನೆಗೆ ಬಂದಾಗ ಚಂದ್ರುವಿನ ಕೋಣೆ ಯಲ್ಲಿ ಶಾಂತಾರಾಂ ಒಬ್ಬನೇ ಕುಳಿತಿದ್ದ.

" ಇದೇನು ಒಬ್ಬರೇ ಕುಳಿತಿದೀರ. ಚಂದ್ರು ಮನೆಯಲ್ಲಿಲ್ಲವೇ ಮೇಸ್ಟರೇ ?"

" ಇನ್ನೂ ಆಟದಿಂದ ಬಂದಿಲ್ಲವೆಂದು ಕಾಣುತ್ತದೆ."

" ಒಬ್ಬರೇ ಕುಳಿತಿರಲು ಬೇಸರವಾಗುವುದಿಲ್ಲವೇ ?"

ಸಹಜವಾಗಿ ಆ ಪ್ರಶ್ನೆಯನ್ನು ಮಾಡಿದಳು ಪ್ರಭಾವತಿ. ಆ ಮಾತು ಕೇಳಿ ಆತ ಅವಳ ಮುಖವನ್ನೇ ದಿಟ್ಟಿಸಿ ನೋಡಿದ.

" ಹೂ. ಆದರೆ ಯಾವುದೂ ಅಭ್ಯಾಸವಾದಾಗ ಅದು ಕಷ್ಟ ಎನಿಸು ವುದಿಲ್ಲ."

ಯಾವಾಗಲೂ ಹೀಗೇಕೆ ಮಾತಾಡುತ್ತಾನೆ ಈ ಮನುಷ್ಯ ? ಸರಳವಾಗಿ ಮಾತನಾಡುವುದೇ ಬರುವುದಿಲ್ಲವೇ ಈತನಿಗೆ, ಅನಿಸಿತು ಪ್ರಭಾವತಿಗೆ.

" ನಿಮ್ಮ ಉತ್ತರ ನನಗೆ ಅರ್ಥವಾಗಲಿಲ್ಲ."

" ನನ್ನ ಯಾವುದು ನಿಮಗೆ ಅರ್ಥವಾಗಿದೆ ?"

ನಗುತ್ತಾ ಆ ಮಾತು ಹೇಳಿದರೂ ಮಾತು ಮಾತೂ ಮಣಭಾರ ಹೊತ್ತಂತೆ ಎಳೆದು ಬಂತು.

" ತಿಳಿಯದಿದ್ದರೆ ಅರ್ಥ ಹೇಳಬಹುದಲ್ಲ."

" ಅರ್ಥದಿಂದ ಅನರ್ಥವೇ ಆದರೋ ?"

" ಹಾಗಾದರೆ ಹೆದರಿಕೆಯಿಂದ, ಹೇಡಿತನದಿಂದ ಈ ರೀತಿ ಅರ್ಥವಾಗದ ಮಾತಾಡುತ್ತೀರೇನು ನೀವು ?"

ಕೆಣಕಿ ಕೇಳಿದಳು ಪ್ರಭಾವತಿ. ಎರಡು ನಿಮಿಷ ಆತ ಆಕೆಯ ಮಾತಿಗೆ ಉತ್ತರ ಕೊಡದೆ, ಅವಳ ಮುಖವನ್ನೇ ನೋಡಿದ. ಅದೇ ಹಸಿದ ಪಶುವಿನ ನೋಟ. ದಿನಕ್ಕಿಂತ ಉಗ್ರವಾಗಿ ಅವಳನ್ನು ದಿಟ್ಟಿಸಿ ನೋಡುತ್ತಿದೆ. ಏಕೋ

ಪ್ರಭಾವತಿಗೆ ಗಾಬರಿಯಾಯಿತು. ಅತ್ತಿತ್ತ ನೋಡಿ ಮತ್ತೆ ಅವನತ್ತಲೇ ನೋಡಿದಳು. ಆಗಲೂ ಅದೇ ಕಣ್ಣು ಅವಳನ್ನು ದಿಟ್ಟಿಸಿ ನೋಡುತ್ತಿದ್ದವು. ನಿಧಾನವಾಗಿ ಅವನ ಬಿಗಿದ ತುಟಿಯ ಮೇಲೆ ನಗು ಅರಳಿತು. ಪ್ರಭಾವತಿಗೆ ಅಲ್ಲಿಂದ ಓಡಿಹೋಗಬೇಕೆನಿಸಿತು. ಆದರೆ ನೆಲಕ್ಕೆ ಕಾಲು ಕೀಲಿಸಿತ್ತು.

"ನಾನು ಹೇಡಿ. ಅಲ್ಲವೇ? ಹಾಗೆಂದು ನಿಮ್ಮ ಸವಾಲು?" ಶಾಂತಾರಾಂ ಹೇಳಿದ.

"ಸವಾಲು? ಯಾರು ಸವಾಲು ಹಾಕಿನವರು?" ಪ್ರಭಾ ಅವನ ಮಾತಿನ ಅರ್ಥ ತಿಳಿಯದೆ ಕೇಳಿದಳು.

"ನೀವು. ನೀವೇ ನನಗೊಂದು ಸವಾಲು."

ಕುಳಿತಿದ್ದ ಶಾಂತಾರಾಂ ತಟಕ್ಕನೆ ಎದ್ದು ನಿಂತು ಎರಡು ಹೆಜ್ಜೆ ಮುಂದೆ ಸರಿದ. ಆಗಲೂ ಪ್ರಭಾವತಿಗೆ ನಿಂತ ಕಾಲು ಅಲುಗಿಸಲಾಗಲಿಲ್ಲ.

"ನಾನು ಹೇಡಿ, ಅರ್ಥವಾಗದ ಮಾತಾಡುತ್ತೇನೆ. ನನ್ನ ಮಾತು ಅರ್ಥವಾಗಬೇಕು. ನಾನು ಹೇಡಿಯೋ ಅಲ್ಲವೋ ತಿಳಿಯಬೇಕು. ಅಲ್ಲವೇ?"

ಅವನ ಮಾತಿನಲ್ಲಿ ಏನೋ ಬೆದರಿಸುವ ಧೋರಣೆಯಿತ್ತು. ಸರ್ಪನೇತ್ರದ ಸಮ್ಮೋಹಕತೆಗೆ ವಶವಾದ ಕಪ್ಪೆಯಂತೆ ನಿಂತು ನೋಡಿದಳು ಪ್ರಭಾವತಿ. ಹತ್ತಿರ ಹತ್ತಿರ ಹೆಜ್ಜೆ ಹಾಕಿದ ಶಾಂತಾರಾಂ.

ಏನಾಯಿತೆಂದು ತಿಳಿಯುವುದರೊಳಗಾಗಿ ಪ್ರಭಾವತಿ ಅವನ ತೋಳೊಳಗಿದ್ದಳು. ಅವನ ತುಟಿ ಅವಳ ತುಟಿಯನ್ನು ಬಿಸಿಯಾಗಿ ಒತ್ತಿತು. ಒಂದು ಗಳಿಗೆ ಅವಳಿಗೆ ಏನೋ ದಿಗ್ಭ್ರಾಂತಿಯಾದಂತಾಯಿತು. ಮರುಗಳಿಗೆಯೇ, ಅವಳ ಕೈ ಅವನ ಕೆನ್ನೆಯನ್ನು ಅಪ್ಪಳಿಸಿತು. ಅವನ ತೋಳಿನಿಂದ ಸಿಡಿದು, ರೇಗಿದ ಹಾವಿನಂತೆ ನಿಂತಳು.

ಅವನ ಕೆನ್ನೆಯ ಮೇಲೆ ಅವಳ ಬೆರಳು ಮೂಡಿತ್ತು. ಸ್ಥಿರವಾಗಿ ನಿಂತು ಹೇಳಿದ ಶಾಂತಾರಾಂ—

"ನನ್ನ ಮೇಲೆ ಅಷ್ಟು ದ್ವೇಷವೇ?"

"ಗೆಟೌಟ್. ಮತ್ತೆ ಈ ಮನೆಗೆ ಕಾಲಿಡುವ ಸಾಹಸ ಮಾಡಬೇಡಿ."

"ಹೆದರಿಕೆಯೋ, ಹಗೆತನವೋ?"

"ಹೋಗುತ್ತೀರೋ ಇಲ್ಲವೋ?"

ಮೇಲೆ ಬೀಳಲು ಸಿದ್ಧವಾದ ಹುಲಿಯಂತೆ ನಿಂತು ಕೇಳಿದಳು ಪ್ರಭಾವತಿ. ಅವಳ ಮಾತು ಕೇಳಿ ಆತ ಏನೋ ಹೇಳಲು ಯತ್ನಿಸಿದ ಬಳಿಕ ಏಕೆ ಹೇಳುವುದು ಎಂದು ಹಾಗೆ ಒಮ್ಮೆ ಭುಜ ಕೊಡವಿ ಹೊರಟುಹೋದ.

ಪ್ರಭಾವತಿ ನಿಂತಲ್ಲೇ ನಿಂತಿದ್ದಳು. ನಿಧಾನವಾಗಿ ಸಂಜೆಗತ್ತಲಿನಲ್ಲಿ ಅವನ ಹೆಜ್ಜೆಯ ಸದ್ದು ಕರಗಿಹೋಯಿತು.

ಅವಳೆದೆಯಲ್ಲೇ ಪ್ರವೀಣ ಕ್ರೋಧ ಕರಗಿ, ಯಾತನಾಮಯವಾದ ನೋವು ತುಂಬಿತು. ಸಿಟ್ಟಿನಿಂದ ಕೆಂಡವಾಗಿದ್ದ ಅವಳ ಕಣ್ಣುಗಳಲ್ಲಿನ ಉರಿಯನ್ನು ಆರಿಸಲೆಂಬಂತೆ ಕಂಬನಿ ಮೂಡಿತು. ಅಲ್ಲಿ ನಿಲ್ಲಲಾರದೆ, ತನ್ನ ಕೋಣೆಗೆ ಹೋಗಿ ಮಂಚದ ಮೇಲೆ ಉರುಳಿದಳು.

ಅವಳ ಮೈ ಇನ್ನೂ ಅವನ ತೋಳತೆಕ್ಕೆಯೊಳಗಿದ್ದಂತೇ ಬಿಗಿಯುತ್ತಿತ್ತು. ತುಟಿಯ ಮೇಲಿನ ಚುಂಬನದ ಕಾವು ಆರದೆ ಹೆಚ್ಚಾಗುತ್ತಿತ್ತು. ಕಂಬನಿಯನ್ನು ಒರೆಸಿಕೊಂಡು ತನಗೆ ತಾನೇ ನಾಲ್ಕಾರು ಬಾರಿ ಹೇಳಿಕೊಂಡಳು.

"ಬ್ರೂಟ್, ಬ್ರೂಟ್, ಐ ಹೇಟ್ ಹಿಮ್," (ಪಶು, ಪಶು, ಅವನನ್ನು ದ್ವೇಷಿಸುತ್ತೇನೆ.)

ಎರಡು ದಿನವಾಯಿತು, ಮೂರು ದಿನವಾಯಿತು. ಶಾಂತಾರಾಂ ಮತ್ತೆ ಆ ಮನೆಯ ಕಡೆ ಬರಲಿಲ್ಲ. ಬರದಿದ್ದರೆ ಪೀಡೆ ಕಳೆಯಿತು ಎಂದುಕೊಂಡು ಅವನನ್ನು ಮರೆಯಲೆತ್ನಿಸಿದಳು ಪ್ರಭಾವತಿ. ಆದರೆ ಮರೆಯಲೆತ್ನಿಸಿದಷ್ಟೂ ಅವನ ನೆನಪು ಬಲವಾಗುತ್ತಿತ್ತು. ಕ್ರೋಧ, ಮೆಚ್ಚುಗೆಗೆ ಎಡೆ ಕೊಟ್ಟು 'ಅಬ್ಬಾ! ಏನು ಸಾಹಸ, ಎಷ್ಟು ಧೈರ್ಯ!' ಎನ್ನುತ್ತಿತ್ತು. ಕಣ್ಣು ಏಕೋ ಬೇಡ ಬೇಡವೆಂದರೂ ಅವನನ್ನು ಕಾಣಬಯಸುತ್ತಿತ್ತು. ಅವನ ನೆನಪಾದಾಗ ಮತ್ತೆ ಅವಳ ಎದೆಯನ್ನು ಆಲಂಗಿಸಿದಂತಾಗಿ, ತುಟಿ ಬೆಚ್ಚಗಾಗುತ್ತಿತ್ತು; ಎದೆಯೊಳಗೆ ಯಾವುದೋ ಸಣ್ಣ ವ್ಯಥೆ ಕೊರೆಯುತ್ತಿತ್ತು. ಗಂಟೆಗಟ್ಟಲೆ ಅವನ ವಿಷಯವನ್ನೇ ಯೋಚಿಸುತ್ತಾ ಕುಳಿತುಕೊಳ್ಳುತ್ತಿದ್ದಳು.

ಒಂದು ವಾರವಾಯಿತು, ಶಾಂತಾರಾಂ ಬರಲಿಲ್ಲ.

ಹೇಡಿ? ಮನೆಯಲ್ಲಿ ಹೇಳಿ ಎಲ್ಲಿ ಗದ್ದಲ ಮಾಡುತ್ತೇನೋ ಎಂದು ಹೆದರಿರಬೇಕು ಎನಿಸಿತು. ಆದರೆ ಅವನು ಹೇಡಿಯೇ? ಏಕೋ ಆ ಮಾತು ಹೇಳಲು ಅವಳ ಮನಸ್ಸು ಒಪ್ಪಲಿಲ್ಲ.

ಕಡೆಗೊಂದು ದಿನ ಮನಸ್ಸು ತಡೆಯದೆ, ಚಂದ್ರುವನ್ನು ಕೇಳಿದಳು–

“ಏಕೋ ಚಂದ್ರು, ನಿಮ್ಮ ಮೇಷ್ಟರು ಬರಲೇ ಇಲ್ಲ ಈ ನಡುವೆ.”

“ನಾನೂ ನಿನ್ನೆ ಅದನ್ನೇ ಕೇಳೋಕೆ ಹೋಗಿದ್ದೆ. ಇನ್ನು ಮೇಲೆ ಪಾಠಕ್ಕೆ ಬರೋಲ್ಲಾಂದರು.”

“ಏಕಂತೆ?”

“ನಾನೂ ಕೇಳಿದೆ. ನಿಮ್ಮ ಅಕ್ಕನನ್ನೇ ಕೇಳು ಅಂದ್ರು. ನೀನೇನಾದರೂ ಬೇಡ ಅಂತ ಹೇಳಿದೆಯಾ ಪಬ್ಬಿ?”

ತಟಕ್ಕನೆ ಅವನ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ತೋಚಲಿಲ್ಲ. ಹಾಗೇ ತನ್ನನ್ನೇ ಕೇಳು ಎಂದು ಹೇಳಿ ಕಳಿಸಿದ ಅವನ ಸಾಹಸವನ್ನು ಒಂದು ಗಳಿಗೆ ಅವಳ ಮನಸ್ಸು ಮೆಚ್ಚಿಕೊಂಡಿತು. ಮರುಗಳಿಗೆಯೇ ಅವನ ಮೇಲೆ ಸಿಟ್ಟು ತಡೆದು ಬಂತು.

“ನೀನು ಬೇಡ ಅಂಥ ಹೇಳಿದೆಯಾ ಪಬ್ಬಿ?” ಚಂದ್ರು ಮತ್ತೊಮ್ಮೆ ಪ್ರಶ್ನೆ ಮಾಡಿದ.

“ಬರಬೇಡಿ ಅಂತ ಹೇಳಲಿಲ್ಲ. ಪಾಠ ಚೆನ್ನಾಗಿ ಹೇಳಿಕೊಡಿ ಅಂದೆ. ಅದಕ್ಕೇ ಸಿಟ್ಟೇನೋ?”

“ಇಲ್ಲ ಕಣೆ, ಬಾಳ ಚೆನ್ನಾಗಿ ಪಾಠ ಹೇಳಿಕೊಡ್ತಾ ಇದ್ದರು. ಅದಕ್ಕೇ ನಾನು ‘ನೀವು ಬನ್ನಿ. ನಾನು ನಮ್ಮ ಅಕ್ಕನಿಗೆ ಹೇಳ್ತೀನಿ’ ಅಂದೆ.”

“ಅದಕ್ಕೆ ಏನೆಂದರು?”

“ನಿಮ್ಮ ಅಕ್ಕನನ್ನು ವಿಚಾರಿಸು, ಬರಬಹುದು ಎಂದರೆ ಬರುತ್ತೀನಿ ಅಂದರು. ಹಾಗೇ ಇನ್ನೊಂದು ಮಾತು ಹೇಳಿದರು ಪಬ್ಬಿ. ಮರತೇ ಬಿಟ್ಟಿದ್ದೆ....”

“ಏನು?”–ಚಂದ್ರುವಿನ ಮಾತು ಕೇಳಿ ಅವಳ ಎದೆ ಧಡಧಡಿಸಿತು.

“ನೀನು ಅವರಿಗೇನೋ ಬಹುಮಾನ ಕೊಟ್ಟೆಯಂತಲ್ಲ. ಅದನ್ನು ಮರೆಯೋಲ್ಲ ಅಂತ ಹೇಳು ಅಂದರು. ಏನು ಪ್ರೆಸೆಂಟ್ ಕೊಟ್ಟೆ?”

“ಚೆನ್ನಾಗಿ ಪಾಠ ಹೇಳೊಲ್ಲ ಅಂತ ಬೈದೆನಲ್ಲಾ ಅದಕ್ಕೇ ಇಷ್ಟು ವ್ಯಂಗ್ಯವಾಗಿ ಹೇಳಿರಬೇಕು. ಹೋಗಲಿ ಬಿಡು. ಎಲ್ಲಿಯ ಮಾತು. ಬಂದರೆ ಬರಲಿ, ಇಲ್ಲವಾದರೆ ಬಿಡಲಿ. ಬರೀ ನುರಹಂಕಾರ.”

"ಇಲ್ಲಾ ಕಣೆ. ಬಹಳ ಒಳ್ಳೇರು. ಸುಮ್ಮಸುಮ್ಮನೆ ಒಳ್ಳೇ ಮೇಷ್ಟರನ್ನ ಕಳಿಸಿಬಿಟ್ಟೆ. ಹಾಳಾದೋರು ಇನ್ನು ಯಾರು ಬರ್ತಾರೋ, ಗ್ರಹಚಾರ. ಪಬ್ಬಿ, ಅವರ್ನ್ನೇ ಬಾಂತ ಹೇಳಿ ಕಳಿಸು ಪಬ್ಬಿ. ನಾನು ಹೋಗಿ ಹೇಳಲಾ ?"

"ನಾಳೆ ಯೋಚನೆ ಮಾಡಿ ಹೇಳ್ತೀನಿ. ಪಪ್ಪಾಗೆ ಹೇಳಿಲ್ಲವೇ ನೀನು ?"

"ಹೇಳಿದೆ. ಪಪ್ಪಾನೂ ನಿನ್ನ ಹಾಗೇ ಹೇಳಿದ್ರು. ಅವನಲ್ಲದೆ ಹೋದ್ರೆ ಇನ್ನೊಬ್ಬಾಂತ. ಮೋನೀಗೂ ಹೇಳಿದ್ರು, ಬೇರೆ ಯಾರನ್ನಾದರೂ ನೋಡು ಅಂತ. ನೀನು ಹೇಳಿದ್ರೆ ಇವತ್ತೇ ಅವರಿಗೆ ಬನ್ನಿ ಅಂತೀನಿ ಪಬ್ಬಿ."

ತಮ್ಮನ ಮಾತು ಕೇಳಿ ಒಂದು ಗಳಿಗೆ ಯೋಚಿಸಿದಳು ಪ್ರಭಾವತಿ.

ಅವಳ ಮನಸ್ಸಿನಲ್ಲಿ ಹೋರಾಟ ಮತ್ತೆ ಆರಂಭವಾಗಿತ್ತು. ಬಾ ಎನ್ನು ವುದೇ ? ಬಂದರೆ ಮತ್ತೇನೋ....ಅಷ್ಟು ಹೆದರುವುದೇ ಅವನಿಗೆ....ಆ ದಿನ ಸಿಟ್ಟ ನಲ್ಲಿ ಅವನೊಂದಿಗೆ ಮಾತನಾಡಲಾಗಿರಲಿಲ್ಲ. ಅವನ ಕೃತ್ಯದ ನೀಚತೆಯನ್ನು ಚೆನ್ನಾಗಿ ತಿಳಿಸಿ, ಮುಖದ ಮೇಲೆ ನೀರಿಳಿಸಿ ಕಳಿಸಿದ್ದರೆ ಚೆನ್ನಾಗಿತ್ತು ಎನಿಸಿತ್ತು ಅವಳಿಗೆ. ಈ ದಿನ ಚಂದ್ರುವಿನೊಂದಿಗೆ ಹೇಳಿದ ಮಾತೂ ಅವಳನ್ನು ರೇಗಿಸಿತ್ತು. ಅದನ್ನು ಯೋಚಿಸುತ್ತಾ ಅವಳೆದೆಯಲ್ಲಿ ವಿಚಿತ್ರ ಯೋಚನೆ ಯೊಂದು ಹೊಳೆಯಿತು. ಎದುರಿಗೇ ಹೋದರೆ ಏನು ಮಾಡುತ್ತಾನೋ, ತನ್ನ ಮುಖ ನೋಡಿ ಹೇಗಾಗುತ್ತಾನೋ ನೋಡಬೇಕು ಎನಿಸಿತು.

"ಎಲ್ಲಿದೆ ನಿಮ್ಮ ಮೇಷ್ಟರ ಮನೆ ?" ಎಂದು ಕೇಳಿದಳು.

"ಗಿಣಿನೇ ಕ್ರಾಸಿನಲ್ಲಿ 'ಕಾಮಧೇನು' ಅಂತ ಮನೆಯಿದೆಯಲ್ಲಾ, ಅದರ ಔಟ್ ಹೌಸಿನಲ್ಲಿ."



"ಹೂ. ಸರಿ. ನಾನು ಹೇಳಿಕಳಿಸುತ್ತೇನೆ." ಎಂದಳು ಪ್ರಭಾವತಿ.

ತಮ್ಮನಿಗೆ ಮಾತೇನೋ ಕೊಟ್ಟಳು. ಮರುಗಳಿಗೆಯೇ ಹಾಗೆ ಮಾಡ ಬಾರದಿತ್ತೇನೋ ಎನಿಸಿತು. ಆದರೆ ಮಾತು ಕೊಟ್ಟಾಗಿತ್ತು. ಯಾವಾಗ ಲಾದರೂ ಕಾರಿನಲ್ಲಿ ಹೋಗಿ ಬರುವುದು ಎಂದುಕೊಂಡಳು.

ಆದರೆ ಆ ದಿನ ಸಂಜೆಯೇ ಅವನನ್ನು ನೋಡಿದಳು ಪ್ರಭಾವತಿ.

ಆ ದಿನ ಸಂಜೆ ತನ್ನ ಗೆಳತಿಯೊಬ್ಬಳನ್ನು ನೋಡಲೆಂದು ಮನೆಯಿಂದ ಹೊರಟಳು. ಅವಳ ಗೆಳತಿಯ ಮನೆಯಿದ್ದುದೂ ಗಿಣಿನೇ ಕ್ರಾಸಿನಲ್ಲೆ. ಅತ್ತ ಕಡೆ ಬಂದಾಗಲೇ ಅವಳಿಗೆ ಶಾಂತಾರಾಮನ ಮನೆಯೂ ಅಲ್ಲೇ ಇರುವುದು ಎಂದು ನೆನಪಾದುದು. ಅವಳೂ ಅವನಿದ್ದ ಮನೆಯ ಮುಂದೇ ಹಾದು ಹೋಗ

ಬೇಕಾಗಿತ್ತು. ಅವನ ಮನೆಯ ಮುಂದೆ ಬಂದಾಗ ಮನಸ್ಸು ಎಳೆಯಿತು. ಒಳಗೆ ಹೋದಳು.

ಮನೆಯ ಹೊರಗೆ ಒಬ್ಬ ಮುದುಕಿ ಕುಳಿತಿದ್ದರು. ಶಾಂತಾರಾಂನ ತಾಯಿ ಇರಬೇಕು ಅಂದುಕೊಂಡಳು ಪ್ರಭಾವತಿ. ಮುದುಕಿಯೇ ಅವಳನ್ನು 'ಯಾರು? ಏನು ಬೇಕು?' ಎಂದು ವಿಚಾರಿಸಿದಳು.

ಪ್ರಭಾವತಿ ತಾನು ಯಾರೆಂಬುದನ್ನು ವಿವರಿಸಿ "ಹತ್ತು ದಿನದಿಂದ ಪಾಠಕ್ಕೆ ಬರಲಿಲ್ಲ. ವಿಚಾರಿಸಿಕೊಂಡು ಹೋಗೋಣವೆಂದು ಬಂದೆ" ಎಂದಳು.

"ನೀವೇ ಬರಬೇಕಾಗಿತ್ತೇ? ನಿಮ್ಮ ತಮ್ಮನನ್ನು ಕಳಿಸಬಹುದಾಗಿತ್ತಲ್ಲಾ."

"ನಾನು ಇಲ್ಲೇ ನನ್ನ ಸ್ನೇಹಿತಳ ಮನೆಗೆ ಬಂದಿದ್ದೆ. ಹಾಗೇ ದಾರಿಯಾದ್ದರಿಂದ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ. ಅವರು ಮನೆಯುಲ್ಲಿಲ್ವೇ?"

"ಇನ್ನೇನು ಬರುವ ಹೊತ್ತು. ಈಗ ಬರಬಹುದು. ಪುರಸೊತ್ತಿದ್ದರೆ ಕೂತುಕೊಳ್ಳಿ. ನಿಮ್ಮಂಥವರು ಮನೆಗೆ ಬರುವುದೇ ಅಪರೂಪ" ಎಂದು ಮುದುಕಿ ಕೂಡಿಸಿಕೊಂಡಳು.

ಹದಿನೈದು ನಿಮಿಷವೆನ್ನುವುದರಲ್ಲಿ ಮುದುಕಿ, ತನ್ನದು, ತನ್ನಮಗನದು. ಜೀವನ ಚರಿತ್ರೆಯನ್ನೆಲ್ಲಾ ವಿವರಿಸಿದಳು. ತಮ್ಮ ಕಷ್ಟ ಸುಖ, ಮಗನ ಗುಣ, ದುರ್ಗುಣ ಎಲ್ಲವನ್ನೂ ಹೇಳಿದಳು—

"ಅವನದು ದುಡುಕಿನ ಸ್ವಭಾವ, ಸಿಟ್ಟು, ಹಟ ಹೆಚ್ಚು. ಒಂದು ಮಾತು ಅನ್ನಿಸಿಕೊಳ್ಳುವುದಿಲ್ಲ. ಬಡವರು ಹಾಗಿರಬಾರದೂ ಅಂತ ಹೇಳ್ತೀನಿ. ಆದರೆ ಕೇಳೋಲ್ಲ. ಹೀಗೇ ಏನಾದರೂ ದುಡುಕು ಮಾತಾಡಿ ನಿಮ್ಮ ಮನೆ ಪಾಠಾನೂ ಕೆಡಿಸಿಕೊಂಡನೇನೋ ಅಂತ ಗಾಬರಿಯಾಗಿತ್ತು. ಹಾಗೇನಾದರೂ ಮಾತಾಡಿದರೆ ಹೊಟ್ಟೆಯಲ್ಲಿ ಹಾಕಿಕೊಳ್ಳಿ ಅಮ್ಮ; ಅವನ ಮಾತು ಒರಟೇ ವಿನಾ, ಮನಸ್ಸು ಬಹಳ ಒಳ್ಳೇದು."

ಆ ಮುದುಕಿಯ ಮಾತಿಗೆ ಏನು ಹೇಳಬೇಕೆಂದು ಪ್ರಭಾವತಿಗೆ ತೋಚಲಿಲ್ಲ. ಕೌಲೇ ಬಸವನ ಹಾಗೆ ಹೇಳಿದುದಕ್ಕೆಲ್ಲಾ ಹೂಗುಟ್ಟುತ್ತಾ ಕುಳಿತಿದ್ದಳು. ಮುದುಕಿಯ ಮಾತು ನಡೆದೇ ಇತ್ತು–

"ಬಾಳ, ಬಾಳ ಹಟದ ಸ್ವಭಾವ. ಅದ್ಯಾವ ಪುಣ್ಯಾತಗಿತ್ತಿ ಬಂದು ಅವನ್ನ ದಾರಿಗೆ ತರಬೇಕೋ ಭಗವಂತನಿಗೆ ಗೊತ್ತು."

"ಬೇಗ ಮದುವೆ ಮಾಡಿಬಿಡಿ, ಸರಿಹೋಗುತ್ತಾರೆ."

"ಮದುವೆ! ಆ ಹೆಸರು ಹೇಳಿದರೇ ಉರಿದು ಬೀಳುತ್ತಾನೆ. ಅದೇನು ಸ್ತ್ರೀ ದ್ವೇಷ ಬಂದು ಬಡಿದುಕೊಂಡಿದೆಯೋ ಅವನಿಗೆ, ನಾನು ಬೇರೆ ಕಾಣೆ. ಹೆಂಗಸರ ನೆರಳು ಕಂಡರಾಗೋದಿಲ್ಲ."

ಆ ಮಾತು ಕೇಳಿ ಪ್ರಭಾವತಿಗೆ ಆಶ್ಚರ್ಯವಾಯಿತು. ಸ್ತ್ರೀ ದ್ವೇಷ–ಚುಂಬನ. ಇವೆರಡಕ್ಕೂ ಏನು ಸಂಬಂಧ?

"ಹೆಂಗಸರ ಮೇಲೆ ಅಷ್ಟೇಕೆ ದ್ವೇಷವೋ?"

"ಯಾರು ಕೇಳಬೇಕು? ಅದನ್ನು ಕೇಳಿದರೆ ಸಿರ್ ಅನ್ತಾನೆ. ಕಾಲೇಜಿನಲ್ಲೋದೋವಾಗ ಯಾರ್ನೋ ಮದ್ವೆ ಆಗ್ತೀನಿ ಅಂತಿದ್ದ. ಅದೇನಾಯ್ತೋ ಈಚೆಗೆ ಆ ಸುದ್ದಿಯೇ ಇಲ್ಲ."

ಮುದುಕಿ ಮಾತಾಡುತ್ತಿರುವಾಗಲೇ ಶಾಂತಾರಾಂ ಬಂದ ಹೆಜ್ಜೆಯ ಸದ್ದು ಕೇಳಿಸಿತು.

"ಅಗೋ. ಅವನೇ ಬಂದಾಂತ ಕಾಣಿಸುತ್ತೆ" ಎಂದಳು ಆತನ ತಾಯಿ ಪ್ರಭಾವತಿ ಎದ್ದು ನಿಂತಳು. ಪ್ರಭಾವತಿಯನ್ನು ನೋಡಿಯೂ ನೋಡದವನಂತೆ ಶಾಂತಾರಾಂ ಒಳಗೆ ಹೋದ. ಅವನ ತಾಯಿಯೇ–

"ಸಂಜೀವರಾಯರ ಮಗಳು ಬಂದಿದಾರೆ ನೋಡು. ಹತ್ತು ಹನ್ನೆರಡು ದಿನದಿಂದ ಪಾಠಕ್ಕೆ ಹೋಗಲಿಲ್ಲವಂತೆ ನೀನು?"

ಶಾಂತಾರಾಂನ ಒರಟು ನಡತೆಯನ್ನು ಕಂಡು ಪ್ರಭಾವತಿಗೆ ಸಿಟ್ಟು ಮರುಕಳಿಸಿತು. ಅವನೊಂದಿಗೆ ಮಾತನಾಡದೆ ಹಾಗೇ ಹೋಗಬೇಕೆಂದಿದ್ದಳು. ಆದರೆ ಮುದುಕಿಯೇ––

"ಒಳಗೆ ಬನ್ನಿ" ಎಂದಳು. ಬೇರೆ ದಾರಿಯಿಲ್ಲದೆ ಪ್ರಭಾವತಿ ಒಳಗೆ ಹೋಗಬೇಕಾಯಿತು. ಒಳಗೆ ಬಂದ ಪ್ರಭಾವತಿಯನ್ನು ಶಾಂತಾರಾಂ ದುರುಗುಟ್ಟಿ ನೋಡಿ "ನಮಸ್ಕಾರ" ಎಂದ.

"ಕೂತುಕೊಳ್ಳಿ, ಸ್ವಲ್ಪ ಕಾಫಿನಾದರೂ ಮಾಡಿ ತರ್ತೇನೆ" ಎಂದು ಮುದುಕಿ ಒಳಗೆ ಹೋದರು.

"ಏನು ಇಷ್ಟು ದೂರ ಬಂದದ್ದು? ಆ ದಿನ ಒಂದು ಕೆನ್ನೆಗೆ ಹೊಡೆದುದು

ಸಾಲದೆಂದೇ? ಅಥವಾ ನನ್ನ ತಾಯಿಗೆ ನನ್ನ ನಡತೆಯ ವರದಿ ಒಪ್ಪಿಸ ಬೇಕೆಂದೋ? ಎರಡಕ್ಕೂ ಸಿದ್ಧವಾಗಿದೀನಿ."

"ಅಪಮಾನ ಮಾಡುವ ರೀತಿಯಲ್ಲೇ ಮಾತನಾಡಬೇಕು ಎಂದು ನಿರ್ಧರಿಸಿದ್ದರೆ, ಹೇಳಿ. ಈಗಲೇ ನಮಸ್ಕಾರ."

ಪ್ರಭಾವತಿ ಉಕ್ಕಿ ಬರುವ ಸಿಟ್ಟನ್ನು ತಡೆ ಹಿಡಿಯುತ್ತಾ ನುಡಿದಳು. ಸಿಟ್ಟಿನ ಉದ್ರೇಕದಿಂದ ಅವಳ ಕಣ್ಣ ಕುಡಿಯಲ್ಲಿ ನೀರಾಡಿತು. ಶಾಂತಾರಾಂ ಅವಳ ಮಾತಿಗೆ ಉತ್ತರ ಕೊಡದೆ ಅವಳ ಮುಖವನ್ನೇ ನೋಡಿದ. ನಾಲಿಗೆಯ ತುದಿಗೆ ಬಂದ ಮಾತನ್ನು ತಡೆಹಿಡಿದು--

"ಕ್ಷಮಿಸಿ. ನಿಮ್ಮನ್ನು ನೋಡಿದ ಕೂಡಲೇ ಏಟಿನ ನೆನಪಾಯಿತು. ಕುಳಿತುಕೊಳ್ಳಿ. ಯಾವ ಭಯವೂ ಇಲ್ಲ."

"ನನಗೂ ಯಾವ ಭಯವೂ ಇಲ್ಲ."

"ನನ್ನದೂ?"

"ಯಾರದೂ ಇಲ್ಲ."

"ತುಂಬ ಸಂತೋಷ."

ಎಂದವನೇ ಮತ್ತೆ ಮಾತನಾಡದೆ, ಹಾಲಿನ ಒಂದು ಬದಿಯಲ್ಲಿದ್ದ ಕಿಟಕಿ ಯತ್ತ ಮುಖ ಮಾಡಿ ನಿಂತುಕೊಂಡ. ಪ್ರಭಾವತಿಯೂ ನಿಂತೇ ಇದ್ದಳು. ಕಾಫಿ ತೆಗೆದುಕೊಂಡು ಬಂದ ಅವನ ತಾಯಿ ಅದನ್ನು ಕಂಡು--

"ಅಯ್ಯೋ, ನಿಂತೇ ಇದೀರಲ್ಲಾ, ನೀನಾದರೂ ಕೂತುಕೊಳ್ಳಿ ಅಂತ ಹೇಳಬಾರದಾಗಿತ್ತೆ. ಕೂತುಕೊಳ್ಳಿ ಅಮ್ಮ. ಅವನಿಗೆ ಏನೂ ತಿಳಿಯುವುದಿಲ್ಲ" ಎಂದರು.

ಪ್ರಭಾವತಿ ಕುರ್ಚಿಯ ಮೇಲೆ ಕುಳಿತು ಕಾಫಿಯ ಬಟ್ಟಲು ತೆಗೆದು ಕೊಂಡಳು. 'ಶಾಂತಾರಾಂ ಪಶು, ಶುದ್ಧ ಪಶು' ಎಂದು ಹೇಳುತ್ತಿತ್ತು ಅವಳ ಹೃದಯ. ಅವನ ಅಪಮಾನಕರವಾದ ನಡತೆಗೆ, ಅಷ್ಟೇ ಅಪಮಾನಕರವಾದ ನಡತೆಯ ಪ್ರತ್ಯುತ್ತರ ಕೊಟ್ಟು ಹೋಗಬೇಕು ಎನ್ನುತ್ತಿತ್ತು ಅವಳ ಮನಸ್ಸು. ಆದರೆ ಹೇಗೆ? ಬರಲೇಬಾರದಾಗಿತ್ತು ಎನಿಸಿತು. ಆದರೆ ಬಂದದ್ದಾಗಿತ್ತು. ಈಗ ಸುಮ್ಮನೆ ಹೊರಟು ಹೋಗುವುದೇ? ಮಾತೇ ಆಡದ ಅವನೊಂದಿಗೆ ಏನು ಮಾತನಾಡುವುದು? ಇದನ್ನೇ ಯೋಚಿಸುತ್ತಾ ಕಾಫಿ ಕುಡಿಯುತ್ತಿದ್ದಳು.

ಕಿಟಕಿಯಿಂದಾಚೆಗೆ ಏನನ್ನೋ ನೋಡುತ್ತಾ ನಿಂತಿದ್ದ ಶಾಂತಾರಾಂ ಇದ್ದಕ್ಕಿದ್ದ ಹಾಗೇ, ಚಟಕ್ಕನೆ ತಿರುಗಿ, ಉದ್ವೇಗ ಕರ್ಕಶವಾದ ಧ್ವನಿಯಲ್ಲಿ ಕೇಳಿದ:

"ಇಲ್ಲಿಗೇಕೆ ಬಂದಿರಿ? ನಿಮ್ಮ ಮನೆಯಲ್ಲಾದುದು ಸಾಲದೆಂದೇ ಅಥವಾ ನನ್ನ ನಡತೆಗೆ ಕ್ಷಮಾಯಾಚನೆ ಪಡೆಯಬೇಕೆಂದೇ? ಅಥವಾ ಕಣ್ಣಿದಿರು ಬಂದು ಕಪಾಳಿರಿಯಬೇಕೆಂದೇ? ಪಶು....ನಾನು ಪಶು! ಅಲ್ಲವೇ? ಬಹುಶಃ ಆ ದಿನ ಹೇಳುವಷ್ಟನ್ನು ಹೇಳಲಾಗಲಿಲ್ಲವೇನೋ – ಹೇಳಿ, ಉಳಿದುದನ್ನೆಲ್ಲಾ ಹೇಳಿ ಮುಗಿಸಿ. ಸಿದ್ಧವಾಗಿದೇನೆ. ತಪ್ಪು ನಿಮ್ಮದಲ್ಲ, ನನ್ನದು."

ಇದ್ದಕ್ಕಿದ್ದಂತೆ ಆವನಾಡಿದ ಮಾತನ್ನು ಕೇಳಿ, ಪ್ರಭಾವತಿ ಚಕಿತಳಾದಳು. ಅವಳರಿಯದಂತೆಯೇ ಅವಳ ಬಾಯಿ ನುಡಿಯಿತು--

"ಅದಕ್ಕಾಗಿ ನಾನು ಬರಲಿಲ್ಲ."

"ಮತ್ತೇಕೆ...."

ಅವಳ ಮಾತು ಕೇಳಿ, ಅವನ ಕಣ್ಣಲ್ಲಿ ಇದ್ದಕ್ಕಿದ್ದಂತೆ ಏನೋ ಬೆಳಕು ಸಂಚರಿಸಿ ಮರುಗಳಿಗೆಯೇ ನಂದಿಹೋಯಿತು.

"ಸರಿಯೇ – ಏತಕ್ಕಾದರೂ ಬಂದಿರಿ. ಬಂದುದು ಒಳಿತೇ ಆಯಿತು. ಅಂದೇ ನಿಮಗೊಂದು ಮಾತು ಹೇಳಬೇಕೆಂದಿದ್ದೆ. ಆಗಲಿಲ್ಲ. ನನ್ನ ವಿಷಯ ವಾಗಿ ನೀವೇನೇ ತಿಳಿದುಕೊಂಡಿರಬಹುದು, ಹೇಗೆ ತಿಳಿದುಕೊಂಡರೂ ಸರಿಯೆ. ಆದರೆ ಈ ಒಂದು ಮಾತು ಕೇಳುವ ಸಹನೆ ಮಾತ್ರ ತೋರಿಸಿ. ನನ್ನ ಬಾಳಿನಲ್ಲಿ ಹೆಣ್ಣೊಬ್ಬಳು ಬಿರುಗಾಳಿಯಾಗಿ ಬಂದು ನನ್ನೆದೆಯನ್ನು ಕಲಕಿ, ಒಂದು ಗಳಿಗೆ ನೈ ಮರೆಯುವಂತೆ ಮಾಡಬಹುದು ಎಂದು ನಾನು ನಿರೀಕ್ಷಿಸಿರಲಿಲ್ಲ. ಒಂದು ಗಳಿಗೆ–ಒಂದೇ ಒಂದು ಗಳಿಗೆ ನನ್ನ ಕತ್ತಲ ಬಾಳಿನಲ್ಲೂ ಆಶೆ ಕೊನರಿ ಬೆಳಕು ಬೆಳಗಿತು. ಅದಕ್ಕಾಗಿ ನಿಮಗೆ ಅಭಿನಂದನೆಗಳು. ಆದರೆ ಆ ಘಟನೆಯಿಂದ ನಿಮ್ಮ ಮನಸ್ಸಿಗೆ ತುಂಬಾ ನೋವಾಗಿರಬೇಕು. ಕ್ಷಮಿಸಿ."

ಪ್ರಭಾವತಿಯ ಮುಖವನ್ನು ನೋಡದೆ ಬೇರೆತ್ತಲೋ ನೋಡುತ್ತಾ ಹೇಳಿದ ಶಾಂತಾರಾಂ. ಆ ಮಾತು, ಅದನ್ನಾಡಿದ ರೀತಿ, ಕಗ್ಗಲ್ಲು ಎಂದುದು ಬಿರಿದು, ಅದರ ಒಡಲಿನಿಂದ ಜಲ ಒಸರಿದಂತಿತ್ತು. ಅಣಕ, ವ್ಯಂಗ್ಯಗಳಿಲ್ಲದೆ, ಅವನು ಸರಳವಾಗಿ ಮಾತನಾಡಿದುದನ್ನು ಅವಳು ಕೇಳಿದುದು ಅದೇ ಮೊದಲು. ಏಕೋ ಆ ಮಾತು ಕೇಳಿ ಅವಳ ಹೃದಯವೂ ಮೃದುವಾಯಿತು. ಹಾಗೇ ಅವನ ತಾಯಿ ಅವನು ಸ್ತ್ರೀದ್ವೇಷಿಯೆಂದುದು ನೆನಪಾಗಿ ಏಕೆಂದು ಕೇಳ

ಬೇಕೆನಿಸಿತು. ಆದರೆ ಅಷ್ಟು ಸಲಿಗೆ ವಹಿಸಲು ಧೈರ್ಯವಾಗಲಿಲ್ಲ....ಸುಮ್ಮನೆ ನಿಂತು ಅವನಾಡಿದುದನ್ನು ಆಲಿಸಿದಳು.

ಅವನ ಮಾತು ನೆನಪಿಸಿದ ಆ ಗಳಿಗೆಯ ನೆನಪಿನಿಂದ ಅವಳ ಮೈ ಪುಳಕಿತವಾಯಿತು. ಹತ್ತಾರು ದಿನ ಅವಳ ಮಿದುಳನ್ನು ಕಲಕಿದ ಆ ಅನಿರೀಕ್ಷಿತ ಬಾಹುಬಂಧನ, ಚುಂಬನಗಳ ಸ್ಮರಣೆಯಿಂದ ಅವಳ ಮುಖ ಕೆಂಪಾಯಿತು. ರಕ್ತ ವೇಗವಾಗಿ ಹರಿಯಿತು. ಕಣ್ಣು ಹೊಳಪಾಯಿತು. ಅವಳು ಸುಮ್ಮನೆ ನಿಂತುದನ್ನು ಕಂಡು, ಅವನೇ ಕೇಳಿದ--

"ಏನು ತುಂಬಾ ಆಲೋಚಿಸುತ್ತಿದ್ದೀರಲ್ಲಾ ?"

"ಒಂದು ಪ್ರಶ್ನೆ ಕೇಳಬೇಕೆನಿಸಿತು. ಕೇಳಲೋ ಬೇಡವೋ ಎಂದು ಯೋಚಿಸುತ್ತಿದ್ದೆ."

"ಕೇಳಿ. ಏನು ಬೇಕಾದರೂ ಕೇಳಬಹುದು."

"ಕೇಳಲೇ ?"

"ಖಂಡಿತವಾಗಿಯೂ ಕೇಳಿ."

"ನಿಮ್ಮ ತಾಯಿ, ನೀವು ಸ್ತ್ರೀ ದ್ವೇಷಿ ಎಂದರು. ಅದು ನಿಜವೇ ?"

"ಅದು ಅಷ್ಟು ಬೇಗ ಉತ್ತರ ಹೇಳಬಹುದಾದ ಪ್ರಶ್ನೆಯಲ್ಲ. ಈಗಲೇ ಹೊತ್ತಾಗಿದೆ. ನಿಮಗೆ ಬಿಡುವು, ಕೇಳಬೇಕೆಂಬ ಆಸಕ್ತಿ, ನನಗೂ ಹೇಳುವ ಮನಸ್ಸಿದ್ದರೆ, ಎಂದಾದರೊಂದು ದಿನ ಹೇಳುತ್ತೇನೆ. ಮನೆಯವರು ನಿಮ್ಮನ್ನು ಕಾಯುತ್ತಿರಬೇಕು."

"ಅಷ್ಟೇನೂ ಹೊತ್ತಾಗಿಲ್ಲ."

"ಆದರೂ ಇಂದು ಬೇಡ. ನಡೆಯಿರಿ. ಅಷ್ಟು ದೂರ ಬಿಟ್ಟುಬರಲೇ ?"

"ಬನ್ನಿ."

"ನನ್ನ ಜೊತೆಯಲ್ಲಿ ಬರಲು ಸಂಶಯವಿಲ್ಲವಷ್ಟೇ ?"

"ಸಂಶಯವಿದ್ದಿದ್ದರೆ ನಿಮ್ಮ ಮನೆಯವರೆಗೂ ಬರುತ್ತಿರಲಿಲ್ಲ."

"ಥ್ಯಾಂಕ್ಸ್. ಅಂದ ಹಾಗೆ ನೀವು ಬಂದ ಕಾರಣ ಹೇಳಲೇ ಇಲ್ಲವಲ್ಲ."

"ಅಷ್ಟು ದೂರ ಜೊತೆಗೆ ಬರುತ್ತೇನೆ ಎಂದಿರಲ್ಲ. ಆಗ ಹೇಳುತ್ತೇನೆ."

"ಹಾಗೇ ಮಾಡಿ."

ಪ್ರಭಾ ಅಡಿಗೆಯ ಕೆಲಸದಲ್ಲಿ ತಲ್ಲೀನಳಾಗಿದ್ದ ಶಾಂತಾರಾಮನ ತಾಯಿಗೆ ಬರುವುದಾಗಿ ಹೇಳಿ ಹೊರಟಳು. ಶಾಂತಾರಾಂ ಅವಳನ್ನು ಹಿಂಬಾಲಿಸಿದ.

"ನಿಮ್ಮನ್ನು ಮತ್ತೆ ಪಾಠಕ್ಕೆ ಬನ್ನಿ ಎಂದು ಹೇಳಲು ಬಂದೆ. ನೀವು ಹೇಳಿದುದನ್ನು ಚಂದ್ರು ಹೇಳಿದ."

"ಆ ಕಾರಣ ನಿಜವೆಂದು ನಂಬಲೇ?"

"ಅಷ್ಟಲ್ಲದೆ ಮತ್ತೇನಿರಬಹುದು ?"

"ಹೇಳಲೇ ?"

"ಹೇಳಿ."

"ಆ ದಿನದ ಘಟನೆಯ ಪರಿಣಾಮ ನನ್ನ ಮೇಲೆ ಹೇಗಾಯಿತೋ, ಆ ಆಘಾತದಿಂದ ಎಷ್ಟು ತತ್ತರಿಸಿಹೋಗಿದೇನೋ, ಮತ್ತೆ ನಿಮ್ಮನ್ನು ನೋಡಿದಾಗ ಹೇಗಾಗುವೆನೋ ಎಂದು ನೋಡಬೇಕೆಂದೇ ನೀವು ಬಂದಿರಲ್ಲವೇ ?"

ಶಾಂತಾರಾಮ ಹೇಳಿದ ಮಾತು ಪ್ರಭಾವತಿಯನ್ನು ಮಿಂಚಿನಂತೆ ಸೋಕಿತು. ಹೇಗೆ ಗೊತ್ತಾಯಿತು ಆತನಿಗೆ ಈ ಮಾತು ?

"ನಿಜವಲ್ಲವೇ ಅದು ? ನಿಜ. ಹೆಂಗಸನ್ನು ನಾನು ಬಲ್ಲೆ. ಗುಂಡಿನೇಟಿಗೆ ಗುರಿಯಾದ ಮೃಗದ ರಕ್ತದ ಜಾಡು ಬೆನ್ನಟ್ಟಿ ಅದು ಸಾಯುವುದನ್ನು ನೋಡ ಬರುವ ಬೇಟೆಗಾರನಂತೆ ಹೆಂಗಸರು. ನಾನು ಸ್ತ್ರೀ ದ್ವೇಷಿಯೇ, ಏಕೆ, ಎಂದು ಕೇಳಿದಿರಲ್ಲ. ನಿಜ, ಆ ಮಾತು. ಅದಕ್ಕೆ ಇದೇ ಕಾರಣ."

ಮಸೆದ ಉಕ್ಕಿನಂತಿತ್ತು ಆ ಮಾತು. ಆ ಮಾತು ಕೇಳಿ ಪ್ರಭಾವತಿಯ ಮೈ ನಡುಗಿತು.

"ಹೆಂಗಸೆಂದರೆ ಅಷ್ಟು ಸಿಟ್ಟೇ ?"

"ಬೇರೆ ಬಗೆಯ ಭಾವನೆ ಬೆಳೆಸಲು ಅವಕಾಶವೇ ಇಲ್ಲ."

"ಹಾಗಾದ....ರೆ....ರೆ...."

"ರೆ....ಢೆ....ಯ ಅರ್ಥವನ್ನು ನಾನು ಬಲ್ಲೆ. ಹಾಗಾದರೆ ನಾನು ಅಂದೇಕೆ ಹಾಗೆ ಮಾಡಿದೆ. ಇದೇ ಅಲ್ಲವೇ ನಿಮ್ಮ ಮನಸ್ಸನ್ನು ಕೊರೆಯುವ ಪ್ರಶ್ನೆ ?"

"ಹೂ."

"ಒಬ್ಬ ತನ್ನ ಜೀವನದಲ್ಲಿ ಒಂದು ಬಾರಿಯಲ್ಲ, ಎರಡನೆಯ ಬಾರಿಯೂ ಮೂರ್ಖನಾಗಬಲ್ಲ ಎನ್ನುವುದಕ್ಕಿದು ಉದಾಹರಣೆ. ಕೇಳಿ ನಗಬೇಡಿ. ನಕ್ಕರೂ ಚಿಂತೆಯಿಲ್ಲ. ನಾವು ದುಃಖಪಡುವುದು ಇತರರು ನಮ್ಮನ್ನು ನೋಡಿ ನಗಲಿ ಎಂದೇ ಅಲ್ಲವೇ ? ಒಮ್ಮೆ ನಾನೂ ಒಬ್ಬಾಕೆಯನ್ನು ಪ್ರೀತಿಸಿದೆ. ನಾನು

ಮನಸಾರ ಪ್ರೀತಿಸಿದರೆ ಸಾಕು, ಆ ವಸ್ತು ನನ್ನದಾಗಬಹುದು ಎಂದು ನಂಬಿದ್ದೆ. ಹಾಗಾಗಲಿಲ್ಲ. ಆ ಹೆಣ್ಣಿಗೆ ನಾನು ಬೇಕಾಗಲಿಲ್ಲ. ಆದರೆ ನಾಲ್ಕಾರು ಬಾರಿ ಬೇರೆ ನೆಪಮಾಡಿಕೊಂಡು, ಆ ತಿರಸ್ಕಾರದ ಬೇಗೆಯಲ್ಲಿ ನಾನು ಬೇಯುವು ದನ್ನು ನೋಡ ಬಂದಿದ್ದಳು. ಇದೂ ಅದೇ. ಹಳೆಯ ಹಾಡಿನ ಪಲ್ಲವಿ."

ವಿಷದಲ್ಲಿ ಅದ್ದಿ ತೆಗೆದಂತಿದ್ದವು ಆ ಮಾತುಗಳು. ಆದರೂ ಆ ಮಾತು ಏಕೋ ಪ್ರಭಾವತಿಗೆ ಪ್ರಿಯವಾದವು. ಆತ ನೇರವಾಗಿ 'ನಿನ್ನನ್ನು ಪ್ರೀತಿ ಸುತ್ತಿದ್ದೆ' ಎನ್ನಲಿಲ್ಲವಾದರೂ, ಆ ಮಾತುಗಳಲ್ಲಿ ಆ ಅರ್ಥವಿತ್ತು. ಆತನ ಮಾತುಗಳಿಂದ ತನ್ನ ಮೇಲೆ ಆತನಿಗೆ ಪ್ರೀತಿ ಇತ್ತು ಎಂದು ಧ್ವನಿತವಾಗಿತ್ತು. ಅಂದರೆ ಈಗ ಇಲ್ಲವೇ?....ಆ ಮಾತನ್ನು ಹೃದಯದಲ್ಲಿ ಹತ್ತಿಕ್ಕಲಾರದೆ ಕೇಳಿದಳು-ಅವಳ ಮೈಯಲ್ಲಿ ಕುದಿಕುದಿದು ಹರಿದ ರಕ್ತವೇ ಪ್ರಶ್ನೆ ಕೇಳಿದಂತೆ ಕೇಳಿದಳು—

"ಅಂ....ಅಂದರೆ....ನನ್ನ ಮೇಲೆ ನಿಮಗೆ ಪ್ರೀತಿಯಿತ್ತೆ?"

ಪಕ್ಕದಲ್ಲಿ ನಡೆಯುತ್ತಿದ್ದ ಆತನ ಕೈ ಹಿಡಿದು ಕೇಳಿದಳು.

ಆ ಕೈ ಸೋಂಕಿನಿಂದ ಮಿಂಚು ಸೋಕಿದಂತೆ ಮಿಡುಕಿದ ಆತ ತಟಕ್ಕನೆ ಕೈ ಕೊಸರಿಕೊಂಡು ಹೇಳಿದ—

"ಇತ್ತು....ಇತ್ತು....ಈಗ ಅದೆಲ್ಲಕ್ಕೂ ತಡವಾಯಿತಲ್ಲವೇ? ಅಥವಾ ಅದರಿಂದಲೂ ನಿಮಗೆ ತೃಪ್ತಿಯಾಗುವ ಹಾಗಿದ್ದರೆ ಹೇಳುತ್ತೇನೆ ಕೇಳಿ. ನಿಮ್ಮ ಮೇಲೆ ನನಗೆ ಪ್ರೀತಿ ಇತ್ತು. ಆಯಿತೇ? ನಿಮ್ಮ ಮನೆ ಹತ್ತಿರಾಯಿತು. ಬರಲೇ? ನಮಸ್ಕಾರ" ಎಂದವನೇ ವೇಗವಾಗಿ ಹಿಂದಕ್ಕೆ ತಿರುಗಿದ.

"ಮನೆಗೆ ಬರುವುದಿಲ್ಲವೇ?" ಏನೋ ಒಂದು ಬಗೆಯ ಆರ್ತಧ್ವನಿ ಯಿಂದ ಕೇಳಿದಳು ಪ್ರಭಾವತಿ.

"ನಾಳೆಯವರೆಗೆ ಯೋಚನೆಮಾಡಿ. ಬನ್ನಿ ಎಂದರೆ ಬರುತ್ತೇನೆ" ಎಂದವನೇ ವೇಗವಾಗಿ ತನ್ನ ಮನೆಯ ಕಡೆ ನಡೆದ. ಕನಸಿನಲ್ಲೆಂಬಂತೆ ಅವನು ಹೋಗುವುದನ್ನೇ ನೋಡಿದಳು ಪ್ರಭಾವತಿ.

## ೬

ಶಾಂತಾರಾಂ ತನ್ನನ್ನು ಪ್ರೀತಿಸುತ್ತಾನೆ!

ಮನೆಗೆ ಹೋದುದು, ಮನೆಯಲ್ಲಿ ಮಾತಾಡಿದುದು, ಊಟ ಮಾಡಿದುದು,

ಯಾವುದೂ ಸರಿಯಾಗಿ ಅವಳಿಗೆ ನೆನಪಿರಲಿಲ್ಲ. ಮದ್ಯಪಾನ ಮಾಡಿದವಳಂತೆ, ಅದೆಲ್ಲವನ್ನೂ ಮುಗಿಸಿ ಬಂದು ಹಾಸಿಗೆಯ ಮೇಲೆ ಉರುಳಿದಳು.

ಮತ್ತೆ ಮತ್ತೆ ಅದೇ ಮಾತು ಅವಳ ಮೆದುಳಿನಲ್ಲಿ ಮಾದಕವಾಗಿ ಮೊರೆಯುತ್ತಿತ್ತು.

ಯಾವುದೋ ಒಂದು ಮಾತು ತನ್ನ ಬಾಳಿನಲ್ಲಿ ಇಷ್ಟು ಉಗ್ರ ಪರಿಣಾಮ ಮಾಡಬಹುದು ಎಂದು ಪ್ರಭಾವತಿ ನಂಬಿರಲಿಲ್ಲ. ಆಲಿಬಾಬ 'ಸಾಸುವೆ' ಎಂದ ಕೂಡಲೇ ಬಾಗಿಲು ತೆರೆದು ತನ್ನಲ್ಲಿಯ ನವನಿಧಿಗಳನ್ನು ತೋರಿದ ಕಳ್ಳನ ಗವಿಯಂತೆ, 'ಪ್ರೀತಿಸುತ್ತೇನೆ' ಎಂಬೊಂದು ಮಾತು ಅವಳ ಕಣ್ಣೆದುರು ಹೊಸ ಪ್ರಪಂಚವೊಂದರ ಆನಂದಮಯ ದರ್ಶನ ಮಾಡಿಸಿತ್ತು. ಎಂಥ ಇಂದ್ರ ಜಾಲ ಆ ಮಾತಿನದು!

ಎಷ್ಟು ಆಕರ್ಷಕ, ಎಷ್ಟು ಉನ್ಮಾದಕ, ಎಷ್ಟು ಆನಂದದಾಯಕ–ಈ ಹೊಸ ಜಗತ್ತು.

ಅಮೆರಿಕಾ ತೀರವನ್ನು ಮೊದಲ ಬಾರಿಗೆ ಕಂಡಾಗ ಕೊಲಂಬಸ್‌ಗೆ ಇದೇ ಬಗೆಯ ಹರ್ಷೋದ್ರೇಕವಾಗಿರಬೇಕು.

ಅದೊಂದು ಮಾತು ಒಂದು ಜೀವದ ಮೇಲೆ ಅಧಿಕಾರವನ್ನು ಅವಳಿಗೆ ತಂದು ಕೊಟ್ಟಿತ್ತು.

ಹರ್ಷದಲ್ಲಿ ತೇಲಿಸಬಹುದು, ದುಃಖದಲ್ಲಿ, ಉರಿಯಲ್ಲಿ ಅದ್ದಬಹುದು–ಓ! ಎಂಥ ಅಧಿಕಾರ!

ಆ ಮಾತು ಮನದಲ್ಲಿ ಮೂಡಿದಾಗ ಅವನು ಹೇಳಿದ ತನ್ನ ಬಾಳಿನ ದುರಂತ ಪ್ರಣಯವೂ ನೆನಪಿಗೆ ಬಂತು.

ಬೇಟೆಗಾರನ ಬಾಣಾಘಾತದಿಂದ ನೊಂದ ಹಕ್ಕಿ, ಕಂಪಿಸುವ ತನ್ನ ರೆಕ್ಕೆಗಳನ್ನು ಬೀಸುತ್ತಾ, ಯಾತನೆಯಿಂದ ಚೀರಿಡುತ್ತಾ ಗೂಡಿನೆಡೆಗೆ ಬರುವಂತೆ ತನ್ನ ಬಳಿಗೆ ಶಾಂತಾರಾಂ ಬಂದಿದ್ದ.

ಆ ನೊಂದ ಜೀವಕ್ಕೆ ನಲಿವನ್ನು, ಗೆಲುವನ್ನು, ಆನಂದವನ್ನು ಕೊಡುವ ಅಧಿಕಾರ ತನಗಿದೆ.

ಆ ಭಾವನೆ ಸುಳಿದಾಗ, ಅವಳಿಗೆ ಶಾಂತಾರಾಮನನ್ನು ತನ್ನ ಎದೆಯಲ್ಲಿ ತಬ್ಬಿ, ಕಂಬನಿಯೊರೆಸಿ, 'ನಾನಿದೇನೆ; ದುಃಖಿಸಬೇಡ' ಎಂದು ಹೇಳಬೇಕೆನ್ನಿ

ಸಿತು. ಮಗುವನ್ನು ಕಂಡ ತಾಯ ಹೃದಯದ ಕರುಣೆ ಅವಳೆದೆಯನ್ನು ತುಂಬಿ ಹರಿಯಿತು. ಅವನನ್ನು ತೋಳಲ್ಲಿ ತಬ್ಬಿದಂತೆಯೇ ಭಾವಿಸಿದಳು.

ಮತ್ತೆ ಅಂದಿನ ಅನಿರೀಕ್ಷಿತ ಆಲಿಂಗನದ ನೆನಪು ಜಾಗೃತವಾಯಿತು. ಆ ನೆನಪಿನ ಸುಖೋಷ್ಣ ಪ್ರವಾಹದಲ್ಲಿ ಅವಳ ಮೈ ಬೆಣ್ಣೆಯಂತೆ ಕರಗಿ, ಬಯಕೆ ಉರಿಯಿತು. ತನ್ನ ತೋಳಿನಿಂದಲೇ ಎದೆಯನ್ನು ತಬ್ಬಿಕೊಂಡು ಹಾಸಿಗೆಯಲ್ಲಿ ಹೊರಳಿದಳು.

ತನ್ನ ಮೈ ಬಗ್ಗೆಯೇ ಅವಳಿಗೆ ಅಭಿಮಾನ ಮೂಡಿತು. ಹಾಸಿಗೆಯಿಂದ ಮೇಲೆದ್ದು, ನಿಲುವುಗನ್ನಡಿಯಲ್ಲಿ ತನ್ನ ಮೈಯನ್ನೇ ಮೊದಲಬಾರಿಗೆಂಬಂತೆ ನೋಡಿಕೊಂಡಳು. ಒಂದು ಕಾಲಕ್ಕೆ–ನಿಜ, ಈಗ ಅದು ಎಂದೋ ಒಂದು ಕಾಲ ಎನಿಸುತ್ತಿದೆ–ಈ ಮೈ, ತನ್ನ ಹೆಣ್ಣುತನದ ಬಗ್ಗೇ ಅವಳಿಗೆ ಹೇಸಾಯ ವೆನಿಸಿತ್ತು. ಹೆಣ್ಣುತನ ಶಾಪ ಎಂದುಕೊಂಡಿದ್ದಳು.

ಈಗ, ಶಾಂತಾರಾಮನ ಬಯಕೆ ಅವಳಿಗೆ ತೋರಿಸಿಕೊಟ್ಟದೆ—

ಈ ಮೈ ಎಷ್ಟು ಸುಖ ಕೊಡಬಲ್ಲದು, ಎಷ್ಟು ಸುಖ ಪಡೆಯಬಲ್ಲದು. ತನ್ನ ಮೈ ಪರಮಾನಂದದ ನಾಟ್ಯಮಂದಿರದಂತೆ ತೋರಿತು ಪ್ರಭಾವತಿಗೆ. ಇದುವರೆಗೂ ತಾನು ಭಿಕ್ಷುಕಿ ಎಂದು ತಿಳಿದಿದ್ದವಳಿಗೆ, ಒಮ್ಮಿಂದೊಮ್ಮೆಗೆ ಚಕ್ರವರ್ತಿನಿ ಎಂದು ತಿಳಿದಾಗ ಆಗುವ ಆನಂದ ಅವಳ ಮೈಯ ನರನರದಲ್ಲೂ ತೆರೆತೂಗುತ್ತಿತ್ತು.

ಹಾಗೇ ಯೋಚಿಸಿದಳು—

ತಿರಸ್ಕೃತನಾದ ಶಾಂತಾರಾಮನ ವ್ಯಥೆಯನ್ನು. ಅವನ ಹೃದಯದಲ್ಲಿ ಎಷ್ಟು ದ್ವೇಷ, ಕ್ರೋಧ, ಕಹಿ ತುಂಬಿದೆ. ತನ್ನ ಒಂದೇ ಒಂದು 'ಹೂ' ಎನ್ನುವಿಕೆಯಿಂದ ಇದೆಲ್ಲವೂ ಎಷ್ಟು ಬೇಗ ಆನಂದ, ಸ್ನೇಹ, ಮಧುರತೆಯಾಗಿ ಪರಿಣಮಿಸುತ್ತದೆ. ಈ ಪ್ರಚಂಡ ಮಾಂತ್ರಿಕ ಶಕ್ತಿ ತನ್ನದು.

ನಿಜ, ನಿಜ, ಆ ಜೀವಕ್ಕೆ ಸುಖ ನೀಡಬೇಕು ಎನಿಸಿತು.

ಒಮ್ಮೆ ತನ್ನ ದೇಹದ ಬಗ್ಗೆ ಹೆಮ್ಮೆ, ಮತ್ತೊಮ್ಮೆ ನೊಂದ ಜೀವದ ಬಗ್ಗೆ ಮಮತೆ.

ಈ ಬಯಕೆ–ವಾತ್ಸಲ್ಯಗಳ ಜೋಡಿ ಉಯ್ಯಾಲೆಯಲ್ಲಿ ತೂಗುತ್ತಾ ಇರುಳು ಕಳೆದಳು ಪ್ರಭಾವತಿ–ಹಗಲು ಕಾಯುತ್ತಾ.

ಆ ದಿನ ತನ್ನ ಮೈಯನ್ನು ಹಿಂದೆಂದೂ ಇಲ್ಲದಷ್ಟು ಆಸಕ್ತಿಯಿಂದ

ಅಲಂಕರಿಸಿಕೊಂಡಳು. ಕೂದಲ ಒಂದೊಂದು ಎಳೆ, ಸೀರೆಯ ಒಂದೊಂದು ನೆರಿಯನ್ನು ತಿದ್ದಿ, ಶಾಂತಾರಾಂ ಬರುವ ಹೊತ್ತನ್ನು ಕಾದಳು.

ಪ್ರಭಾವತಿ ಕಾದಳು–ಸಂಜೆ ಬಂದು ಹೋಯಿತು. ಆದರೆ ಶಾಂತಾರಾಂ ಬರಲಿಲ್ಲ.

ಏಕೆ ಬರಲಿಲ್ಲ, ಏಕೆ ಬರಲಿಲ್ಲ?....

ಆ ಕೊರಗಿನಲ್ಲಿ ಬಯಕೆ ಕಾತರವಾಗಿ, ಒಲವು ವಿರಹವಾಗಿ ದಳ್ಳುರಿಯಾಗಿ ಉರಿಯಿತು.

ಏಕೆ ಬರಲಿಲ್ಲ?

ಸಂಜೆಯ ಮಬ್ಬುಗತ್ತಲಿನಲ್ಲಿ, ಅಷ್ಟೇ ಮಬ್ಬಾದ ಮನದಿಂದ ತೋಟದಲ್ಲಿದ್ದ ಉಯ್ಯಾಲೆಯಲ್ಲಿ ತೂಗಿಕೊಳ್ಳುತ್ತಿದ್ದಾಗ ಅವಳಿಗೆ ನೆನಪಾಯಿತು. ಹಿಂದಿನ ದಿನ ಅವನು 'ಬರುತ್ತೇನೆ' ಎಂದಿರಲಿಲ್ಲ. 'ಬನ್ನಿ ಎಂದರೆ ಬರುತ್ತೇನೆ' ಎಂದು ಹೇಳಿ ಹೊರಟುಹೋಗಿದ್ದ.

ಹಾಗೇ ಆ ಮಾತೂ ನೆನಪಿಗೆ ಬಂತು—

"ಇತ್ತು....ಇತ್ತು....ಈಗ ಅದೆಲ್ಲಕ್ಕೂ ತಡವಾಯಿತಲ್ಲವೇ?"

ಯಾವುದೋ ಭೀತಿ ಅವಳ ಹೃದಯವನ್ನು ಹಿಂಡಿತು. ತೀರಾ ಕೈ ಮಿಂಚಿಹೋಯಿತೆ? 'ಇತ್ತು'–'ಈಗ ಇಲ್ಲವೆ?'–ಭೀತಿಯ ಮಧುಪಾನದಿಂದ ಬಯಕೆ ಬಲಿತು ಥಳಿಸಿತು. ತೂಗುವ ಉಯ್ಯಾಲೆಯನ್ನು ಬಲವಾಗಿ ತೂಗಿಕೊಂಡು ಅವನ ಮನೆಯವರೆಗೂ ಹಾರಬೇಕು ಎನಿಸಿತು.

"ಗುಂಡಿನೇಟಿಗೆ ಗುರಿಯಾಗಿ ಪೊದೆಯಲ್ಲಿ ಮರೆಯಾದ ಮಿಗದ ರಕ್ತದ ಜಾಡು ಪತ್ತೆ ಹಚ್ಚಿ, ಅದು ಹೊರಳಿ ಹೊರಳಿ ಸಾಯುವುದನ್ನು ನೋಡಿ ತೃಪ್ತಿಪಡಬರುವ ಬೇಟೆಗಾರನಂತೆ ಹೆಂಗಸು. ನೀನೂ ಅದಕ್ಕಾಗೇ ಬಂದವಳಲ್ಲವೆ?"

ನೂರು ಮೊನೆಯಿಂದ ಅವಳ ಮಿದುಳನ್ನಿರಿದು ಮೊಳಗಿತು ಶಾಂತಾರಾಮನಾಡಿದ ಮಾತಿನ ನೆನಪು.

"ಅಯ್ಯೋ, ನಾನು ಹಾಗಲ್ಲ" ಎಂದು ಚೀರಿ ಹೇಳಬೇಕೆನಿಸಿತು ಅವಳಿಗೆ. ಆದರೆ ಅವಳು ಹೋದುದೂ ಅದಕ್ಕೇ. ಅವಳಿಗೆ ಅದು ಗೊತ್ತಿತ್ತು. ಅದು ನೆನಪಾಗಿ ತನ್ನ ಮೇಲೇ ಅವಳಿಗೆ ಸಿಟ್ಟು ಬಂತು, ಬೇಸರವಾಯಿತು....

"ನಾವು ದುಃಖಪಡುವುದು ಇತರರು ನೋಡಿ ನಗಲಿ ಎಂದೇ ಅಲ್ಲವೇ?"

ಆ ಮಾತಾಡಿದ ಜೀವಕ್ಕೆ ಎಷ್ಟು ನೋವಾಗಿರಬೇಡ. ಹನಿಹನಿಯಾಗಿ ಅವಳ ಕಣ್ಣಿಂದ ನೀರು ಜಾರಿತು. ಎಲ್ಲಾದರೂ ಹೋಗಿ, ಯಾರ ಎದೆಯಲ್ಲಾದರೂ ಮುಖ ನುರೆಸಿ ಗಟ್ಟಿಯಾಗಿ ಅತ್ತು ಬಿಡಬೇಕು ಎನಿಸಿತು ಅವಳಿಗೆ. ಆದರೆ ಯಾರ ಎದೆಯ ಆಶ್ರಯ ?....ಅಂದಿನ ಬಾಹುಬಂಧನದ ನೆನಪಾಯಿತು.

"ಓ, ಇಂದೆಲ್ಲಿ ಆ ತೋಳು ?"

ಮಮ್ಮಲ ಮರುಗಿತು ಅವಳ ಹೃದಯ - ಹಾಗೇ ತೂಗುತ್ತಿದ್ದಳು ಉಯ್ಯಾಲೆಯ ಮೇಲೆ, ಹೊತ್ತಿನ ಅರಿವಿಲ್ಲದೆ.

ಹೊರಗೆಲ್ಲೋ ಆಟವಾಡಲು ಹೋಗಿದ್ದ ಚಂದ್ರು, ತೋಟದಲ್ಲಿ ಉಯ್ಯಾಲೆಯ ಮೇಲೆ ಕುಳಿತಿದ್ದ ಪ್ರಭಾವತಿಯನ್ನು ಕಂಡು ಕೇಳಿದ—

"ಇವತ್ತು ಮೇಷ್ಟರು ಬರ್ತಾರೆ ಅಂದೆಯಲ್ಲ ಪಬ್ಬಿ, ಎಲ್ಲಿ ಬರಲೇ ಇಲ್ಲ ?"

"ಬನ್ನಿ ಎಂದು ಹೇಳಿ ಬಂದಿದ್ದೆ, ನಾಳೆ ಬರಬಹುದು."

ಅವಳ ಬಾಯಿ ಆ ಮಾತು ಹೇಳಿತು. ಆದರೆ 'ನಾಳೆ ಬರುತ್ತಾರೆಯೇ ?' ಎಂದು ಅವಳ ಹೃದಯ ಅವಳನ್ನೇ ಕೇಳಿತು. ಮತ್ತೆ ಉರಿ ಪ್ರಜ್ವಲಿಸಿತು ಅವಳ ಮೈಯಲ್ಲಿ.

ಆ ಉರಿಯಲ್ಲೇ ಇರುಳು ಕಳೆದಳು. ಮತ್ತೆ ಹಗಲಾಯಿತು. ಸಂಜೆಯಾಗಿ ಇರುಳು ಬೆಂಕಿಯ ಬೋನಾಗಿ ಕಳೆಯಿತು- ಶಾಂತಾರಾಂ ಬರಲಿಲ್ಲ.

"ಹಾಗಾದರೆ ಬರುವುದೇ ಇಲ್ಲವೇ? ಅವನ ಬಯಕೆ ಅಷ್ಟು ಬೇಗ ಬತ್ತಿಹೋಯಿತೇ? ತಾನು ಹೇಳಿಕಳಿಸಲಿಲ್ಲ. ಆದರೂ ಬನ್ನಿ ಎಂದಿರಲಿಲ್ಲವೇ ? ಬಂದಿದ್ದರೆ ತಪ್ಪಾಗುತ್ತಿತ್ತೆ ?"

ಕಾತರ-ವ್ಯಥೆ-ಕ್ರೋಧ-ಬಯಕೆ, ಕಡಲ ಕೆರೆಯಂತೆ ತೆರೆತೆರೆಯಾಗಿ ಅಪ್ಪಳಿಸಿದವು. ಉಳಿದೆಲ್ಲವನ್ನೂ ಮೆಟ್ಟಿ ಮೊರೆಯಿತು ಬಯಕೆ.

ಆ ಸಂಜೆ ಕಾಲೇಜಿನಿಂದ ಬರುವಾಗಲೇ ಅವನ ಮನೆಯ ಕಡೆ ತಾನೇ ಹೋದಳು.

ಎರಡೇ ದಿನದ ಕೆಳಗೆ ವಿಜಯಿಯಂತೆ ಸೋತವನಲ್ಲಿ ಔದಾರ್ಯ ತೋರಲು ಬಂದಿದ್ದಳು. ಈಗ ತಾನೇ ಪರಾಜಿತೆ !

ಬೇಡ ಬೇಡವೆಂದರೂ ಅಭಿಮಾನಭಂಗದಿಂದ ಉಕ್ಕಿಬಂದ ಕಂಬನಿಯನ್ನು ಒರೆಸಿಕೊಂಡು ಮುಚ್ಚಿದ ಬಾಗಿಲು ತಟ್ಟಿದಳು. ಶಾಂತಾರಾಮನೇ

ಬಂದು ಬಾಗಿಲು ತೆರೆದು, ಬಾಗಿಲಲ್ಲಿ ನಿಂತ ಪ್ರಭಾವತಿಯನ್ನು ನೋಡಿ ಚಕಿತನಾದ.

"ಓ! ನೀವು!"

"ಹೂ. ನಾನೇ. ತೃಪ್ತಿಯಾಯಿತೇ ನಿಮಗೆ. ನಿನ್ನೆ ಏಕೆ ಬರಲಿಲ್ಲ?"

ಕ್ರೋಧದಿಂದೆಂಬಂತೆ ಮಾತನಾಡಿದಳು ಪ್ರಭಾವತಿ. ಆದರೆ ಅದರ ಎಳೆ ಎಳೆಯ ನಡುವೆ ಕಂಬನಿ ಮಿಂಚುತ್ತಿತ್ತು.

"ಒಳಗೆ ಬನ್ನಿ, ಅಥವಾ ಬಾಗಿಲ ಬಳಿಯೇ ನಿಂತು ಮಾತಾಡಿ ಹೋಗಬೇಕೆಂದು ಬಂದಿದೀರೋ."

ಅವಳ ಸಹನೆಯನ್ನು ಪರೀಕ್ಷಿಸುವಂತಿತ್ತು ಅವನ ಮಾತಿನ ರೀತಿ. ಅಭಿಮಾನಭಂಗವಾದ ಹೆಣ್ಣಿನ ಹೃದಯದಲ್ಲಿ ಕ್ರೋಧ ಹೆಡೆಯಾಡಿಸುತ್ತಿತ್ತು. ಅವನನ್ನೇ ದುರುಗುಟ್ಟಿ ನೋಡುತ್ತಾ ಮಾತನಾಡದೆ ನಿಂತಳು.

"ಖಂಡಿತವಾಗಿಯೂ ಒಳಗೆ ಬರಬಹುದು. 'ಗೆಟೌಟ್' ಎಂದು ಖಂಡಿತ ಹೇಳುವುದಿಲ್ಲ. ನಾನಷ್ಟು ನಾಗರಿಕನಲ್ಲ. ಅಮ್ಮ ಮನೆಯಲ್ಲಿಲ್ಲವಾದುದರಿಂದ ಕಾಫಿ ಕೊಡಲಾರೆ. ಆದರೂ ಒಳಗೆ ಬನ್ನಿ."

ತಾನಂದು ಹೇಳಿದದುನ್ನು ಅಣಕಿಸುತ್ತಿದ್ದಾನೆ! ಹೆಡೆಯಪ್ಪಳಿಸಿ ಸೆಟೆದು ನಿಂತಿತು ಕ್ರೋಧ. ಹಾಗೇ ಅದನ್ನು ತಡೆಹಿಡಿದು ಒಳಗೆ ಹೋಗಿ ನಿಂತು ಸೆಳೆದು ಬಿಗಿದ ಧ್ವನಿಯಲ್ಲಿ ಕೇಳಿದಳು–

"ನಿನ್ನೆ ಏಕೆ ಬರಲಿಲ್ಲ?"

"ಬಾ ಎಂದು ಕರೆಸಿಕೊಳ್ಳದೆ ಬರುವ ಅಭ್ಯಾಸ ನನಗಿಲ್ಲ."

"ಒಮ್ಮೆ ಹೇಳಲಿಲ್ಲವೇ? ಮತ್ತೊಮ್ಮೆ ನಾನೇ ಬಂದು ಕರೆಯಬೇಕಾಗಿತ್ತೇ?"

"ಮತ್ತೊಮ್ಮೆ ಬರಬೇಕಾದರೆ ಹೇಳಿ ಕಳಿಸಿ ಎಂದು ಹೇಳಲಿಲ್ಲವೇ? ನೀವೇ ಬಂದಿದ್ದರೂ ತಪ್ಪಾಗುತ್ತಿರಲಿಲ್ಲ, ಅಲ್ಲವೇ?"

ನಗುನಗುತ್ತಾ ಹೇಳಿದ ಶಾಂತಾರಾಂ. ದುರುಗುಟ್ಟಿ ಅವನ ಮುಖವನ್ನೇ ನೋಡಿದಳು ಪ್ರಭಾವತಿ. ಅವನ ಮೊಗದ ಮೇಲಿನ ನಗು, ತನ್ನ ಅಪಮಾನದ ಪತಾಕೆ, ಬೇಕೆಂದೇ ತನ್ನನ್ನು ಅಪಮಾನಿಸಲೆಂದೇ ಆ ರೀತಿ ಮಾತಾಡುತ್ತಿದ್ದಾನೆಂದು ತೋರಿತು ಅವಳಿಗೆ.

"ಹೀಗೆ ಮಾತನಾಡುವುದು ಸಭ್ಯತನವಲ್ಲ."

"ಇರಬಹುದು. ಅಸಭ್ಯ ವರ್ತನೆ ಹೆಂಗಸರ ಗುತ್ತಿಗೆಯೇನೂ ಅಲ್ಲ."

ಶಾಂತಾರಾಂ ಆ ಮಾತು ಮುಗಿಸುವುದರೊಳಗಾಗಿ, ಫಳಾರ್ ಎಂದು ಅವನ ಕೆನ್ನೆಯ ಮೇಲೆ ಏಟು ಬಿತ್ತು. ಆ ಏಟಿನೊಂದಿಗೇ ಅದುವರೆಗೂ ಪ್ರಭಾವತಿ ತಡೆಹಿಡಿದ ಅಳುವೂ ನುಗ್ಗಿ ಬಂತು. ಅಳುಅಳುತ್ತಲೇ ನೆಲಕ್ಕೆ ಕುಸಿದು ಬಿಟ್ಟಳು. ಅವಳ ಅನಿರೀಕ್ಷಿತ ವರ್ತನೆಯಿಂದ ಶಾಂತಾರಾಂ ಅಪ್ರತಿಭನಾದ.

ನೆಲಕ್ಕೆ ಜಾರಿದ ಪ್ರಭಾವತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ದುಃಖದ ಆವೇಗಕ್ಕೆ ಅವಳ ಮೈ ಮೀಟಿದ ತಂತಿಯಂತೆ ಕಂಪಿಸುತ್ತಿತ್ತು. ಅದನ್ನು ನೋಡುವುದಾಗಲಿಲ್ಲ. ಬಾಗಿ ನೆಲದ ಮೇಲೆ ಮಲಗಿದವಳನ್ನು ಎತ್ತಿದ. ಅವನ ಎದೆಯನ್ನು ಒರಗಿ ನಿಂತಳು ಅವಳು. ಅವಳ ಮೈಯ ಬಯಕೆ, ಕಣ್ಣ ಹನಿಯಲ್ಲಿ ಕುಡಿಯಾಗಿ ಉರಿಯಿತು. ಅವಳ ದೇಹಸ್ಪರ್ಶದಿಂದ ಅವನನ್ನು ಬಯಕೆ ಚಿಮ್ಮಿತು. ಒಂದು ಗಳಿಗೆ ಅವಳ ಮುಖವನ್ನೇ ದಿಟ್ಟಿಸಿ ನೋಡಿ, ತನ್ನೆದೆಯೊಳಗೆ ಉರಿದ ಬಯಕೆಯನ್ನು ತಡೆಯಲಾರದೆ, ಹಾಗೇ ಅವಳನ್ನೂ ಎದೆಗೆ ಬಿಗಿದುಕೊಂಡು ಚುಂಬಿಸಿದ. ಅವಳ ತೋಳು ಅವನನ್ನು ಬಳಸಿ ಬಿಗಿಯಿತು. ಎರಡು ನಿಮಿಷ ಇಬ್ಬರಿಗೂ ಜಗತ್ತಿನ ಅರಿವಿರಲಿಲ್ಲ.

ಬಳಿಕ ಹೆಣ್ಣು ಮೊದಲು ಎಚ್ಚರವಾದಳು. ಚುಂಬನದ ಮಾದಕತೆಯ ಮಂಪರಿನಲ್ಲೇ ಕೇಳಿದಳು.

"ನಿನ್ನೆ ಏಕೆ ಬರಲಿಲ್ಲ?"

"ನನಗಾಗಿ ಕಾದಿದ್ದೆಯಾ ಪ್ರಭಾ?"

ಅವಳ ಕಣ್ಣ ಕುಡಿಯಲ್ಲಿ ಮಿನುಗುತ್ತಿದ್ದ ಕಂಬನಿಯ ಹನಿಯನ್ನು ತುಟಿಯಿಂದ ಒರೆಸಿ ಕೇಳಿದ.

"ಹೂ."

"ನನ್ನನ್ನು ಕ್ಷಮಿಸು. ಅಂತೂ ಸೇಡು ತೀರಿಸಿಕೊಂಡೆಯಲ್ಲಾ, ಈಗ ತೃಪ್ತಿಯಾಯಿತೆ?"

"ಏನು ಸೇಡು?"

"ಅಂದು ಒಂದು ಕೆನ್ನೆಗಾಗಿತ್ತು. ಇವೊತ್ತು ಇನ್ನೊಂದು ಕೆನ್ನೆಗೆ...."

"ಮತ್ತೆ, ನಿನ್ನಂಥವರನ್ನು ದಾರಿಗೆ ತರುವುದು ಹೇಗೆ...."

ಮಳೆಯ ಹನಿಗಳ ಮೇಲೆ ಬಿಸಿಲು ಹೊಳೆದಂತೆ ಅವಳ ಮುಖದ ಮೇಲೆ ಮಂದಹಾಸ ತುಳುಕಿತು. ನಗುನಗುತ್ತಲೇ ಕೇಳಿದಳು—

" ತುಂಬಾ ನೋವಾಯಿತೇ ?"

" ಕೆನ್ನೆಯ ಮೇಲಿನ ನಿನ್ನ ಬೆರಳ ಗುರುತನ್ನೇ ಕೇಳು."

ಪ್ರಭಾ ಅವನ ಕೆನ್ನೆಯನ್ನು ನೋಡಿದಳು. ಐದು ಬೆರಳುಗಳ ಗುರುತೂ ಕಂಡಿತು. ತುಟಿಯಿಂದ ಅವನ ಕೆನ್ನೆಯನ್ನು ಮೃದುವಾಗಿ ಸವರಿಕೇಳಿದಳು –

" ಅಷ್ಟೇಕೆ ನನ್ನನ್ನು ರೇಗಿಸಿದೆ ?"

" ಈ ಸುಖಕ್ಕಾಗಿ !"

ಇಬ್ಬರೂ ನಕ್ಕರು.

" ಹೊತ್ತಾಗಿ ಹೋಯಿತು. ನಾನಿನ್ನು ಮನೆಗೆ ಹೋಗುತ್ತೇನೆ. ನಾಳೆಯಿಂದ ಪಾಠಕ್ಕೆ ಬರುತ್ತೀಯ, ಅಲ್ಲವೇ ?"

" ಹೂ."

" ತಪ್ಪಿಸಿದರೆ ಏನಾಗುವುದೆಂದು ಗೊತ್ತಲ್ಲ...."

" ಹೀಗೇ ಆಗಲಿ ಎಂದರೆ....!"

" ಎರಡನೆಯದಕ್ಕೆ ಸೊನ್ನೆ ಬಿದ್ದು, ಮೊದಲನೆಯದು ಮಾತ್ರವೇ ಆಗಬಹುದು."

" ಹಾಗಾದರೆ ಖಂಡಿತ ಬರುತ್ತೀನಿ."

" ಖಂಡಿತ ?"

" ಖಂಡಿತ."

ನೆಲದ ಮೇಲೆ ಬಿದ್ದ ಪುಸ್ತಕಗಳನ್ನು ಜೋಡಿಸಿಕೊಂಡು, ಗೋಡೆಯ ಮೇಲಿದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡು, ತಟಕ್ಕನೆ ಅವನನ್ನು ತಬ್ಬಿ ಮುತ್ತಿಟ್ಟು ಹೋದಳು ಪ್ರಭಾವತಿ – ಜಗತ್ತನ್ನೇ ಗೆದ್ದ ವಿಜಯಿಯಂತೆ.

೭

ಅಂದು ಅವರಿಬ್ಬರಲ್ಲಿ ಮೂಡಿದ ಪ್ರೇಮ ದಿನದಿನಕ್ಕೆ ಬೆಳೆದು ದಾಂಗುಡಿಯಿಟ್ಟಿತು.

ಆಗಾಗ ಇಬ್ಬರೂ ಕಲೆತು, ಭವಿಷ್ಯವನ್ನು ಚಿಂತಿಸುವರು. ಅವರಿಬ್ಬರೂ ಒಬ್ಬರನ್ನೊಬ್ಬರು ಒಪ್ಪಿದ್ದರು. ಮದುವೆಯಾಗಲೂ ಸಿದ್ಧರಿದ್ದರು. ಆದರೆ ಪ್ರಭಾವತಿಯ ತಂದೆತಾಯಿಗಳು ಒಪ್ಪಬೇಡವೇ ? ಪ್ರಭಾವತಿಗೇನೋ ಅವರು

ಬೇಡವೆನ್ನುವುದಿಲ್ಲವೆಂಬ ನಂಬಿಕೆ. ಆದರೆ ಶಾಂತಾರಾಮನಿಗೆ ಅದರದೇ ಅಪನಂಬಿಕೆ.

ಇಂದು, ನಾಳೆ ತಂದೆತಾಯಿಗಳ ಒಪ್ಪಿಗೆ ಪಡೆಯಬೇಕೆನ್ನುತ್ತಾ ಕಾಲ ಕಳೆಯುತ್ತಿದ್ದರವರು – ತಾವು ಹೇಳದೆ ತಮ್ಮ ಸ್ನೇಹ ಜಗತ್ತಿಗೆ ತಿಳಿಯುವುದಿಲ್ಲ ವೆಂಬಂತೆ.

ಆದರೆ ಸಹಸ್ರಾಕ್ಷಿಯಾದ ಸಮಾಜ ಬಹು ಬೇಗ ಇದನ್ನು ಕಂಡು ಹಿಡಿಯಿತು. ರತ್ನಮ್ಮ ಇದನ್ನು ಕೇಳಿ ಗಳೋ ಎಂದು ಅತ್ತರು. ಸಂಜೀವ ರಾಯರು ಕಿಡಿಕಿಡಿಯಾದರು.

"ಮಗಳಿಗೆ ಮದುವೆ ಮಾಡಿ ಮಾಡಿ ಎಂದು ಬಡಿದುಕೊಂಡೆ. ನೀವು ಕೇಳಲಿಲ್ಲ. ಈಗ ಈ ಅಪಮಾನ ಹೇಗೆ ಸಹಿಸಬೇಕು?" ಕೊರಗಿನಲ್ಲಿ ಅರ್ಧವಾಗಿ ಕಂಬನಿಗರೆಯುತ್ತಾ ಕೇಳಿದರು ರತ್ನಮ್ಮ.

"ಇವೆಲ್ಲಾ ಆ ಭಡವನ ಚಾಲೂಕು, ಪಬ್ಬಿಗೆ ತಲೆ ಕೆಡಿಸಿದ್ದಾನೆ. ಅವನಿಗೆ ಸರಿಯಾಗಿ ಬುದ್ಧಿ ಕಲಿಸದಿದ್ದರೆ ನನ್ನ ಹೆಸರು ಸಂಜೀವರಾಯನೇ ಅಲ್ಲ" ಎಂದು ರಾಯರು ಘುಡುಘುಡಿಸಿದರು.

ಮಾರುದಿನವೇ ಶಾಂತಾರಾಮನಿಗೆ ಮನೆಗೆ ಬರದಂತೆ ಕಟ್ಟಪ್ಪಣೆ ಯಾಯಿತು –

"ಮಾನಕ್ಕೆ ಹೆದರಿ ನಿನ್ನನ್ನು ಜೀವಸಹಿತ ಬಿಟ್ಟದ್ದೇನೆ. ಇಲ್ಲವಾದರೆ ತಗ್ಗು ತೆಗೆದು ಹೂಳಿಸಿಬಿಡುತ್ತಿದ್ದೆ ಭಡವಾ. ಅನ್ನ ಹಾಕಿದ್ದಕ್ಕೆ ಸರಿಯಾದ ಪ್ರತ್ಯುಪಕಾರ ಮಾಡಿದೆ."

ಶಾಂತಾರಾಂ ತನ್ನ ಸಹನೆ ಕಳೆದುಕೊಳ್ಳದೆ ಉತ್ತರ ಕೊಟ್ಟ:

"ನಿಮ್ಮ ಮಗಳನ್ನು ಕೆಡಿಸಬೇಕೆಂಬುದಾಗಲಿ, ನಿಮ್ಮ ಮಾನಭಂಗ ಮಾಡಬೇಕೆಂಬುದಾಗಲಿ ನನ್ನ ಇಚ್ಛೆಯಲ್ಲ. ನಿಮ್ಮ ಅನುಮತಿ ಪಡೆದೇ ಮದುವೆಯಾಗಬೇಕೆಂದಿದ್ದೆವು."

"ಅನುಮತಿಯಂತೆ. ಮದುವೆಯಂತೆ–ಇನ್ನೊಂದು ಸಲ ಆ ಮಾತಾಡಿ ದರೆ ಹಲ್ಲು ಮುರಿದುಬಿಟ್ಟೇನು. ಹೊರಡಾಚೆ! ಪ್ರಭಾ, ನೀನು ನನ್ನ ಮಗಳಾದರೆ ಇನ್ನೊಮ್ಮೆ ಈ ಚಂಡಾಲನ ಮುಖ ನೋಡಕೂಡದು."

ಅದುವರೆಗೂ ಮಾತನಾಡದೆ ತಂದೆಯ ಮಾತನ್ನು ಕೇಳುತ್ತಿದ್ದ ಪ್ರಭಾವತಿ ನಿಶ್ಚಯ ಸ್ವರದಿಂದ ಹೇಳಿದಳು –

"ಅದು ಸಾಧ್ಯವಿಲ್ಲ ಡ್ಯಾಡಿ."

"ಆ – ಏನಂದೆ?" ಸಿಡಿದೆದ್ದು ಕೇಳಿದರು ಸಂಜೀವರಾಯರು.

"ನಿಜವಾಗಿಯೂ ಡ್ಯಾಡಿ. ಅವರನ್ನೇ ನಾನು ಮದುವೆಯಾಗುವುದು."

"ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ."

"ನಮ್ಮನ್ನು ತಡೆಯುವುದೂ ಸಾಧ್ಯವಿಲ್ಲ, ಡ್ಯಾಡಿ. ಸುಮ್ಮನೆ ಮನಸು ಕೆಡಿಸಿಕೊಳ್ಳಬೇಡಿ. ನೀವೇ ಹೇಳುತ್ತಿದ್ದಿರಿ, ನನ್ನ ಮನ ಒಪ್ಪಿದವನನ್ನು ಮದುವೆಯಾಗುವ ಅಧಿಕಾರ ನನಗಿದೆಯೆಂದು. ನಾನು ಮದುವೆಯಾಗುವುದೂ ನಿಮಗೆ ಬೇಕಿತ್ತು. ಇವರನ್ನು ನಾನು ಒಪ್ಪಿದೇನೆ. ಅದಕ್ಕೇಕೆ ಅಡ್ಡಿ ಬರುತ್ತೀರಿ. ನನ್ನ ಮೇಲೆ ನಿಮಗೆ ಪ್ರೀತಿ ಇದ್ದರೆ, ನೀವೂ ಒಪ್ಪಿಗೆ ಕೊಡಿ."

"ನಾನು ಕೊಟ್ಟ ಸಲಿಗೆಯನ್ನು ನೀನು ಈ ರೀತಿ ದುರುಪಯೋಗ ಪಡಿಸಿಕೊಳ್ಳುತ್ತಿ ಎಂದು ನಾನು ನಂಬಿರಲಿಲ್ಲ ಪ್ರಭಾ. ಈ ಹುಚ್ಚು ಬಿಟ್ಟುಬಿಡು."

"ಒಂದು ಸಲ ನಾನಾಗಲೇ ಹೇಳಿದೇನೆ. ಇವರು ನನ್ನ ಪತಿ."

"ನಾನೂ ಒಂದು ಸಲ ಹೇಳಿದೇನೆ ಪ್ರಭಾ. ಮತ್ತೆ ಅದೇ ಮಾತಾಡಿದರೆ, ನಿನಗೂ ಈ ಮನೆಯಲ್ಲಿ ಜಾಗವಿಲ್ಲದೆ ಹೋದೀತು."

"ಅದೇ ನಿಮ್ಮಿಷ್ಟವಾದರೆ ಹಾಗೇ ಆಗಲಿ. ಈ ಮನೆಯಲ್ಲಿ ಶಾಂತಾರಾಂಗೆ ಜಾಗವಿಲ್ಲವಾದರೆ ನನಗೂ ಬೇಡ."

"ಇದರ ಪರಿಣಾಮ ಒಳಿತಾಗಲಿಕ್ಕಿಲ್ಲ ಪ್ರಭಾ."

"ಬಂದದ್ದು ಬರಲಿ."

"ಹಾಗಾದರೆ ನೀನೂ ಮನೆ ಬಿಟ್ಟು ಹೊರಡು. ತಂದೆಯ ಮಾತು ಕೇಳದ ನಿನ್ನಂಥ ಮಗಳು ಇದ್ದರೂ ಒಂದೇ, ಸತ್ತರೂ ಒಂದೇ."

ಪ್ರಭಾವತಿಯೂ ಮನೆ ಬಿಟ್ಟು ಹೊರಡಲು ಸಿದ್ಧವಾದಳು. ರತ್ನಮ್ಮ ಗಂಡ–ಮಗಳು ಇಬ್ಬರಿಗೂ ಕಾಲು ಕಟ್ಟಿಕೊಂಡು ಬೇಡಿದಳು. ಆದರೆ ಇಬ್ಬರೂ ತಮ್ಮ ನಿರ್ಧಾರ ಬದಲಿಸಲಿಲ್ಲ.

"ಶಾಂತಾರಾಂ, ನಿನ್ನೊಂದಿಗೆ ನಾನೂ ಬರುತ್ತೇನೆ, ತಡೆ" ಎಂದು ಹೇಳಿ ಪ್ರಭಾವತಿ ಒಳಗೆ ಹೋಗಿ, ಸೂಟ್‌ಕೇಸಿನಲ್ಲಿ ತನ್ನ ಬಟ್ಟೆ ಒಡವೆಗಳನ್ನು ತುಂಬಿಕೊಂಡು ಬಂದು "ನಡೆ ಹೋಗೋಣ, ಸ್ವಾತಂತ್ರ್ಯವಿಲ್ಲದ ಈ ಮನೆ ನನಗೆ ಬೇಡ" ಎಂದು ತಾನೇ ಶಾಂತಾರಾಮನನ್ನು ಹೊರಗೆ ಎಳೆದುಕೊಂಡು ಬಂದಳು.

"ಇನ್ನು ಈ ಮನೆಯಲ್ಲಿ ಯಾರೂ ಅವಳ ಹೆಸರು ಎತ್ತಕೂಡದು" ಎಂದು ಎಲ್ಲರಿಗೂ ಅಪ್ಪಣೆ ಮಾಡಿ, ರಾಯರು ಬಾಗಿಲು ಹಾಕಿದರು. ಬಾಗಿಲು ಮುಚ್ಚಿದರೂ, ತಾಯಿಯ ಅಳುವಿನ ಧ್ವನಿ ಪ್ರಭಾವತಿಗೆ ಕೇಳುತ್ತಿತ್ತು. ಕಾಂಪೌಂಡಿನ ಬಾಗಿಲು ದಾಟುವವರೆಗೂ ಧೃಡವಾಗಿ ಬಂದ ಪ್ರಭಾವತಿ ಬಾಗಿಲ ಬಳಿ ಬಂದಾಗ, ಮನೆಯ ಮಮತೆ ಮರುಕಳಿಸಿ ಬಿಕ್ಕಿ ಬಿಕ್ಕಿ ಅತ್ತಳು. ಶಾಂತಾರಾಂ ಅವಳ ತಲೆಯನ್ನು ನೇವರಿಸಿ ಹೇಳಿದ –

"ಈಗಲೂ ತಡವಾಗಿಲ್ಲ ಪ್ರಭಾ. ಮನೆಗೆ ಹಿಂದಿರುಗು. ಮುಂದೆ ಕಾದಿರುವ ಜಗತ್ತು ಬೆಂಕಿಯ ಹಾಸಿಗೆ."

"ಬೇಕಾದುದಾಗಲಿ, ನೀನಿರುವೆಯಲ್ಲ ನನ್ನ ಜೊತೆಗೆ."

ಕಣ್ಣೀರನ್ನು ಒರಸಿಕೊಂಡು ಕೇಳಿದಳು ಪ್ರಭಾವತಿ.

"ಈ ದೇಹದಲ್ಲಿ ಜೀವವಿರುವವರೆಗೂ!"

ದಾರಿಯಲ್ಲಿ ಹೋಗುತ್ತಿದ್ದ ಜಟಕಾದಲ್ಲಿ ಕುಳಿತು ಇಬ್ಬರೂ ಶಾಂತಾರಾಮನ ಮನೆಗೆ ಬಂದರು. ಶಾಂತಾರಾಂ ಪ್ರಭಾವತಿಯ ಪೆಟ್ಟಿಗೆಯನ್ನು ಒಳಗಿಡುತ್ತಾ ಹೇಳಿದ –

"ಅಮ್ಮ, ಸೊಸೆ ಬೇಕೆಂದು ಬಯಸುತ್ತಿದ್ದೆಯಲ್ಲ, ಇಗೋ ನಿನ್ನ ಸೊಸೆ."

ಮುದುಕಿಗೆ ಅವನ ಮಾತನ್ನು ನಂಬುವುದು ಸಾಧ್ಯವಾಗಲಿಲ್ಲ.

"ಇದೇನು ಮಾತೋ, ಏನೇನು ಆಡುತ್ತಿದೀಯ. ಯಾರ ಮನೆಯ ಹುಡುಗಿಯನ್ನೋ ತಂದು 'ಇಗೋ ಸೊಸೆ' ಎನ್ನುತ್ತೀಯ, ನಿನಗೇನು ಹುಚ್ಚು ಹಿಡಿಯಿತೇನು?"

"ಹುಚ್ಚಲ್ಲಮ್ಮ, ಸತ್ಯವಾಗಿಯೂ."

ಶಾಂತಾರಾಂ ನಿಧಾನವಾಗಿ ನಡೆದುದೆಲ್ಲವನ್ನು ಆದ್ಯಂತವಾಗಿ ವಿವರಿಸಿದ.

"ಅಗ್ನಿಸಾಕ್ಷಿಯಾಗಿ ನಾವಿಬ್ಬರೂ ಮದುವೆಯಾಗಬೇಕಾಗಿತ್ತು. ಹಾಗಾಗಲಿಲ್ಲ. ನೀನು ತಾಯಿ. ದೇವತಾಸ್ವರೂಪ. ಇಗೋ, ನಿನ್ನೆದುರು ಅವಳನ್ನು ಕೈ ಹಿಡಿಯುತ್ತಿದೇನೆ. ಆಶೀರ್ವಾದ ಮಾಡು ಅಮ್ಮಾ."

ಎಂದು ತಾಯಿಗೆ ನಮಸ್ಕರಿಸಿದ. ಪ್ರಭಾವತಿಯೂ ನಮಸ್ಕಾರ ಮಾಡಿದಳು. ಶಾಂತಾರಾಮನ ತಾಯಿ ಬೇರೇನೂ ಹೇಳಲು ತೋಚದೆ –

"ದೇವರು ನಿಮ್ಮಿಬ್ಬರಿಗೂ ಒಳ್ಳೆಯದನ್ನು ಮಾಡಲಿ," ಎಂದಳು.

ಆ ದಿನ ಮೊದಲಬಾರಿಗೆ ಇಬ್ಬರೂ ಏಕಶಯ್ಯೆಯಲ್ಲಿ ಮಲಗಿ ಸಂಸಾರ ಸ್ವೀಕಾರ ಮಾಡಿದರು.

## ೮

ಮನೆಯ ಬಾಗಿಲು ದಾಟುವಾಗಲೇ ಶಾಂತಾರಾಂ ಪ್ರಭಾವತಿಗೆ 'ನಮ್ಮ ಮುಂದೆ ಕಾದಿರುವ ಜಗತ್ತು ಬೆಂಕಿಯ ಹಾಸಿಗೆ' ಎಂದು ಹೇಳಿದ್ದ. ಪ್ರಭಾವತಿಗೂ ಆ ಮಾತಿನಲ್ಲಿ ಸಂಶಯವಿರಲಿಲ್ಲ. ಆದರೆ ಬಾಳಿನ ಅಗ್ನಿಪರೀಕ್ಷೆ ಅಷ್ಟು ಬೇಗ ಆರಂಭವಾಗಬಹುದೆಂದು ಅವಳು ಊಹಿಸಿರಲಿಲ್ಲ.

ಮನೆಯಿಂದಂತೂ ಹೊರಬಂದುದಾಗಿತ್ತು. ಇಷ್ಟು ಬೇಗ ಹೀಗಾಗುವುದೆಂದು, ಅವರಿಬ್ಬರೂ ನಿರೀಕ್ಷಿಸಿರಲಿಲ್ಲ. ಹೀಗಾಗಬಹುದೆಂದು ಪ್ರಭಾವತಿಯಂತೂ ಊಹಿಸಿರಲಿಲ್ಲ. ಎಂತಲೇ ಈ ಅನಿರೀಕ್ಷಿತ ಘಟನೆ, ಬಿರುಗಾಳಿಯ ವೇಗದಿಂದ ಬಡಿದಾಗ, ಆ ತೆರೆ ಹೊಯ್ದುತ್ತ ಸಾಗಿ ಹೊರಬಂದಿದ್ದರು. ಆ ಅನಿರೀಕ್ಷಿತ ಘಟನೆಯು ಆಘಾತದಿಂದಲೇ ಅವರು ಚೇತರಿಸಿಕೊಂಡಿರಲಿಲ್ಲ. ಅದರ ಬಗ್ಗೆ ಅವರು ಚಿಂತಿಸಲೂ ಅವಕಾಶವಿರಲಿಲ್ಲ. ಮುಂದೇನು? ಅಭೇದ್ಯ ರಹಸ್ಯದ ಕಾಳ ಕರಾಳ ಬಾಯಿ ಕಿಸಿದು, ಅವರ ಕಣ್ಣೆದುರು ನಿಂತಿತ್ತು ಭವಿಷ್ಯ. ಮುಂದೇನು ಮಾಡುವುದು? ಆ ಯೋಚನೆಯಿಂದಲೇ ಅವರಿಬ್ಬರ ಮತಿ ಮುಸಣಿಸಿತ್ತು. ಅದರ ಜೊತೆಗೆ ಪ್ರಥಮ ಪ್ರಣಯಾನುಭವದ ಮಾದಕತೆಯೂ ಅವರ ಮೈ ಮಿದುಳನ್ನು ಮುಸುಕಿತ್ತು. ಇಂದೇನು, ನಾಳೆ ಯೋಚಿಸೋಣ ಎಂಬ ತುಯ್ದಾಟದಲ್ಲಿ ಅವರಿದ್ದರು.

ಆದರೆ ಸಮಾಜ ಅವರು ತಮ್ಮ ಅನಿಶ್ಚಿತ ಪರಿಸ್ಥಿತಿಯಿಂದ ಸಾವರಿಸಿಕೊಂಡು ನಿರ್ಧಾರಕ್ಕೆ ಬರುವವರೆಗೂ ಕಾದು ಕುಳಿತುಕೊಳ್ಳಲು ಸಿದ್ಧವಾಗಿರಲಿಲ್ಲ. ಪ್ರಭಾವತಿಯ ತಂದೆಯೋ ಪ್ರಕ್ಷುಬ್ಧ ಸಮಾಜದ ಪ್ರತೀಕಾರ ತೃಷೆಯ ಕರವಾಳದಂತೆ ಮಸೆದು ನಿಂತಿದ್ದರು. ಮರುದಿನವೇ ಕತ್ತಿ ಬೀಸಿತು.

ಮಾರನೆಯ ದಿನ ಅವರಿಬ್ಬರೂ ಕೋಣೆಯಲ್ಲಿ ಮಾತನಾಡುತ್ತಾ ಕುಳಿತಿದ್ದಾಗ ಶಾಂತಾರಾಮನ ತಾಯಿ ಲಲಿತಮ್ಮ ಬಂದು ಬಾಗಿಲು ತಟ್ಟಿದರು. ಶಾಂತಾರಾಂ ಎದ್ದುಹೋಗಿ, ಬಾಗಿಲು ತೆಗೆದು ತಾಯಿಯ ಮುಖವನ್ನು ನೋಡಿ ಅಪ್ರತಿಭನಾದ. ಆಕೆಯ ಮುಖ ಭಯದಿಂದ ವಿಕಾರವಾಗಿತ್ತು. ಆಕೆಯ ಗಂಟಲಿಂದ ಮಾತೇ ಹೊರಡುವಂತಿರಲಿಲ್ಲ. ಶಾಂತಾರಾಂ ಕೇಳಿದ:

"ಏನಾಯಿತಮ್ಮ?"

"ಪೊ....ಪೊ....ಪೋಲೀಸರು...."

"ಆ!"

"ಪೋಲೀಸರು ಬಂದಿದಾರಪ್ಪಾ" ಎಂದು ಅಳಲಿಕ್ಕೇ ಆರಂಭಿಸಿದಳು ಲಲಿತಮ್ಮ.

ಪೋಲೀಸರ ಹೆಸರು ಕೇಳಿ, ಪ್ರಭಾವತಿಯೂ ಸಿಡಿದು ಬಾಗಿಲ ಬಳಿ ಬಂದಳು. ಶಾಂತಾರಾಮನ ಹೃದಯದಲ್ಲೂ ಧಿಗ್ಗನೆ ಭೀತಿ ಕವಿಯಿತು. ಆದರೂ ಸಾವರಿಸಿಕೊಂಡು,

"ಅಷ್ಟಕ್ಕೇ ಹೆದರಿ ಅಳಬೇಕೇ? ಪ್ರಭಾ, ಅಮ್ಮನನ್ನು ಸಮಾಧಾನ ಮಾಡು. ನಾನು ಹೋಗಿ ಏನೆಂದು ವಿಚಾರಿಸುತ್ತೇನೆ" ಎಂದು ಹೊರಗೆ ಬಂದ.

ಬಾಗಿಲಲ್ಲಿ ನಿಂತಿದ್ದ ಪೋಲೀಸ್ ಕಾನ್‌ಸ್ಟೇಬಲ್ ಶಾಂತಾರಾಮನ ಕೈಗೆ ಕಾಗದ ಕೊಟ್ಟು –

"ಸ್ಟೇಷನ್ನಿಗೆ ಬರಬೇಕು" ಎಂದ.

ಪ್ರಭಾವತಿಯೂ ಶಾಂತಾರಾಮನನ್ನು ಹಿಂಬಾಲಿಸಿ ಬಾಗಿಲವರೆಗೆ ಬಂದಿದ್ದಳು. ಅವಳಿಗೆ ಏನು ಸುದ್ದಿಯೆಂದು ತಿಳಿದುಕೊಳ್ಳಲು ಆತುರವಾಗಿತ್ತು. ಶಾಂತಾರಾಂ ಪೋಲೀಸಿನವರು ಕೊಟ್ಟ ಕಾಗದವನ್ನು ಓದುತ್ತಿದ್ದ ಹಾಗೇ, ಅವನ ಮುಖದ ಬಣ್ಣ ಕೆಟ್ಟುಹೋಯಿತು. ಅವನ ಮುಖದ ಲಕ್ಷಣವನ್ನು ಕಂಡೇ ಪ್ರಭಾವತಿ ಕಂಗಾಲಾಗಿ ಕೇಳಿದಳು –

"ಏನು ವಿಷಯ?"

"ನಿಮ್ಮ ತಂದೆ ಪೋಲೀಸರಿಗೆ ದೂರು ಕೊಟ್ಟಿದಾರೆ ನನ್ನ ಮೇಲೆ–ಕನ್ಯಾಪಹಾರದ ಆಪಾದನೆಗಾಗಿ. ಅದಕ್ಕೇ ಈ ಕರೆ."

ರಸವಿಹೀನ, ಕರ್ಕಶ ಧ್ವನಿಯಲ್ಲಿ ಹೇಳಿದ ಶಾಂತಾರಾಂ. ಒಂದು ಗಳಿಗೆ ಪ್ರಭಾವತಿಗೆ ಆ ಮಾತನ್ನು ಕೇಳಿಯೂ ನಂಬುವುದಾಗಲಿಲ್ಲ. ತನ್ನ ತಂದೆ – ಈ ದೂರಕ್ಕೆ....?

"ನಿಜವಾಗಿಯೂ!"

ಶಾಂತಾರಾಂ ಅವಳ ಪ್ರಶ್ನೆಗೆ ಉತ್ತರ ಕೊಡದೆ ಕಾಗದವಿತ್ತ. ಪ್ರಭಾವತಿ ತಾನೇ ಕಾಗದವನ್ನು ಓದಿಕೊಂಡಳು. ಅವಳ ಮುಖವೂ ಒಂದು ಗಳಿಗೆ

ವಿವರ್ಣವಾಗಿ ಮರುಗಳಿಗೆಯೇ ಸಿಟ್ಟಿನಿಂದ ಉರಿಯಲಾರಂಭಿಸಿತು. ಅವಳ ಹೃದಯ ಕರ್ಕಶವಾಯಿತು.

"ನೀನು ಅಮ್ಮನನ್ನು ನೋಡಿಕೋ. ಹೆದರಿಯಾಳು. ನಾನು ಸ್ಟೇಷನ್ನಿಗೆ ಹೋಗಿ ಬರುತ್ತೇನೆ." ಎಂದ ಶಾಂತಾರಾಂ.

"ಇವರೇ ಏನು ಸಂಜೀವರಾಯರ ಮಗಳು, ಪ್ರಭಾವತಿ?" ಕಾನ್‌ಸ್ಟೇಬಲ್ ಪ್ರಶ್ನೆ ಮಾಡಿದ.

"ಹೂ. ನಾನೇ" ಪ್ರಭಾವತಿಯೇ ಉತ್ತರ ಕೊಟ್ಟಳು.

"ನಿಮ್ಮನ್ನೂ ಸ್ಟೇಷನ್ನಿಗೆ ಕರೆತರುವಂತೆ ಹೇಳಿದಾರೆ ಇನ್‌ಸ್ಪೆಕ್ಟರು."

ಒಂದು ನಿಮಿಷದ ಅವಕಾಶ ಕೇಳಿ ಪ್ರಭಾವತಿಯೂ ಸ್ಟೇಷನ್ನಿಗೆ ಹೊರಡಲು ಸಿದ್ಧವಾದಳು. ಲಲಿತಮ್ಮ ಇಬ್ಬರೂ ಪೋಲೀಸಿನವನನ್ನು ಹಿಂಬಾಲಿಸಲು ಸಿದ್ಧರಾದುದನ್ನು ಕಂಡು, ಮಗನನ್ನು ತಬ್ಬಿ ಗಳೋ ಎಂದು ಅಳಲಾರಂಭಿಸಿದಳು. ಶಾಂತಾರಾಂ ಆಕೆಯ ಗೋಳಾಟವನ್ನು ಕಂಡು ರೇಗಿ –

"ಸುಮ್ಮನಿರಬಾರದೇ, ಪ್ರಪಂಚವೇನೂ ಮುಳುಗಿಹೋಗುವುದಿಲ್ಲ" ಎಂದು ಗದರಿಸಿಕೊಂಡ.

"ಅವರ ಮೇಲೆಕೆ ರೇಗುತ್ತಿ." ಎಂದು ಶಾಂತಾರಾಮನಿಗೆ ಸಮಾಧಾನ ಹೇಳಿ "ಅಮ್ಮಾ, ಏನೂ ಭಯವಿಲ್ಲ. ಈಗ ಬಂದುಬಿಡುತ್ತೇವೆ" ಎಂದು ಪ್ರಭಾವತಿ ಮುದುಕಿಗೂ ಸಮಾಧಾನ ಹೇಳಿದಳು.

ಇಬ್ಬರೂ ಪೋಲೀಸ್ ಸ್ಟೇಷನ್ನಿಗೆ ಬಂದರು. ಸ್ಟೇಷನ್ನಿನಲ್ಲಿ ಮೊಟ್ಟಮೊದಲು ಇವರ ಕಣ್ಣಿಗೆ ಕಂಡದ್ದು ಸಿಟ್ಟಿನಿಂದ ಉರಿಯುತ್ತಿದ್ದ ಸಂಜೀವರಾಯರ ಮುಖ. ಶಾಂತಾರಾಮನನ್ನು ಕಂಡಕೂಡಲೇ –

"ಇವನೇ ಆ ಸ್ಕ್ಯಾಂಡ್ರಲ್" ಎಂದು ಚೀರಿದರು. ಅವರ ಮಾತು ಕೇಳಿ ಶಾಂತಾರಾಂ ಉಕ್ಕಿಬಂದ ಸಿಟ್ಟನ್ನು ತುಟಿ ಕಚ್ಚಿ ತಡೆದ. ಪ್ರಭಾವತಿಗೂ ರೇಗಿತು. ಅವರನ್ನು ನೋಡದವಳಂತೆ ಪೋಲೀಸ್ ಇನ್‌ಸ್ಪೆಕ್ಟರಿಗೆ ಹೇಳಿದಳು –

"ದಯವಿಟ್ಟು ಅಸಭ್ಯ ಮಾತಾಡದಂತೆ ಹೇಳಿ. ನಿಮ್ಮ ಆಪಾದನೆಗೆ ಉತ್ತರ ಕೊಡಲು ಬಂದಿದೇವೆ. ಬೇರೆಯವರ ಕೈಲಿ ಅಪಮಾನ ಮಾಡಿಸಿಕೊಳ್ಳಲಲ್ಲ."

ಮಗಳ ಮಾತು ರಾಯರ ಮುಖಕ್ಕೆ ರಾಚಿದಂತಾಯಿತು. ಪೋಲೀಸ್

ಇನ್‌ಸ್ಪೆಕ್ಟರು ಈ ಮಾತುಗಳು ಕಿವಿಗೆ ಬೀಳದವರಂತಿದ್ದು, ಶಾಂತಾರಾಂಗೆ ಹೇಳಿದರು –

"ನಿಮ್ಮ ಮೇಲೆ ಇವರು ಕನ್ಯಾಪಹಾರದ ದೂರು ತಂದಿದಾರೆ. ಇದು ಕೋರ್ಟಿನ ಮೆಟ್ಟಿಲ ವರೆಗೆ ಏರಿ ನಗಪಾಟಲಾಗದೆ ಇಲ್ಲೇ ಇತ್ಯರ್ಥವಾಗಲೆಂದು ಕರೆಸಿದೆ. ಆ ಮಾತು ನಿಮಗೂ ಸಮ್ಮತವೆಂದೇ ನಂಬಿದೇನೆ. ಅವರ ಹುಡುಗಿ ಯನ್ನು ಹಿಂದಕ್ಕೆ ಕಳಿಸಿಬಿಡಿ."

"ಇವರ ಆಪಾದನೆಯಂತೆ ನಾನು ಹುಡುಗಿಯನ್ನು ಹಾರಿಸಿಕೊಂಡು ಬಂದಿಲ್ಲ. ಬಲಾತ್ಕಾರವಾಗಿ ಆಕೆಯನ್ನು ನನ್ನ ಬಳಿ ಇಟ್ಟುಕೊಳ್ಳಬೇಕೆಂಬ ಉದ್ದೇಶವೂ ನನಗಿಲ್ಲ. ಆದರೆ ಈಕೆಯನ್ನು ನಾನು ಪ್ರೀತಿಸುವುದು ನಿಜ. ಎಲ್ಲರ ಒಪ್ಪಿಗೆಯಿಂದಲೇ ವಿವಾಹವಾಗಬೇಕೆಂಬ ಉದ್ದೇಶವಿತ್ತು. ಆದರೆ ಅವರೇ ಒಪ್ಪದೆ, ಮಗಳನ್ನು ಮನೆಯಿಂದ ಹೊರಹಾಕಿದರು ಇದಿಷ್ಟೇ ನಾನು ಹೇಳಬಹುದಾದುದು. ಉಳಿದುದನ್ನು ಆಕೆಯಿಂದಲೇ ತಿಳಿಯಬಹುದು."

ತನ್ನನ್ನು ಪ್ರಶ್ನೆ ಕೇಳುವವರೆಗೂ ಕಾಯದೆ ಪ್ರಭಾವತಿ ತಾನೇ ಹೇಳಿದಳು :

"ಈ ಆಪಾದನೆ ಸುಳ್ಳು. ಇವರು ಹೇಳುತ್ತಿರುವುದು ನಿಜ. ನಾನೇ ಇವರನ್ನು ಒಪ್ಪಿ ಬಂದಿದ್ದೇನೆ. ಈ ಆಪಾದನೆ ಬರೀ ದ್ವೇಷದ ಮಾತು. ಬಲಾತ್ಕಾರಕ್ಕಾಗಲಿ, ಪುಸಲಾವಣೆಗಾಗಲಿ ಸುಮ್ಮನೆ ನಾನು ಬರಲಿಲ್ಲ. ಪ್ರೇಮದಿಂದ ಹಿಂಬಾಲಿಸಿದೆ. ನಮ್ಮಿಬ್ಬರ ಮದುವೆಗೆ ನನ್ನ ತಂದೆ ಒಪ್ಪದೆ, ತಾವಾಗಿಯೇ ಮನೆ ಬಿಟ್ಟು ಹೋಗೆಂದರು. ಅವರೇ ಈಗ ದೂರು ತಂದಿರು ವುದು ಕ್ಷುಲ್ಲಕತನ. ಅವರಿಗೆ ನೆನಪಿಲ್ಲವೆಂದು ಕಾಣುತ್ತದೆ. ನಾನು ಪ್ರಬುದ್ಧ ವಯಸ್ಕಳು. ನನಗೆ ಬೇಕಾದವರನ್ನು ಮದುವೆಯಾಗುವ ಅಧಿಕಾರ ನನಗಿದೆ. ಬಹುಶಃ ಇಂಥ ದೂರು ಕೊಟ್ಟು ನಮಗೆ ಅಪಮಾನ ಮಾಡಿ, ಬೆದರಿಸಬೇಕೆಂಬ ಉದ್ದೇಶ ಅವರಿಗಿರಬಹುದು."

"ಕೋರ್ಟಿನಲ್ಲೂ ನೀವು ಇದೇ ಮಾತು ಹೇಳಲು ಸಿದ್ಧರಿದ್ದೀರಾ?" ಪೋಲೀಸ್ ಇನ್‌ಸ್ಪೆಕ್ಟರು ಕೇಳಿದರು,

"ಖಂಡಿತನಾಗಿಯೂ. ಪೋಲೀಸ್ ಸ್ಟೇಷನ್ನಿಗೆ ನಮ್ಮನ್ನು ಎಳೆಸಿದವ ರಿಗೂ, ನ್ಯಾಯಾಲಯ ಹತ್ತಿಸಬೇಕೆಂಬ ಇಚ್ಛೆ ಇದ್ದರೆ ಹಾಗೂ ಆಗಲಿ."

"ಇವೆಲ್ಲಾ ಹೇಳಿಕೊಟ್ಟ ಮಾತು. ನಂಬಲಾಗದ್ದು. ಮಗಳಾದವಳು

ತಂದೆಯ ವಿರುದ್ಧವಾಗಿ, ಸ್ವಯಂಪ್ರೇರಣೆಯಿಂದ ಎಂದೂ ಹೀಗೆ ಮಾತನಾಡ ಲಾರಳು" ಎಂದರು ರಾಯರು.

"ಇಲ್ಲಿ ನಾನು ಯಾರಿಗೆ ಉತ್ತರ ಕೊಡಬೇಕು, ಹೇಳುತ್ತೀರಾ?"

ಪ್ರಭಾವತಿ ಕತ್ತರಿಸುವ ಧ್ವನಿಯಲ್ಲಿ ಇನ್‌ಸ್ಪೆಕ್ಟರನ್ನು ಕೇಳಿದಳು.

"ದಯವಿಟ್ಟು ನಡುವೆ ಮಾತಾಡಬೇಡಿ" ಎಂದು ರಾಯರಿಗೆ ಹೇಳಿ ಇನ್‌ಸ್ಪೆಕ್ಟರು, "ನಿಮಗೆ ಅಪಮಾನ ಮಾಡಬೇಕೆಂಬ ಇಚ್ಛೆ ಯಾರಿಗೂ ಇಲ್ಲ. ನಿಮ್ಮಂತಹ ತಿಳಿದವರು, ಓದಿದವರು, ಹೀಗೆ ಮಾಡಬಹುದೇ?"

"ಆ ಪ್ರಶ್ನೆ ನನ್ನೊಬ್ಬಳಿಗೇ ಅನ್ವಯಿಸುವುದೇ? ಹೇಗೇ ಇರಲಿ– ಆದರೂ ಹೇಳುತ್ತೇನೆ. ಕಲಿತವಳಾದ್ದರಿಂದ, ತಿಳಿದವಳಾದ್ದರಿಂದಲೇ ಹೀಗೆ ಮಾಡಿದ್ದು. ಕಲಿತವಳು, ತಿಳಿದವಳು ಏನು ಮಾಡಬೇಕು ಹೇಳಬಲ್ಲಿರಾ? ಮನವಿಲ್ಲದವರನ್ನು ಕಟ್ಟಿಕೊಂಡು ಬಾಳಲ್ಲಿ ಬೇಯಬೇಕೇ? ಮನ ಒಪ್ಪಿದವ ನನ್ನು ವಿವಾಹವಾಗಬೇಕೇ? ಇವರೇ – ನನ್ನ ತಂದೆ ಎನ್ನಿಸಿಕೊಂಡವರೇ – ಹೇಳಿದ್ದರು, ಬಲವಂತಕ್ಕೆ, ಒತ್ತಾಯಕ್ಕೆ ತಲೆಬಾಗಬಾರದು ಎಂದು. ನನ್ನ ಶಿಕ್ಷಣವೂ ನನಗೆ ಆತ್ಮಸಾಕ್ಷಿಗೆ ಅನುಸಾರವಾಗಿ ನಡೆಯುವುದೇ ಧರ್ಮ ಎಂದು ಕಲಿಸಿದೆ. ಸ್ತ್ರೀಗೂ ಸ್ವಾತಂತ್ರ್ಯವಿದೆ ಎನ್ನುವುದನ್ನು ನೀವೂ ಒಪ್ಪುವಿರಲ್ಲವೇ? ಹಾಗಿದ್ದರೆ ತನ್ನ ಬಾಳಿನ ಪ್ರಧಾನ ಸಮಸ್ಯೆಯಾದ ಮದುವೆಯ ವಿಷಯದಲ್ಲಿ ಸ್ತ್ರೀಗೆ ಸ್ವಾತಂತ್ರ್ಯವಿಲ್ಲವೇ? ನಾನು ಒಪ್ಪಿದಾಗಲೂ, ಆದಕ್ಕೆ ಇವರ ಒಪ್ಪಿಗೆ ಯನ್ನು ಕೇಳಿದೆ. ಒಪ್ಪುತ್ತಾರೆ ಎಂದು ನಂಬಿದ್ದೆ. ನನ್ನ ನಂಬಿಕೆ ತಪ್ಪಾಯಿತು. ಆತ್ಮಸಾಕ್ಷಿ ತೋರಿದ ದಾರಿ ಹಿಡಿದೆ. ಅದಕ್ಕಿಂತ ಹೆಚ್ಚಾಗಿ ಏನು ಮಾಡ ಬೇಕಾಗಿತ್ತು? ಈ ಬಗ್ಗೆ ನಾನು ಮಾತನಾಡುವಾಗ ನನ್ನ ಧೋರಣೆ ಇವರಿಗೆ ಒಪ್ಪಿತ್ತು. ಆದರೆ ಆ ತತ್ವವನ್ನು ಜೀವನಕ್ಕೆ ಅನ್ವಯಿಸಿದಾಗ ಇವರಿಗೆ ಅದು ಸಹ್ಯವಾಗಲಿಲ್ಲ. ಇದು ಯಾರ ತಪ್ಪು?"

ಉದ್ವಿಗ್ನಳಾಗದೆ, ವಿಕಾರಳಾಗದೆ, ಸಮಧ್ವನಿಯಲ್ಲಿ ಪ್ರಭಾವತಿ ಹೇಳಿ ದಳು – ತನ್ನೆದೆಯಲ್ಲಿ ಕ್ರೋಧ, ಅಪಮಾನದ ಬೇಗೆ ದಹಿಸುತ್ತಿದ್ದರೂ ಅದನ್ನು ತೋರಗೊಡದೆ.

ಅವಳ ಮಾತು ಕೇಳಿ ಇನ್‌ಸ್ಪೆಕ್ಟರ ಮನಸ್ಸಿನಲ್ಲೂ ಹೋರಾಟ ಆರಂಭ ವಾಗಿತ್ತು. ಪ್ರಭಾವತಿಯನ್ನು ದಿಟ್ಟಿಸಿ ನೋಡಿದರು. ಆಗ ಅವರಿಗೆ ಆಕೆ ನಿಂತುಕೊಂಡೇ ಮಾತನಾಡುತ್ತಿದ್ದುದು ಅರಿವಾಯಿತು.

"ಕುಳಿತುಕೊಳ್ಳಿ" ಎಂದರು.

"ಬೇಡ. ಆಪಾದಿತರಂತೆ ಬಂದಿದೇವೆ. ಮೊದಲು ಅದು ನಿರ್ಣಯ ವಾಗಲಿ. ಅಲ್ಲದೆ ನಾವು ನಿಂತಿರುವುದರಿಂದ ಇವರಿಗೂ ಸ್ವಲ್ಪ ಸಮಾಧಾನ ವಾಗಬಹುದು," ಸಂಜೀವರಾಯರ ಕಡೆ ಬೆರಳು ತೋರಿಸಿ ಹೇಳಿದಳು ಪ್ರಭಾವತಿ.

"ಏನು ಸಾರ್? ಇವರು ಹೇಳಿದುದನ್ನು ನೀವೂ ಕೇಳಿದೀರ? ಇದನ್ನು ಇಷ್ಟಕ್ಕೇ ಬಿಡಬೇಕೋ, ಅಥವಾ ಕೇಸ್ ಬುಕ್ ಮಾಡಿಕೊಂಡು ಮುಂದಿನ ಕಾರ್ಯಕ್ರಮ ಜರುಗಿಸಬೇಕೋ ಹೇಳಿ. ಎಷ್ಟಾದರೂ ದೂರು ಕೊಟ್ಟವರು ನೀವು. ಆದರೂ ಈ ಕೇಸು ಕೋರ್ಟಿನಲ್ಲೂ ನಿಲ್ಲುವುದಿಲ್ಲ. ಸುಮ್ಮನೆ ಎಲ್ಲರೂ ಬೀದಿಗೆ ಬಂದಂತಾಗುತ್ತದೆ. ಮುಂದಿನದು ನಿಮ್ಮ ಇಷ್ಟ," ಎಂದರು ಇನ್‌ಸ್ಪೆಕ್ಟರ್.

"ನಾಳೆ ಮುಂದೇನು ಮಾಡಬೇಕೆಂಬುದನ್ನು ತಿಳಿಸುತ್ತೇನೆ," ಎಂದವರೇ ಎಲ್ಲರನ್ನೂ ದುರುದುರು ನೋಡುತ್ತಾ ಹೊರಟುಹೋದರು ಸಂಜೀವರಾಯರು.

ಪ್ರಭಾವತಿಯ ಮಾತು, ರೀತಿಯನ್ನು ಕಂಡು ಅವಳ ಬಗ್ಗೆ ಇನ್‌ಸ್ಪೆಕ್ಟರಿಗೆ ಗೌರವ ಉಂಟಾಗಿತ್ತು.

"ಈಗಲಾದರೂ ಕುಳಿತುಕೊಳ್ಳಬಹುದಲ್ಲ. ನೀವೂ ಕುಳಿತುಕೊಳ್ಳಿ ಮಿಸ್ಟರ್ ಶಾಂತಾರಾಂ." ಎಂದು, ಕಾನ್‌ಸ್ಟೇಬಲನ್ನು ಕಾಫಿ ತರಲು ಕಳಿಸಿದರು.

ತಂದೆ ಹೊರಟುಹೋದ ಮೇಲೆ, ಅದುವರೆಗೂ ಪ್ರಭಾವತಿ ಬಲು ಪ್ರಯಾಸದಿಂದ ತಡೆದುಕೊಂಡಿದ್ದ ದುಃಖ ಒತ್ತರಿಸಿ ಬಂತು. ಕುರ್ಚಿಯ ಮೇಲೆ ಕುಸಿದು, ಮೇಜಿನ ಮೇಲೆ ತೋಳಿನಲ್ಲಿ ಮುಖ ಮುಚ್ಚಿಕೊಂಡಳು. ದುಃಖ ಉಕ್ಕಿ ಉಕ್ಕಿ ಬರುತ್ತಿತ್ತು. ಆ ಸದ್ದನ್ನು ಹೊರಬಿಡದಿರಲು ತುಟಿ ಕಚ್ಚಿದಳು. ತುಟಿಯಿಂದ ರಕ್ತ ಚಿಮ್ಮಿತು. ದುಃಖದ ವೇಗಕ್ಕೆ ಅವಳ ಮೈ ನಡುಗುತ್ತಿತ್ತು. ಅದನ್ನು ಕಂಡು ಇನ್‌ಸ್ಪೆಕ್ಟರು:

"ಸಮಾಧಾನ ಹೇಳಿ. ಅವರ ಭಾವನೆಗಳನ್ನು ನಾನು ಅರ್ಥ ಮಾಡಿ ಕೊಳ್ಳಬಲ್ಲೆ," ಎಂದು ಹೊರಗೆ ಹೋದರು.

ಶಾಂತಾರಾಂ ಅವಳನ್ನು ಮಾತನಾಡಿಸದೆ ಸುಮ್ಮನೆ ಅವಳ ನೆತ್ತಿಯನ್ನು ನೇವರಿಸಿದ. ಒಂದೆರಡು ನಿಮಿಷಗಳಲ್ಲಿ ಪ್ರಭಾವತಿಯ ದುಃಖ ಹತೋಟಿಗೆ ಬಂದಿತು. ಅಳುವನ್ನು ನುಂಗಿ ಹೇಳಿದಳು –

"ಇಷ್ಟು ಅಪಮಾನ ಮಾಡುವಷ್ಟು ದೂರ ಅವರು ಹೋಗುವರೆಂದು ನಾನು ನಂಬಿರಲಿಲ್ಲ."

"ಇದು ಫಸ್ಟ್ ರೌಂಡ್. ಇಲ್ಲಿಗೇ ಮುಗಿಯುತ್ತದೆಯೆಂದು ನಂಬಿದೀಯ ಪ್ರಭಾ? ಕೋರ್ಟಿಗೂ ಅಲೆಸಬಹುದು."

"ಬೇಕಾದ್ದು ಮಾಡಲಿ?"

"ಅಂತೂ ನನ್ನನ್ನು ಕೈ ಹಿಡಿದು, ನಿನ್ನ ಮನೆಯೇ ನಿನಗೆ ವೈರಿಯಾಯಿತು."

"ಮನೆ? ಮತ್ತೆ ಆ ಹೆಸರೆತ್ತಬೇಡ." ಕಠೋರ ಕರ್ಕಶತೆಯಿಂದ ಹೇಳಿದಳು ಪ್ರಭಾವತಿ.

ಆ ವೇಳೆಗೆ ಕಾನ್‌ಸ್ಟೇಬಲ್ ಕಾಫಿ ತಂದಿಟ್ಟ. ಇನ್‌ಸ್ಪೆಕ್ಟರೂ ಒಳಗೆ ಬಂದರು. ಕಾಫಿ ಕುಡಿದ ನಂತರ ಇವರಿಬ್ಬರೂ ಹೊರಡಲು ಸಿದ್ಧರಾದಾಗ ಇನ್‌ಸ್ಪೆಕ್ಟರ್ ಹೇಳಿದರು –

"ಶಾಂತಾರಾಂ, ನೀವು ಅದೃಷ್ಟಶಾಲಿಗಳು. ಈಕೆ ನನ್ನ ಮಗಳಾಗಿದ್ದರೆ ಹೆಮ್ಮೆಪಡುತ್ತಿದ್ದೆ."

"ನಿಮ್ಮ ಔದಾರ್ಯ, ವಿಶ್ವಾಸಕ್ಕೆ ನಾನು ಚಿರಋಣಿ" ಎಂದ ಶಾಂತಾರಾಂ.

"ಜೀವನದಲ್ಲಿ ನೀವು ಬಹಳ ಸಾಹಸದ ಹೆಜ್ಜೆ ಇಟ್ಟಿದೀರ. ನಿಮ್ಮ ಧೈರ್ಯ ಎಂದೂ ಸೋಲದಿರಲಿ," ಎಂದು ಪ್ರಭಾವತಿಗೆ ಹೇಳಿದರು ಇನ್‌ಸ್ಪೆಕ್ಟರ್.

ಇಬ್ಬರೂ ಇನ್‌ಸ್ಪೆಕ್ಟರಿಗೆ ವಂದಿಸಿ, ಸ್ಟೇಷನ್ನಿನಿಂದ ಹೊರಬಂದರು.

ಸ್ಟೇಷನ್ನಿನ ಹೊರಗೆ ಹತ್ತಾರು ಜನ ನಿಂತು, ಇವರು ಹೊರಬರುವುದನ್ನೇ ಕಾಯುತ್ತಿದ್ದರು. ಇವರಿಬ್ಬರನ್ನೂ ನೋಡಿ ಕೆಲವರು ಪಿಸಪಿಸ ಮಾತನಾಡಿಕೊಂಡು, ಕಿಸಕಿಸ ನಕ್ಕರು.

"ಇದು ಪ್ರಪಂಚ"

ಅವರಿಬ್ಬರನ್ನೂ ಬಾಗಿಲ ವರೆಗೆ ಹಿಂಬಾಲಿಸಿ ಬಂದ ಇನ್‌ಸ್ಪೆಕ್ಟರ್ ನಕ್ಕವರನ್ನು ನೋಡಿ ಹೇಳಿ, ಕಾನ್‌ಸ್ಟೇಬಲ್ ಕೈಲಿ ಜಟಕಾ ತರಿಸಿಕೊಟ್ಟರು.

ಇವರಿಬ್ಬರನ್ನೂ ಕೂಡಿಸಿಕೊಂಡು ಮನೆಯತ್ತ ಹೊರಟಿತು ಜಟಕಾ.

ಜನ ಅವರು ಕಣ್ಣು ಮರೆಯಾಗುವವರೆಗೂ ಅವರನ್ನೇ ನೋಡುತ್ತಿತ್ತು. ಆ ಗುಂಪನ್ನು ನೋಡಿ ಹೇಳಿದಳು ಪ್ರಭಾವತಿ –

" ಹೃದಯಹೀನ ಪಶುಮಂದೆ."

" ಇವರೇ ನಮ್ಮ ಭಾಗ್ಯವಿಧಾತರು !" ಎಂದ ಶಾಂತಾರಾಂ ಕಹಿಯಾಗಿ.

" ಇಂಥವರಲ್ಲೂ ಇನ್‌ಸ್ಪೆಕ್ಟರಂಥ ಅಪರೂಪ ಜೀವಿಗಳಿರುತ್ತಾರಲ್ಲಾ, ಅದೇ ಆಶ್ಚರ್ಯ," ಪ್ರಭಾವತಿ ಹೇಳಿದಳು.

" ಒಬ್ಬೊಬ್ಬರಾದರೂ ಅಂಥವರಿಲ್ಲದಿದ್ದರೆ ಈ ಬದುಕು ದುರ್ಭರವಾಗುತ್ತಿತ್ತು." ಎಂದು ಉತ್ತರವಿತ್ತ ಶಾಂತಾರಾಂ.

೬

ಪ್ರತೀಕಾರ ತೃಷೆಯಿಂದ ತಪ್ತರಾದ ಸಂಜೀವರಾಯರು, ತಮ್ಮನ್ನು ಕೋರ್ಟಿನ ಕಟ್ಟೆ ಹತ್ತಿಸಬಹುದೆಂದೇ ನಿರೀಕ್ಷಿಸಿ, ಶಾಂತಾರಾಂ ಆ ಬಗ್ಗೆ ಲಾಯರನ್ನು ಸಲಹೆ ಕೇಳಿದ್ದ. ಆದರೆ ಅವರ ಆಘಾತ ಮತ್ತೊಂದು ಅನಿರೀಕ್ಷಿತ ಕಡೆಯಿಂದ ಬಂದಿತು.

ಸ್ಟೇಷನ್ನಿನ ಪ್ರಕರಣವಾದ ಎರಡು ಮೂರು ದಿನದಲ್ಲೇ ಶಾಂತಾರಾಂ ಬಾಡಿಗೆಯಿದ್ದ ಮನೆಯ ಮಾಲೀಕರು ಬಂದು,

" ರೀ, ಶಾಂತಾರಾಂ. ದಯವಿಟ್ಟು ಇನ್ನೆರಡು ದಿನಗಳಲ್ಲಿ ಮನೆ ಖಾಲಿ ಮಾಡಿಬಿಡಿ," ಎಂದರು.

ಅವರಿಂದ ಆ ಬಗೆಯ ತುರುತು ನೋಟೀಸನ್ನು ಅವನು ನಿರೀಕ್ಷಿಸಿರಲಿಲ್ಲ.

" ನಿಂತ ಕಾಲಿನ ಮೇಲೆ ಮನೆ ಬಿಡಬೇಕು ಎಂದು ಹೇಳಿದರೆ ಹೇಗೆ? ನಾವು ಯಾವ ರೀತಿಯಲ್ಲೂ ನಿಮಗೆ ತೊಂದರೆ ಮಾಡಿಲ್ಲ. ಬಾಡಿಗೆಯನ್ನು ನಾನೆಂದೂ ಬಾಕಿ ನಿಲ್ಲಿಸಿಕೊಂಡಿಲ್ಲ. ಹೀಗಿರುವಾಗ ಇದ್ದಕ್ಕಿದ್ದ ಹಾಗೇ ಮನೆ ಬಿಡಿ ಎಂದರೆ ಹೇಗೆ? ಸಾಕಷ್ಟು ದಿನಗಳ ಅವಕಾಶವಾದರೂ ಕೊಡಿ."

" ಅದೆಲ್ಲಾ ಆಗುವುದಿಲ್ಲ. ನೀವು ಇಂಥವರು ಎಂದು ತಿಳಿದಿದ್ದರೆ, ಈ ಮನೆಯನ್ನು ನಾನು ನಿಮಗೆ ಬಾಡಿಗೆಗೇ ಕೊಡುತ್ತಿರಲಿಲ್ಲ."

" ಎಂಥವನು ಎಂದು ತಿಳಿದಿದ್ದಿರಿ ?"

" ಎಲ್ಲರ ಹಾಗೇ ಮರ್ಯಾದಸ್ಥರು, ಸಂಸಾರವಂದಿಗರ ನೆರೆಹೊರೆಯಲ್ಲಿರಲು ಯೋಗ್ಯರಾದವರು ಎಂದಿದ್ದೆ. ಕಂಡವರ ಮನೆಯ ಹುಡುಗಿಯ

ರನ್ನು ಹಾರಿಸಿಕೊಂಡು ಬರುವ ಗಂಡುಗೋವಿಗಳು ಎಂದು ತಿಳಿದಿದ್ದರೆ, ಖಂಡಿತ ನಿಮ್ಮನ್ನು ಹತ್ತಿರವೇ ಸೇರಿಸುತ್ತಿರಲಿಲ್ಲ."

ಮನೆಯ ಮಾಲಿಕ ಕಣ್ಣು ತಿವಿಯುವಂತೆ ಮಾತನಾಡಿದ. ಆ ಮಾತು ಕೇಳಿ ಶಾಂತಾರಾಮನ ತೋಳ ನರ ಬಿಗಿದವು. ಆದರೂ ಸಿಟ್ಟನ್ನು ನುಂಗಿ ಕೊಳ್ಳುತ್ತಾ ಹೇಳಿದ–

"ತಾವು ಆ ಮಾತನ್ನೆಲ್ಲಾ ಆಡಬಾರದು, ನನಗೂ ನಿಮಗೂ ಇರು ವುದು ಬಾಡಿಗೆಯ ಸಂಬಂಧ ಮಾತ್ರ. ಆ ವಿಚಾರ ಮಾತ್ರ ಮಾತನಾಡಿ. ಈ ಮನೆಗೆ ಬರುವಾಗ ನಾನು ಹೀಗೇ ಇರುತ್ತೇನೆಂದು ಒಳ್ಳೆಯ ನಡತೆಯ ಮುಚ್ಚಳಿಕೆ ಬರೆದುಕೊಟ್ಟು ಬರಲಿಲ್ಲ."

"ಇರಬಹುದು. ಹಾಗೆಂದು ಈ ಮನೆಯನ್ನು ಸೂಳೆಗೇರಿ ಮಾಡಬಹು ದೆಂದು ನಾನೂ ಕರಾರು ಬರೆದುಕೊಟ್ಟಿರಲಿಲ್ಲ."

ಸೂಳೆಗೇರಿ!

ಆ ಮಾತು ಕೇಳಿ ಶಾಂತಾರಾಮನ ಸಹನೆ ಸತ್ತು, ಪ್ರಕ್ಷುಬ್ಧನಾದ. ಕ್ರೋಧದಿಂದ ಬುಸುಗುಟ್ಟುತ್ತಾ ಹೇಳಿದ –

"ಹಲ್ಲು ಹಿಡಿದು ಮಾತನಾಡಿ!"

"ಮನೆ ಬಿಟ್ಟು ಆಚೆ ನಿಂತು ಮಾತನಾಡಿ. ಇಲ್ಲವಾದರೆ ಆಳು ಕರೆದು ಸಾಮಾನು ಹೊರಗೆಳೆಸಬೇಕಾಗುತ್ತದೆ."

ಮನೆಯ ಮಾಲೀಕನೂ ಘರ್ಜಿಸಿದ –

"ಮಹಾ ಮರ್ಯಾದಸ್ಥ, ಹಲ್ಲು ಹಿಡಿದು ಮಾತನಾಡಬೇಕಂತೆ. ನೋಡಿದರೆ ನಾಯಿ ನಡತೆ, ಆಡೋದು ದೊಡ್ಡ ಮಾತು" ಎಂದು ಶಾಂತಾ ರಾಮನ ಕಿವಿಗೆ ಬೀಳುವಂತೆಯೇ ವಟಗುಟ್ಟಿದ.

ಆ ಮಾತಿಗೆ ಶಾಂತಾರಾಮನ ಮುಷ್ಟಿಯೇ ಉತ್ತರ ಕೊಡುತ್ತಿತ್ತೋ ಏನೋ. ಆದರೆ ಬಾಗಿಲ ಮರೆಯಲ್ಲಿ ನಿಂತು ಅವರ ಮಾತನ್ನು ಕೇಳಿದ ಪ್ರಭಾವತಿ, ಅವನನ್ನು ಒಳಗೆ ಎಳೆದುಕೊಂಡಳು.

"ಕೈ ಬಿಡು ಪ್ರಭಾ, ನಾಯಿ ನಡತೆಯಂತೆ. ನಾಯಿ ಯಾರೆಂಬುದನ್ನು ತೋರಿಸುತ್ತೇನೆ."

ಶಾಂತಾರಾಮ ಕೊಸರಿದ.

"ಅಬ್ಬಾ! ಎಷ್ಟು ಸಿಟ್ಟು!"

"ಮತ್ತೆ, ಆಡಬಾರದ ಮಾತಾಡಿದರೆ...."

"ನಾಯಿ ಬೊಗಳದೆ ಕೋಗಿಲೆಯಂತೆ ಹಾಡುವುದು ಸಾಧ್ಯವೇ? ಆ ಮನುಷ್ಯನಿಗೆ ವಿವೇಚನೆ ಇದ್ದಿದ್ದರೆ ಈ ಮಾತಾಡುತ್ತಿರಲಿಲ್ಲ. ವಿವೇಚನೆ ಇಲ್ಲದವನೊಂದಿಗೆ ವ್ಯಾಜ್ಯವಾಡಿ ಫಲವೇನು? ತಾತ್ಸಾರವೊಂದೇ ಅವರಿಗೆ ಪ್ರತ್ಯುತ್ತರ."

"ಆದರೂ ಆ ಮಾತು ಕೇಳಿದಾಗ ಹೊಟ್ಟೆ ಉರಿಯುತ್ತದೆ ಪ್ರಭಾ."

"ನನಗೂ ಆ ವ್ಯಥೆ ಇಲ್ಲವೇ? ನೀವೇ ಹೇಳಿದಿರಿ – ಮುಂದೆ ಕಾದಿರುವುದು ಬೆಂಕಿಯ ಹಾಸಿಗೆ ಎಂದು. ನೆನಪಿಲ್ಲವೇ?" ಬಲವಂತವಾಗಿ ಶಾಂತಾರಾಮನನ್ನು ಕುರ್ಚಿಯ ಮೇಲೆ ಕೂಡಿಸಿ, ಅವನ ಕೂದಲಿನಲ್ಲಿ ಬೆರಳಾಡಿಸುತ್ತಾ ಹೇಳಿದಳು ಪ್ರಭಾವತಿ.

"ಸಹನೆ – ತಾತ್ಸಾರ, ಅವೆರಡೇ ಇಂದು ನಮಗೆ ಬೇಕಾದದ್ದು. ಅನ್ನಲಿ. ಅಂದು ಅವನ ನಾಲಿಗೆಯ ಚಪಲವನ್ನೆಲ್ಲ ತೀರಿಸಿಕೊಳ್ಳಲಿ. ಆ ಮನುಷ್ಯ ನನ್ನನ್ನು ಸೂಳೆಯೆಂದ, ಅಲ್ಲವೇ? ಅನ್ನಲಿ ಬಿಡಿ. ನಿಮ್ಮ ಸೂಳೆ ಎಂದನಲ್ಲ, ಅಷ್ಟೇ ಸಂತೋಷ."

"ನಿನ್ನನ್ನು ಆ ಮಾತಿನಿಂದ ಕರೆದವರನ್ನು ಸೀಳಿಬಿಡುತ್ತೇನೆ, ಪ್ರಭಾ!"

"ಸತ್ಯ ಹೇಳಿದರೂ ಸಿಟ್ಟಾಗಬೇಕೇ?

"ಏನು ನೀನಾಡುವ ಮಾತು ಪ್ರಭಾ! ಅಥವಾ ನೀನೂ ನನ್ನ ಹೊಟ್ಟೆ ಉರಿಸಬೇಕೆಂದೇ ಹೇಳುತ್ತೀಯೋ?" ಆಶ್ಚರ್ಯಚಕಿತನಾಗಿ ಕೇಳಿದ ಶಾಂತಾರಾಂ.

"ಸತ್ಯವಲ್ಲವೇ. ಹಗಲು ಹೆಂಡತಿಯಾದರೂ, ರಾತ್ರಿ ನಾ ನಿಮ್ಮ ವೇಶ್ಯೆಯಲ್ಲವೇ? ಯಾವ ಹೆಣ್ಣು ತಾನೇ ಅಲ್ಲ."

ನಗು ನಗುತ್ತಾ ಹೇಳಿದಳು ಪ್ರಭಾವತಿ. ಆದರೆ ಆ ನಗುವಿನ ಹಿನ್ನೆಲೆಯಲ್ಲಿ ಅನಂತ ಯಾತನೆಯ ನೀರವ ರೋದನ ಧ್ವನಿ ಎಳೆಯಾಡುತ್ತಿತ್ತು. ಶಾಂತಾರಾಮನ ಹೊಟ್ಟೆಯನ್ನು ಬೆಂಕಿಯ ಕೋಲಿನಿಂದ ಕಲಕಿದಂತಾಯಿತು ಆ ನಗುವನ್ನು ಕೇಳಿ. ಬೆನ್ನ ಹಿಂದೆ ನಿಂತ ಅವಳ ತಲೆಯನ್ನು ತನ್ನೆಡೆಗೆ ಎಳೆದುಕೊಂಡು ತಬ್ಬಿಕೊಂಡ. ಹತ್ತು ನಿಮಿಷ ಇಬ್ಬರೂ ಹಾಗೇ ಇದ್ದರು. ಬಳಿಕ ಪ್ರಭಾವತಿಯೇ ಹೇಳಿದಳು –

" ಇದೆಲ್ಲವೂ ಆಯಿತಲ್ಲ, ಈಗೇನು ಮಾಡುವುದು ? ಈ ಮನೆಯಲ್ಲೇ ಇರುವುದೇ, ಬಿಡುವುದೇ ?"

" ಇರುವುದಂತೂ ಸಾಧ್ಯವಿಲ್ಲ. ನಿಂತ ಕಾಲ ಮೇಲೇ ಬಿಡುವುದೂ ಸಾಧ್ಯವಿಲ್ಲ."

" ಏಕಾಗುವುದಿಲ್ಲ ?"

" ಹೇಗೆ ಹೋಗುವುದು ಪ್ರಭಾ ? ಎಲ್ಲಿಗೆ ಹೋಗುವುದು ?"

" ಎಲ್ಲಿಗೇನು ? ಬೇರೆ ಮನೆ ಸಿಗುವವರೆಗೂ ನಾಲ್ಕು ದಿನ ಹೋಟಲಿನಲ್ಲಿರುವುದು."

" ಅದು ಅಷ್ಟು ಸುಲಭಸಾಧ್ಯವಾದ ಮಾತಲ್ಲ ಪ್ರಭಾ."

" ಹಣದ ತೊಂದರೆಯಾಗುತ್ತದೆಂದೇ ?"

" ಹಣದ್ದೊಂದೇ ಅಲ್ಲ, ನಾಲ್ಕು ದಿನ ಹೋಟಲಿನಲ್ಲಿರುವುದಾದರೆ ಅಷ್ಟಕ್ಕೆ ಹಣ ನನ್ನ ಬಳಿ ಇದೆ. ಅಲ್ಲದೆ ನಾಲ್ಕಾರು ಮನೆಗಳ ಪಾಠದ ದುಡ್ಡೂ ಬರಬೇಕಾದದ್ದಿದೆ. ಆದರೆ ಅದಕ್ಕಿಂತ ದೊಡ್ಡ ಯೋಚನೆ ಅಮ್ಮನದು. ಆಕೆ ಹೋಟಲಿನಲ್ಲಿರಲು ಖಂಡಿತ ಒಪ್ಪುವುದಿಲ್ಲ. ಆಕೆಗೇನು ಮಾಡುವುದು ?"

ಆ ಸಮಸ್ಯೆ ಪ್ರಭಾವತಿಗೂ ಅನಿವಾರ್ಯವಾಗಿ ತೋರಿತು. ಸ್ವಲ್ಪ ಹೊತ್ತು ಆಲೋಚಿಸಿ ಹೇಳಿದಳು.

" ನಾವು ಬೇರೆ ಮನೆ ಮಾಡುವವರೆಗೂ ಅವರು ಇರಬಹುದಾದಂಥ ನೆಂಟರ ಮನೆ ಯಾವುದೂ ಇಲ್ಲವೇ ?"

" ಇದೆ. ಬೇರೆಯವರೇನು, ಅಣ್ಣನ ಮನೆಯೇ ಇದೆ. ಆದರೆ ಅತ್ತಿಗೆಗೂ ಈಕೆಗೂ ಆಗುವುದಿಲ್ಲನೆಂದೇ ಇಲ್ಲಿದ್ದಾಳೆ."

" ನಾಲ್ಕು ದಿನವೂ ಇರಲಾಗದಷ್ಟು ದ್ವೇಷವೇ ?"

" ಅಂಥ ದ್ವೇಷವೇನೂ ಇಲ್ಲ."

" ಹಾಗಾದರೆ ಒಂದು ಕೆಲಸ ಮಾಡಿ. ಮನೆಯವನನ್ನು ಮನೆ ಖಾಲಿ ಮಾಡಲು ನಾಲ್ಕು ದಿನ ಅವಕಾಶ ಕೇಳಿ. ಕೊಟ್ಟರೆ ಅಷ್ಟರಲ್ಲಿ ಬೇರೆ ಮನೆ ಹುಡುಕಿ ಹೋಗುವುದು. ಇಲ್ಲವಾದರೆ ನಿಮ್ಮ ತಾಯನ್ನು ನಿಮ್ಮ ಅಣ್ಣನ ಮನೆಗೆ ಕಳುಹಿ ನಾಲ್ಕು ದಿನ ಹೋಟಲಿನಲ್ಲಿದ್ದು ಬೇರೆ ಮನೆ ಹುಡುಕುವುದು."

ಶಾಂತಾರಾಮನಿಗೂ ಪ್ರಭಾವತಿಯ ಸಲಹೆ ಸೂಕ್ತವೆಂದು ತೋರಿತು. ಹಾಗೇ ಮಾಡುವುದಾಗಿ ಹೇಳಿದ.

ಗತ್ಯಂತರವಿಲ್ಲದೆ ಶಾಂತಾರಾಂ ಮನೆಯಾತನನ್ನು ನಾಲ್ಕು ದಿನದ ಅವಧಿ ಕೇಳಿದ. ಮನೆಯಾತ ಖಡಾಖಂಡಿತವಾಗಿ ಹೇಳಿದ –

"ಇಪ್ಪತ್ತುನಾಲ್ಕು ಗಂಟೆಗಳ ಅವಕಾಶ ಕೊಟ್ಟಿದೇನೆ. ಅಷ್ಟರೊಳಗೆ ಮನೆ ಖಾಲಿಮಾಡಿದರೆ ಸರಿ. ಇಲ್ಲವಾದರೆ ಆಳು ಬಿಟ್ಟು ಸಾಮಾನು ಹೊರಗೆಳಸುವುದು ಖಂಡಿತ."

ಅವನು ಆ ಮಾತಾಡಿದ ಮೇಲೆ ಮತ್ತೆ ಅವನನ್ನು ಕೇಳಿಯೂ ಪ್ರಯೋಜನವಿಲ್ಲವೆಂದು ತೋರಿತು ಶಾಂತಾರಾಮನಿಗೆ. ಆದದ್ದಾಗಲಿ ಖಾಲಿ ಮಾಡೇ ಬಿಡೋಣ ಎಂದಳು ಪ್ರಭಾವತಿ.

ಮನೆಯಲ್ಲಿ ಇದ್ದದ್ದೇ ನಾಲ್ಕು ಸಾಮಾನು. ಅವನ್ನು ಕಟ್ಟುವುದು ಕಷ್ಟವಾಗಿರಲಿಲ್ಲ. ಎಲ್ಲಕ್ಕಿಂತ ಕಷ್ಟವಾದುದು ತಾಯನ್ನು ಅಣ್ಣನ ಮನೆಗೆ ಹೋಗಲು ಒಪ್ಪಿಸಿದ್ದು. ಆಕೆಯಂತು ರಂಭಾಟ ಮಾಡಿದಳು. ಮಗನ ಮೇಲೆ ರೇಗಿದಳು, ಬೈದಳು, ಅತ್ತಳು. ಕಡೆಗೆ ಪ್ರಭಾವತಿಯನ್ನು ಶಪಿಸಿ ಲಟಿಕೆ ಮುರಿದು –

"ಯಾವ ಗಳಿಗೆಯಲ್ಲಿ ಮನೆ ಹೊಕ್ಕೆಯೋ ಮಾಯಕಾತಿ. ಕಾಲಿಟ್ಟ ಹಾಗೇ ತಾಯಿ ಮಕ್ಕಳನ್ನು ಅಗಲಿಸಿದೆ. ನಿನ್ನ ವಂಶ ನಿರ್ವಂಶವಾಗಲಿ" ಎಂದು ಹೇಳಿದಳು.

"ಈ ಬಿನ್ನಾಣಗಿತ್ತೀನ ಕಟ್ಟಿಕೊಂಡು ಮೆರೆಯೋಕೋಸ್ಕರ ನನ್ನ ಮನೆ ಬಿಡಿಸಿ ಆ ಸುಡುಗಾಡಿಗೆ ಕಳಿಸ್ತೀಯಾ? ಏಳೇಳು ಜನ್ಮಕ್ಕೂ ನರಕ ಅನುಭವಿಸುತ್ತಿ." ಎಂದು ಮಗನನ್ನು ಶಪಿಸಿದಳು.

ಪರಿಸ್ಥಿತಿಯನ್ನು ಎಷ್ಟು ವಿವರಿಸಿದರೂ ಆಕೆಗೆ ಸಮಾಧಾನವಾಗಲಿಲ್ಲ. ಅವನ ಮಾತಿನಲ್ಲಿ ನಂಬಿಕೆಯೂ ಹುಟ್ಟಲಿಲ್ಲ. ಬೈಯುವುದನ್ನೂ ನಿಲ್ಲಿಸಲಿಲ್ಲ.

ಆ ದಿನ ಮಧ್ಯಾಹ್ನವೇ ಶಾಂತಾರಾಂ ಮೈಸೂರಿನಲ್ಲಿದ್ದ ಅಣ್ಣನಿಗೆ, ತಾಯಿಯನ್ನು ಸಂಜೆಯ ರೈಲಿಗೆ ಕಳಿಸುತ್ತಿರುವುದಾಗಿ ಟೆಲಿಗ್ರಾಂ ಕಳಿಸಿ, ಸಂಜೆ ನಾಲ್ಕರ ರೈಲಿಗೆ ಆಕೆಯನ್ನು ಹೊರಡಿಸುವ ಸಿದ್ಧತೆ ಮಾಡಿದ. ಹೋಗುವಾಗಲೂ ಆಕೆ, ಪ್ರಭಾವತಿಗೆ –

"ತಾಯಿ ಮಕ್ಕಳನ್ನ ಅಗಲಿಸಿ ಅದೇನು ಸುಖ ಸುರುಕೋತಿಯೋ ಸುರುಕೋ ಬಿನ್ನಾಣಗಿತ್ತಿ, ಅಪ್ಪನ ಮನೆಗೆ ಮಸಿ ಹಚ್ಚಿ ಬಂದೆ. ಈಗ ಈ

ಮತಿಗೇಡಿಗೆ ಗಂಟು ಬಿದ್ದೆ. ಇವನಿಗೂ ಏಳೇಳು ಕೆರೆಯ ನೀರು ಕುಡಿಸಿ ಕಳಿಸು" ಎಂದು ಹಂಗಿಸಿದಳು.

ಪ್ರಭಾವತಿ ಬಾಗಿಸಿದ ತಲೆ ಮೇಲೆತ್ತಲಿಲ್ಲ. ಹೊಳೆಯ ವೇಗಕ್ಕೆ ಬಾಗಿದ ಹುಲ್ಲಿನಂತೆ ಅವಳ ತಲೆ ಬಾಗಿತ್ತು. ಅವಳ ತಲೆ ಬಾಗಿದತ್ತ ಕಣ್ಣಿನಿಂದ ಉದುರಿದ ಹನಿ ನೀರು ನೆಲವನ್ನು ತೋಯಿಸಿತು.

ಎಷ್ಟು ಬೈದರೂ ತಣಿಯದ ತಾಯಿಯನ್ನು ಬಲವಂತವಾಗಿ ಜಟಕಾದಲ್ಲಿ ಕೂಡಿಸಿಕೊಂಡು ಹೋಗಿ, ರೈಲಿನಲ್ಲಿ ಕೂಡಿಸಿ ಬಂದ ಶಾಂತಾರಾಂ.

ಅವನು ಮನೆಗೆ ಹಿಂದಿರುಗಿದಾಗ. ಪ್ರಭಾವತಿ ಏನೂ ಶಕ್ತಿ ಇಲ್ಲದವಳಂತೆ ಗೋಡೆಗೊರಗಿ ಕುಳಿತಿದ್ದಳು. ಅವಳ ಕಣ್ಣಿನಿಂದ ನೀರು ಧಾರೆಯಾಗಿ ಹರಿದು, ದುಃಖಭಾರಕ್ಕೆ ಏರಿಳಿವ ವಕ್ಷಸ್ಥಲವನ್ನೂ ತೋಯಿಸುತ್ತಿತ್ತು. ಅವಳ ಮುಖದಂತೆಯೇ ಮನೆಯನ್ನೆಲ್ಲಾ ಯಾವುದೋ ಶೋಕ ಕವಿದಿತ್ತು.

ಬಾಗಿಲಲ್ಲೇ ಒಂದು ಗಳಿಗೆ ನಿಂತು ಅವಳನ್ನು ನೋಡಿದ ಶಾಂತಾರಾಂ. ಅವನ ಎದೆಯಲ್ಲೂ ಬಿರುಗಾಳಿ ಕಟ್ಟದ ಕಾಳಿಂಗನಂತೆ ಮೊರೆಯುತ್ತಿತ್ತು. ಗೋಡೆಗೆ ಒರಗಿ ಕುಳಿತ ಹೆಣ್ಣಿನ ಚಿತ್ರ ಅವನ ಮಿದುಳಲ್ಲಿ ದಾವಾಗ್ನಿಯಂತೆ ಪ್ರಜ್ವಲಿಸಿತು. ಅವನ ಮೈಯ ನರ ನರವನ್ನು ಹಿಡಿದು ಅಲ್ಲಾಡಿಸಿ, ತೂರಾಡಿದಂತಾಯಿತು. ಆ ಮೂಕಶೋಕದ ಜೀವಂತ ಚಿತ್ರ. ನಿಂತು ನೋಡಲಾರದೆ ಹೋಗಿ, ಅವಳನ್ನು ತನ್ನ ಮೈಯಲ್ಲಿ ಕರಗಿಸುವನಂತೆ ತಬ್ಬಿ, ಹಲ್ಲು ಕಚ್ಚಿ ಹೇಳಿದ –

" ಪ್ರಭಾ, ಕಂಬನಿಗರೆಯಬೇಡ."

ಅಷ್ಟು ಹೊತ್ತು ಮೌನವಾಗಿದ್ದು ಬಳಿಕ ಹೇಳಿದಳು ಪ್ರಭಾವತಿ –

" ಇನ್ನು ಈ ಮನೆ ಬಿಡುವ ಆಲೋಚನೆ ಮಾಡೋಣ."

ಅಗತ್ಯವಿದ್ದ ಸಾಮಾನು ಹಾಸಿಗೆ ಹತ್ತಿರವಿಟ್ಟುಕೊಂಡು, ಹೆಚ್ಚಿನ ಸಾಮಾನೆಲ್ಲವನ್ನೂ ತನ್ನ ಮಿತ್ರನೊಬ್ಬನ ಮನೆಯಲ್ಲಿಟ್ಟು, ಬಾಡಿಗೆ ಇತ್ಯರ್ಥ ಮಾಡಿ, ಸಂಜೆಯೇ ಮನೆ ಬಿಟ್ಟು ಹೋಟೆಲೊಂದರಲ್ಲಿ ಬಿಡಾರ ಹೂಡಿದರು. ಹತ್ತು ಹನ್ನೆರಡು ದಿನಗಳಿಗೆ ಹೋಟಲಿಗೆ ಕೊಡುವಷ್ಟು ಹಣ ಶಾಂತಾರಾಮನ ಬಳಿ ಇತ್ತು. ಹೋಟಲಿನಲ್ಲಿ ನಿಂತು ಶಾಂತಾರಾಂ ಮನೆಯ ಬೇಟೆಗಾರಂಭಿಸಿದ.

ಶಾಂತಾರಾಂ ಮಂಗಳೂರಿಂದ ಬೆಂಗಳೂರಿಗೆ ನೌಕರಿ ಹುಡುಕಿಕೊಂಡು ಬಂದವನು. ಆದರೆ ನೌಕರಿ ಸಿಗದಿದ್ದುದರಿಂದ ಹತ್ತಾರು ಮನೆಗಳಲ್ಲಿ ಹುಡುಗರಿಗೆ ಪಾಠ ಹೇಳುತ್ತಾ, ಅದರಿಂದ ಬಂದ ಆದಾಯದಲ್ಲೇ ಜೀವನ ನಡೆಸುತ್ತಿದ್ದ. ಹಿಂದಿಯಲ್ಲೂ ರಾಷ್ಟ್ರವಿಶಾರದ ಪಾಸಾಗಿದ್ದರಿಂದ, ಹಿಂದಿ ಕಲಿಯುವ ವಿದ್ಯಾರ್ಥಿಗಳೂ ಅಷ್ಟು ಜನ ಇದ್ದರು. ಒಂದೆರಡು ವರ್ಷಗಳಲ್ಲಿ ಅವನಿಗೆ ಬೇರಾವ ನೌಕರಿಯನ್ನೂ ಹುಡುಕದೆ, ಇದರಿಂದಲೇ ತನ್ನ ಜೀವನ ನಡೆಸಬಹುದು ಎಂಬ ನಂಬಿಕೆ ಬಂದಿತ್ತು.

ಆದರೆ ಈಗ –

ನಿಂತ ನೆಲವೇ ಅವನ ಕಾಲ ಕೆಳಗೆ ಕುಸಿಯುತ್ತಿತ್ತು.

ಮನೆಯ ಬೇಟೆಯಲ್ಲಿ ಅವನು ತೊಡಗಿದಾಗಲೇ, ತನ್ನ ಪಾಠದ ಮನೆಗಳ ಬಾಗಿಲೂ ಮುಚ್ಚುತ್ತಿರುವುದು ಅರಿವಾಯಿತು. ಕೆಲವರು ಏನೇನೋ ನೆಪ ಹೇಳಿ ಮುಂದಿನ ತಿಂಗಳಿಂದ ಪಾಠಕ್ಕೆ ಬರುವುದು ಬೇಡ ಎಂದು ನಯವಾಗಿ ಹೇಳಿದರು. ಅವನಿಂದ ಹಿಂದಿ ಕಲಿಯುವ ವಿದ್ಯಾರ್ಥಿಗಳಲ್ಲಿ ಕೆಲವರು ಹುಡುಗಿಯರೂ ಇದ್ದರು. ಅಂಥ ಒಂದು ಮನೆಯವರು –

"ನಿಮ್ಮಂಥ ನೀತಿಹೀನರ ಬಳಿ ನಂಬಿ ಹುಡುಗಿಯರನ್ನು ಬಿಡುವುದು, ಕುರಿ ಕಾಯಲು ತೋಳನಿಗೆ ಹೇಳಿದಂತೆ. ದಯವಿಟ್ಟು ಇನ್ನು ಮುಂದೆ ನಮ್ಮ ಮನೆಯ ಕಡೆ ಬರುವ ಶ್ರಮ ತೆಗೆದುಕೊಳ್ಳಬೇಡಿ" ಎಂದು ಹೇಳಿದರು. ಕಟ್ಟಿದ ಗೋಪುರ ನೆತ್ತಿಯ ಮೇಲೇ ಕುಸಿದಂತಾಯಿತು ಶಾಂತಾರಾಮನಿಗೆ. ಮನೆಯ ಬೇಟೆಯೊಂದಿಗೆ ಕೆಲಸದ ಬೇಟೆಯೂ ಸೇರಿತು. ಇದನ್ನು ಕೇಳಿ ಪ್ರಭಾವತಿ ಪಾತಾಳಕ್ಕಿಳಿದುಹೋದಳು.

ಒಂದು ದಿನ ಮಧ್ಯಾಹ್ನ ಶಾಂತಾರಾಂ ಕೆಲಸ–ಮನೆಗಳನ್ನು ಹುಡುಕಿಕೊಂಡು ಹೋದಾಗ ಪ್ರಭಾವತಿ, ಮಾಡಲೇನೂ ಕೆಲಸವಿಲ್ಲದೆ, ಬೇಸರಾಗಿ, ಮಿದುಳನ್ನು ಬೇಯಿಸುವ ಚಿಂತೆಯ ಕಾವಿನಿಂದ ತಪ್ಪಿಸಿಕೊಳ್ಳಲು ತನ್ನ ಗೆಳತಿ ಮೀರಾಳ ಮನೆಗೆ ಹೋದಳು. ಅವಳು ಬಾಗಿಲ ಬಳಿ ಹೋದಾಗಲೇ ಒಳಗೆ ಮೀರಾ ಯಾರೊಂದಿಗೋ ಮಾತನಾಡುತ್ತಿರುವ ಧ್ವನಿ ಕೇಳಿಸಿತು. ಆದರೆ ಬಾಗಿಲು ಹಾಕಿದ್ದುದರಿಂದ ನೇರವಾಗಿ ಒಳಗೆ ಹೋಗಲಾಗಲಿಲ್ಲ. ಬಾಗಿಲ ಬಳಿಯೇ ನಿಂತು, 'ಮೀರಾ, ಮೀರಾ' ಎಂದು ಕೂಗಿದಳು.

"ಯಾರು?" ಒಳಗಿನಿಂದ ಮೀರಾ ಕೇಳಿದಳು.

"ನಾನು ಪ್ರಭಾವತಿ." ಎಂದು ಹೇಳಿ ಬಾಗಿಲು ತೆರೆವುದನ್ನು ಕಾದಳು. ಎರಡು ನಿಮಿಷವಾದ ಮೇಲೆ ಬಾಗಿಲು ತೆರೆಯಿತು. ಬಾಗಿಲು ತೆರೆದವಳು ಮೀರಾ ಅಲ್ಲ, ಮೀರಾ ತಾಯಿ.

"ಮೀರಾ ಮನೆಯಲ್ಲಿಲ್ಲ." ಎಂದು ಹೇಳಿದವಳೇ ಆಕೆ, ತಟಾರನೆ ಅವಳ ಮುಖವನ್ನೇ ರಾಚಿದಂತೆ ಬಾಗಿಲು ಮುಚ್ಚಿ ಹೊರಟುಹೊಳು. ಆ ಏಟಗೆ ಪ್ರಭಾವತಿ ತತ್ತರಿಸಿ ಹೋದಳು.

ಮುಚ್ಚಿದ ಬಾಗಿಲನ್ನು ದಿಟ್ಟಿಸಿ ನೋಡಿದಳು.

ಒಳಗಿನಿಂದ ಮುಸಿ ಮುಸಿ ನಗುವ ಸದ್ದು ಕೇಳಿಸಿತು. ಯಾರೋ ಹೇಳುತ್ತಿದ್ದರು –

"ಏನು ಮುಖ ಇಟ್ಟುಕೊಂಡು ಬಂದಳೋ! ಫೇಮ್‌ಲೆಸ್ ಬೆಗ್ಗರ್"

ಫೇಮ್‌ಲೆಸ್ ಬೆಗ್ಗರ್ – ಈ ಸಮಾಜದ ದೃಷ್ಟಿಯಲ್ಲಿ ತಾನಿಷ್ಟೇ.

ಕ್ರೋಧದಿಂದ ಅವಳ ಕಣ್ಣು ಉರಿದು, ಕಂಬನಿ ತುಂಬಿತು.

ಮುಚ್ಚಿದ ಬಾಗಿಲು ಹೇಳಿತು –

"ಇನ್ನು ನಿನಗಾವ ಮನೆಯ ಬಾಗಿಲೂ ತೆರೆದಿಲ್ಲ."

ಬಿರುಗಾಳಿ ಬೆನ್ನಟ್ಟಿದವಳಂತೆ ಹಿಂದಿರುಗಿದಳು ಪ್ರಭಾವತಿ. ಹೋಟಲಿಗೆ ಹೇಗೆ ಬಂದು ಸೇರಿದೆನೆಂಬುದೂ ಅವಳಿಗೆ ತಿಳಿಯಲಿಲ್ಲ.

## ೧೧

ಮನೆ, ಮನಗಳಷ್ಟೇ ಅಲ್ಲ, ಇದ್ದಕ್ಕಿದ್ದ ಹಾಗೇ ಒಂದು ದಿನ ಹೋಟಲೂ ಅವರನ್ನು ಹೊರದೂಡಿತು –

ಆ ದಿನ ಮಧ್ಯಾಹ್ನ ತಮ್ಮ ಕೋಣೆಯಲ್ಲಿ ಶಾಂತಾರಾಂ – ಪ್ರಭಾವತಿ ಇಬ್ಬರೂ ಮಾತನಾಡುತ್ತಾ ಕುಳಿತಿದ್ದಾಗ, ಹೋಟಲು ಮಾಣಿ ಬಂದು ಶಾಂತಾರಾಂಗೆ "ಯಜಮಾನರು ನಿಮ್ಮನ್ನು ಕರೆಯುತ್ತಾರೆ." ಎಂದ.

ಹೋಟಲು ಯಜಮಾನ ತನ್ನನ್ನು ಕರೆಯುವುದಕ್ಕೆ ಶಾಂತಾರಾಮನಿಗೆ ಯಾವ ಕಾರಣವೂ ತೋಚಲಿಲ್ಲ.

"ಏಕಂತೆ?" ಎಂದು ಕೇಳಿದ.

"ಈ ದಿನವೇ ಈ ರೂಂ ಖಾಲಿ ಮಾಡಬೇಕಂತೆ. ಅದಕ್ಕೇ ಇರಬೇಕು" ಎಂದು ಮಾಣಿ, ಪ್ರಭಾವತಿಯನ್ನು ವಿಚಿತ್ರ ದೃಷ್ಟಿಯಿಂದ ನೋಡಿದ.

" ಈಗ ಬಂದೆ."

ಎಂದು ಹೇಳಿ ಮಾಣಿಯನ್ನು ಕಳುಹಿಸಿ, " ಏನು ಸಮಾಚಾರವೋ ವಿಚಾರಿಸಿಕೊಂಡು ಬರುತ್ತೇನೆ " ಎಂದು ಪ್ರಭಾವತಿಗೆ ಹೇಳಿ ಹೊರಟ. ಇದಕ್ಕಿದ್ದ ಹಾಗೇ ಬಂದ ಈ ವಾರ್ತೆಯನ್ನು ಕೇಳಿ, ಆಶ್ಚರ್ಯದಿಂದ, ವಿಷಯ ತಿಳಿದು ಕೊಳ್ಳುವ ಕುತೂಹಲದಿಂದ ಪ್ರಭಾವತಿಯೂ ಅವನನ್ನು ಹಿಂಬಾಲಿಸಿದಳು.

" ರೀ, ಶಾಂತಾರಾಂ, ಇಲ್ಲಿ ಬನ್ನಿ "

ಎಂದು ಡೊಳ್ಳು ಹೊಟ್ಟೆಯ ಹೋಟಲು ಮಾಲಕ ಒರಟಾಗಿಯೇ ಶಾಂತಾರಾಮನನ್ನು ಕರೆದ. ಅವನು ಮಾತಾಡಿಸಿದ ರೀತಿಗೇ ಶಾಂತಾರಾಮನ ಮೈ ಬೆಚ್ಚಗಾಯಿತು. ಆದರೂ ಶಾಂತವಾಗಿ –

" ಏನು ?" ಎಂದು ಕೇಳಿದ.

" ಈ ಕಸಬು ಎಷ್ಟು ದಿನದಿಂದ ಮಾಡುತ್ತಿದೀರಿ ?" ದಬಾವಣೆಯ ಧ್ವನಿಯಲ್ಲಿ ಕೇಳಿದ ಮಾಲಕ.

" ಏನು ಕಸಬು ?"

" ಅಲ್ರೀ, ರಿಜಿಸ್ಟರಿನಲ್ಲಿ, ನಿಮ್ಮ ಜೊತೆಯಲ್ಲಿದ್ದಾಕೆ ಹೆಂಡತಿ ಎಂತ ಬರೆದಿದ್ದೀರಲ್ಲ...."

" ಹೌದು."

" ಎಷ್ಟು ದಿನದ ಹೆಂಡತಿ ? ಹೀಗೇ ಇನ್ನೂ ಎಷ್ಟು ಜನ ಹೆಂಡರಿದ್ದಾರೆ ನಿಮಗೆ ?"

" ಅದೆಲ್ಲಾ ಅಧಿಕಪ್ರಸಂಗತನದ ಮಾತು." ಶಾಂತಾರಾಂ ಬಿಸಿಯಾಗಿ ಉತ್ತರ ಕೊಟ್ಟ.

" ಆ ಬೋರ್ಡು ನೋಡಿದೀರೋ ?"

ಮಾಲಕ 'ರೈಟ್ ಆಫ್ ಅಡ್ಮಿಷನ್ ರಿಸರ್ವ್‌ಡ್' 'ನಾಯಿಗಳಿಗೆ ಪ್ರವೇಶವಿಲ್ಲ' ಎಂದು ಬರೆದಿದ್ದ ಬೋರ್ಡುಗಳತ್ತ ಕೈ ತೋರಿ, ವ್ಯಂಗ್ಯವಾಗಿ ಹೇಳಿದ –

" ನೀವು ಮಾಡೋ ಚಂಡಾಲತನಕ್ಕೆ ನಾವು ಮಾತಾಡೋದು ಅಧಿಕ ಪ್ರಸಂಗವಂತೆ. ಪೋಲೀಸರಿಗೆ ಹೇಳಿಕಳಿಸಿ ಸರಿಯಾದ ಮರ್ಯಾದೆ ಮಾಡಿಯೇ ಕಳಿಸೋಣವೆಂದಿದ್ದೆ. ಆದರೆ ಆ ಹುಡುಗಿ ಕಂಟ್ರಾಕ್ಟರು ಸಂಜೀವರಾಯರ

ಮಗಳಂತೆ. ಆದ್ದರಿಂದ ನಾನೇ ಹೇಳುತ್ತಿದ್ದೇನೆ – ಇನ್ನರ್ಧ ಗಂಟೆಯೊಳಗೆ ರೂಂ ಖಾಲಿ ಮಾಡಿಬಿಡಿ."

ಆ ಮಾತು ಕೇಳಿ ಪ್ರಭಾವತಿಯ ಮೈ ಉರಿನಾಲಿಗೆಯಾಯಿತು. ಸಿಟ್ಟಿನಲ್ಲೇ ರೂಂಗೆ ಹೋಗಿ, ಬಿರುಗಾಳಿಯ ವೇಗದಿಂದ ಟ್ರಂಕು, ಹಾಸಿಗೆಗಳನ್ನು ಕಟ್ಟಿ, ಹೊರಲಾಗದಷ್ಟು ಭಾರವಾಗಿದ್ದವನ್ನು ತಾನೇ ಹೊತ್ತು ತಂದು, ಏದುತ್ತಲೇ ಪರ್ಸನ್ನು ಶಾಂತಾರಾಮನ ಕೈಗೆ ಕೊಟ್ಟು –

"ಇವರ ಲೆಕ್ಕಾಚಾರ ಮುಗಿಸಿಬಿಡಿ" ಎಂದಳು.

ಹೋಟೆಲ್ ಮಾಲಕ ಅವರ ಲೆಕ್ಕದ ಪಾನನ್ನು ನೋಡುತ್ತಾ, ಹತ್ತಿರದಲ್ಲಿದ್ದ ಗಿರಾಕಿಗಳಿಗೆ –

"ನೋಡಿ ಸಾರ್. ದೊಡ್ಡಮನುಷ್ಯರ ಹಾಗೆ ಬರ್ತಾರೆ. ನಾವೂ ನಿಜ ಅಂತ ರೂಂ ಕೊಟ್ಟರೆ ಆಯಿತಲ್ಲ ನಮ್ಮ ಗತಿ. ಇಂಥ ಹತ್ತು ಗಿರಾಕಿಗಳು ಬಂದರೆ, ನಾವು ಹೋಟಲು ಬಾಗಿಲು ಹಾಕಬೇಕಾದ್ದೆ." ಎಂದ.

ಅವನ ಮಾತು ಕೇಳಿ ಗಿರಾಕಿಗಳೇ ಅಲ್ಲ, ಅಲ್ಲಿದ್ದ ಮಾಣಿಗಳೂ ಕಿಸಿಕಿಸಿ ನಕ್ಕರು. ಎಲ್ಲರೂ ಕಣ್ಣು ಕೆಕ್ಕರಿಸಿ, ಪ್ರಭಾವತಿಯನ್ನೇ ನೋಡುತ್ತಿದ್ದರು. ಯಾರೋ ಒಬ್ಬ ಮತ್ತೊಬ್ಬನಿಗೆ ಪಿಸುಗುಟ್ಟಿದ –

"ಮಾಡ್ತಾ ಮಾಡ್ತಾ ಹುಲೀ ಶಿಕಾರೀನೇ ಮಾಡಿದಾನೆ ಕದೀಮ."

"ಹೂ ಮತ್ತೆ. ಹೊಡೆದರೆ ಇಂಥ ಹುಡುಗೀ ಹೊಡೀಬೇಕು. ಕಳಪೆ ಶಿಕಾರಿ ಮಾಡಿದರೇನು ಬಂತು."

ಆ ಮಾತುಗಳನ್ನು ಕೇಳಿ ಪ್ರಭಾವತಿಗೆ, ಬಯಲಿನಲ್ಲಿ ಬೆತ್ತಲೆ ತಿರುಗಿಸಿದಂತಾಯಿತು. ಶ್ವಾಸಕೋಶಗಳನ್ನು ಹಿಮಶೀತಲ ಬೆರಳುಗಳಿಂದ ಹಿಸುಕಿದಂತಾಗಿ, ಎದೆಯಲ್ಲಿ ಉಸಿರು ಒತ್ತಿ ಬಂತು.

"ಬೇಗ ಅವರ ಲೆಕ್ಕಾಚಾರ ಮುಗಿಸಲು ಹೇಳಿ" ಎಂದಳು ಪ್ರಭಾವತಿ, ಶಾಂತಾರಾಂಗೆ. ಶಾಂತಾರಾಮನ ಮುಖ ಬೆಳ್ಳಗಾಗಿ, ಮುಖದ ಚರ್ಮ ಬಿಗಿದು, ಹಣೆಯಮೇಲಿನ ನರಗಳೆರಡು ಮಿಡಿಯುವುದು ಕಾಣುತ್ತಿತ್ತು.

"ಅಡ್ವಾನ್ಸ್ ಜಾತಾ ಬಾಕಿ, ನಾವೇ ಹತ್ತೂ ಚಿಲ್ಲರೆ ಕೊಡಬೇಕಾಗುತ್ತೆ. ತೆಗೆದುಕೊಳ್ಳಿ" ಎಂದ ಮಾಲಕ ಹತ್ತು ರೂಪಾಯಿನ ನೋಟು, ಚಿಲ್ಲರೆಯನ್ನು ಎಣಿಸಿ ಮೇಜಿನ ಮೇಲಿಟ್ಟು.

"ಪಿಳ್ಳೆ, ರಾಯರಿಗೆ ಜಟಕಾ ಬೇಕೋ, ಟ್ಯಾಕ್ಸಿ ಬೇಕೋ ವಿಚಾರಿಸಿ ತಂದು ಕೊಡು" ಎಂದು ಒಬ್ಬ ಆಳಿಗೆ ಆಜ್ಞೆ ಮಾಡಿದ.

"ಹೊರಗೇ ನಿಂತುಕೊಳ್ಳೋಣ, ಟ್ಯಾಕ್ಸಿ ಬರುವವರೆಗೂ" ಎಂದ ಶಾಂತಾರಾಂ.

ಇಬ್ಬರೂ ಹೊರಗೆ ಬಂದು ಮರದ ಕೆಳಗೆ ನಿಂತರು. ಅವರು ಹೊರಗೆ ಹೋದ ಮೇಲೆ, ಹೋಟಲು ಮಾಲಕ, ಅವರಿಗೆ ಕೇಳಿಸುವಂತೆಯೇ ಗಟ್ಟಿಯಾಗಿ ಮತ್ತೊಬ್ಬ ಆಳಿಗೆ ಹೇಳಿದ–

"ಅವರಿದ್ದ ಕೋಣೇನ ಚೆನ್ನಾಗಿ ಕಸ ಗುಡಿಸಿ, ಫೆನೈಲ್ ಹಾಕಿ ತೊಳೆದುಬಿಡು."

ಶಾಂತಾರಾಂ ಪ್ರಭಾವತಿ ಇಬ್ಬರೂ ಒಬ್ಬರ ಮೊಗವನ್ನೊಬ್ಬರು ನೋಡಿಕೊಂಡರು..ಇಬ್ಬರ ಮೋರೆಯೂ ಕಾರ್ಗಾಲದ ಮೋಡ ಕವಿದ ಮುಗಿಲಾಗಿತ್ತು.

"ಅವನ ನಾಲಿಗೆಗೂ ಫೆನೈಲಿನ ಸ್ನಾನವಾಗಬೇಕು" ಎಂದಳು ಪ್ರಭಾವತಿ. ಶಾಂತಾರಾಂ ಏನೂ ಮಾತನಾಡಲಿಲ್ಲ.

ಸ್ವಲ್ಪ ಹೊತ್ತಿನಲ್ಲೆ ಟ್ಯಾಕ್ಸಿ ಬಂತು. ಹೋಟಲು ಆಳು ಅವರ ಸಾಮಾನನ್ನು ತಂದು ಟ್ಯಾಕ್ಸಿಯಲ್ಲಿಟ್ಟ. ಇಬ್ಬರೂ ಟ್ಯಾಕ್ಸಿಯಲ್ಲಿ ಕುಳಿತರು. ಟ್ಯಾಕ್ಸಿಯವನು, ಶಾಂತಾರಾಮನನ್ನು ಕೇಳಿದ–

"ಎಲ್ಲಿಗೆ ಸಾರ್?"

ಶಾಂತಾರಾಂ ಪ್ರಭಾವತಿಯತ್ತ ನೋಡಿ, ಒಣನಗೆ ನಗುತ್ತಾ ಕೇಳಿದ–

"ಪ್ಯಾರಾಕೆ ಮುಸಾಫಿರ್, ಮಂಜಿಲ್ ತೇರಾ ಕಹಾ ಹೈ?" (ಪ್ರೇಮದ ಪ್ರವಾಸಿ, ನಿನ್ನ ನೆಲೆ ಯಾವುದು?)

ಅವನ ಮಾತು ಕೇಳಿ ಪ್ರಭಾವತಿಯ ಕಣ್ಣನ್ನು ತುಂಬಿದ ಕಂಬನಿಯಲ್ಲೂ ನಗೆ ಮಿಂಚಿತು. ಅಳು ನಗುಗಳು ಬೆರತು ತುಳುಕುವ ಧ್ವನಿಯಲ್ಲಿ ಹೇಳಿದಳು–

"ವಿ ಗೋ ಆನ್ ಫಾರ್ ಎವೆರ್" (ಅನಂತ ಯಾತ್ರೆ ನಮ್ಮದು)

"ಎಲ್ಲಿಗೆ ಸಾರ್?" ಮತ್ತೊಮ್ಮೆ ಟ್ಯಾಕ್ಸಿಯ ಡ್ರೈವರ್ ಕೇಳಿದ.

"ಎಲ್ಲಿಗಾದರೂ ಸರಿಯೇ, ಮೊದಲು ಈ ಜಾಗದಿಂದ ಹೊರಗೆ ಹೋಗೋಣ" ಎಂದ ಶಾಂತಾರಾಂ.

ಟ್ಯಾಕ್ಸಿ ವೇಗವಾಗಿ ಹೊರಟು, ಹೋಟಲ ಕಾಂಪೌಂಡನ್ನು ದಾಟಿತು. ಬಳಿಕ ಶಾಂತರಾಂ ಹೇಳಿದ–

"ಫ್ರಂ ಹೋಟಲ್ ಟು ಹೋಟಲ್, ಅವರ್ ಕ್ಯಾರವಾನ್ ಪಾಸಸ್ ಆನ್" (ಹೋಟಲಿಂದ ಹೋಟಲಿಗೆ ನಮ್ಮ ಯಾತ್ರೆ ನಡೆದಿದೆ)

"ಕ್ಯಾರವಾನ್ ಪಾಸಸ್ ವೈಲ್ ದಿ ಡಾಗ್ಸ್ ಬಾರ್ಕ್" (ನಾಯಿಗಳು ಬಗಳುವಾಗ ಒಂಟೆಯ ಸಾಲು ನಡೆಯುತ್ತದೆ)

ಎಂದು ಪ್ರಭಾವತಿ ಅವನ ಮಾತು ಪೂರ್ಣಮಾಡಿದಳು.

## ೧೨

ಮುಚ್ಚಿದ ಮನ, ಮುಚ್ಚಿದ ಮನೆ, ಹೋದತ್ತ ಬಂದತ್ತ ಚೂರಿ ನೋಟದ ಬೇಟೆ – ಇಷ್ಟಲ್ಲದೆ ಜಗತ್ತಿನಲ್ಲಿ ಅವರಿಬ್ಬರ ಪಾಲಿಗೆ ಬೇರೇನೂ ಉಳಿದಂತಿರಲಿಲ್ಲ.

ಕಗ್ಗತ್ತಲು ತುಂಬಿದ ವಿಶಾಲ ಅಪರಿಚಿತ ಗುಹೆಯಲ್ಲಿ, ಬೆನ್ನಟ್ಟಿ ಬರುತ್ತಿರುವ ಭಯಾನಕ ಭೂತವೊಂದರ ಭೀಷಣಾಟ್ಟಹಾಸಕ್ಕೆ ಬೆದರಿ, ದಿಕ್ಕುದೆಸೆಯರಿಯದೆ ಓಡುತ್ತಿರುವವರಂತಿತ್ತು ಅವರ ಪರಿಸ್ಥಿತಿ. ಕ್ರೋಧ, ದುಃಖ, ನಿಟ್ಟುಸಿರು – ಅವುಗಳ ವಿರುದ್ಧ ಏನೂ ಮಾಡಲಾಗದ ಅಸಹಾಯಕತೆ ಇವೇ ಅವರಿಬ್ಬರ ಸಂಗಾತಿಗಳಾಗಿದ್ದವು. ದಟ್ಟವಾಗಿ ಕವಿದ ಆ ಕಾರ್ಗತ್ತಲ ಬಾಳಿನಲ್ಲಾವ ಬೆಳ್ಳಿಯ ಗೆರೆಯೂ ಕಾಣದು.

ಹತ್ತು ಹದಿನೈದು ದಿನ, ಕೇವಲ ಹತ್ತು ಹದಿನೈದು ದಿನ. ಇನ್ನೂ ನಿನ್ನೆ ಎಂಬಂತೆ ತೋರುತ್ತಿದೆ – ಆದರೆ ಎಷ್ಟು ಬದಲಾವಣೆ, ಎಂಥ ಪರಿವರ್ತನೆ.

ಸಮಾಜ ಸಾಹಸಕ್ಕೆ, ಸತ್ಯಕ್ಕೆ ನೀಡುವ ಬಹುಮಾನ – ಮುಖಕ್ಕೆ ರಾಚಿದಂತೆ ಮುಚ್ಚುವ ಬಾಗಿಲು. ಇಷ್ಟೇನೇ?

ಎಷ್ಟು ಬೇಗ ಈ ಬದಲಾವಣೆ –

ವೇಗವಾಗಿ ಸುತ್ತುತ್ತಿರುವ ಬೆಳಕಿನ ಗೋಳ ಇದ್ದಕ್ಕಿದ್ದ ಹಾಗೇ ಕತ್ತಲ ಆಳಕ್ಕೆ ಕಿತ್ತು ತೂರಿದಂತೆ ಎನಿಸುವುದು ಪ್ರಭಾವತಿಗೆ. ಯೋಚಿಸುತ್ತಾ ಕುಳಿತಾಗ ಹತ್ತೂ ಕಡೆಯಿಂದ ಕೊರೆವ ಕತ್ತಲ ಪಡೆ ಬಂದು ಅವಳ ಮಿದುಳನ್ನು ಮುತ್ತಿಗೆ ಹಾಕಿದಂತೆ ತೋರುವುದು.

ಹೊರಗೆ ಹೋಗಲು ಇಚ್ಛೆ ಇಲ್ಲದೆ, ಹೋಗಲು ಯಾವ ಮನೆಯೂ ಇಲ್ಲದೆ ಹೋಟಲ ಕೋಣೆಯಲ್ಲಿ ಒಂಟಿಯಾಗಿ ಕುಳಿತು ಯೋಚಿಸುವಳ ಪ್ರಭಾವತಿ.

ಏನು ಗುರಿ – ಏನು ಕೊನೆ ?

ಮನೆ – ಸಮಾಜ. ಜಗತ್ತಿನ ದೃಷ್ಟಿಯಲ್ಲಿ ಅವಳೊಬ್ಬಳು ಬಂಡಾಯ ಗಾತಿ; ಕಟ್ಟುಕಟ್ಟಲೆಯನ್ನು ಮುರಿದು ಮನೆಯಿಂದ ಹೊರಬಿದ್ದ ದಂಗೆಕೋರಿ, ಅರಾಜಕತೆಯ ಪ್ರವಾದಿ.

ಮನೆಯಿಂದ ಹೊರಬಿದ್ದಂದು ಅವಳ ಎದೆಯಲ್ಲೂ ಕ್ರಾಂತಿ, ಬಂಡಾಯದ ಉರಿ ಉರಿಯುತ್ತಿತ್ತು. ಜಗತ್ತನ್ನೇ ಎದುರಿಸುವ ಕ್ರೋಧದಿಂದ ಹೊರಬಿದ್ದಿದ್ದಳು. ಸಿಡಿಲ ಮಳೆ, ಬಿರುಗಾಳಿಯ ಅಬ್ಬರವನ್ನು ಎದುರಿಸಲು ಸಿದ್ಧಳಿದ್ದಳು. ಹೋರಾಟದ ಹುರುಪು ಅವಳ ಎದೆಯಲ್ಲಿತ್ತು.

ಈಗ – ಯಾವುದರ ವಿರುದ್ಧ ಹೋರಾಡಬೇಕು ?

ಆ ಕತ್ತು ಹಿಸುಕುವ ತಾತ್ಸಾರ, ಕರುಳು ಹಿಸುಕುವ ತಿರಸ್ಕಾರ, ಕೊಲ್ಲುವ ಬೇಸರ – ಇವುಗಳ ವಿರುದ್ಧ ಹೋರಾಡಬೇಕು.

ತನ್ನ ವಿರುದ್ಧ ಸಮಾಜ ಅಸ್ತ್ರಗಳನ್ನು ಉಪಯೋಗಿಸಬಹುದೆಂದು ಅವಳು ಊಹಿಸಿರಲಿಲ್ಲ. ಶೋರಿಕೆಗೆ ನಿರಪಾಯಕಾರಿಯಾಗಿ ಕಾಣುವ ಈ ಅಸ್ತ್ರಗಳ ಭಯಂಕರ ಪರಿಣಾಮವನ್ನವಳು ಅರಿತಿರಲಿಲ್ಲ.

ಅವಳೆದೆಯಲ್ಲಿ ಬಿರುಗಾಳಿ, ಇದಿರು ಬಂದ ಪರ್ವತವನ್ನೇ ಕಿತ್ತು ತೂಗಬಲ್ಲ ಪ್ರಚಂಡ ಬಿರುಗಾಳಿ ಮೊರೆಯುತ್ತಿತ್ತು. ಆದರೆ ಆ ಬಿರುಗಾಳಿಗೆ ಇದಿರೇ ಇದ್ದಂತಿರಲಿಲ್ಲ. ಯಾರ ಮೇಲೆ ಬೀಸಬೇಕು ಅದು, ಯಾವ ಪ್ರತಿಭಟನೆಯ ವಿರುದ್ಧ ? ಬಯಲ ಬಿರುಗಾಳಿ. ಸುಮ್ಮನೆ ಮೊರೆದು ಸುತ್ತುತ್ತದೆ, ಉನ್ಮತ್ತ ವೇಗದಿಂದ.

ಸುಮ್ಮನೆ ಸುತ್ತುತ್ತದೆಯೇ – ಅದೂ ಇಲ್ಲ.

ಮಾಂತ್ರಿಕನ ಇಂದ್ರಜಾಲದಿಂದ ಹುಟ್ಟಿದ ಭೂತವೊಂದು, ಕೆಲಸ ಕೊಡು ಇಲ್ಲವಾದರೆ ನಿನ್ನ ತಲೆಯ ಆಹಾರ ಕೊಡು ಎಂದು ಬೇಡಿತಂತೆ. ಅವಳ ಕ್ರೋಧವೂ ಹಾಗೇ ಆಗಿದೆ. ಕಾಳ್ಗಿಚ್ಚಿನಂತೆ ಥಾಳಿಸಿದ ಅವಳ ಎದೆಯ ಕ್ರೋಧ, ಸುಡಲು ಏನೂ ಇಲ್ಲದೆ ಶೂನ್ಯದಲ್ಲಿ ಸುಳಿದು ಬಂದು, ಬೇಸರವಾಗಿ ನಿನ್ನನ್ನೇ ತಿನ್ನುತ್ತೇನೆ ಎಂದು ಅವಳ ಎದೆಯನ್ನು ಹಿಂಡುತ್ತದೆ.

ಮಾಡಬೇಕು, ಏನಾದರೂ ಮಾಡಬೇಕು – ಎಂದು ಅವಳೊಳಗಿನ ಯೌವ್ವನದ ಶಕ್ತಿ ಬಲೆಗೆ ಬಿದ್ದ ಹಕ್ಕಿಯಂತೆ ಚಡಪಡಿಸುತ್ತದೆ. ಆದರೆ ಏನು ಮಾಡಬೇಕು ?

ಸುಮ್ಮನೆ ನೆಲಕ್ಕೆ ಕಾಲು ಅಪ್ಪಳಿಸುತ್ತಾ ಕೋಣೆಯ ಸುತ್ತ ಶತಪಥ ಸುತ್ತುತ್ತಾಳೆ.

ಹಿಂದೆ ಅವಳಿಗೆ ದಿನಕ್ಕೇ ಹೊತ್ತು ಸಾಲದು ಎನಿಸುವಷ್ಟು ವೇಗವಿತ್ತು ಕಾಲಕ್ಕೆ – ಈಗ? ಹೊತ್ತು ಅರಗದ ಆಹಾರದಂತೆ ಅವಳ ಹೊಟ್ಟೆಯಲ್ಲಿ ಕುಳಿತು ಮಿಡುಕಾಡಿಸುತ್ತದೆ.

ಕೆಲಸ....ಕೆಲಸ....ಬೇಸರದ ಭೂತವಾಗಿ ಕಾಡಿಸುವ ಹೊತ್ತನ್ನು ಕೊಲ್ಲಲು ಕೆಲಸ ಬೇಕು? ಕೆಲಸ ಬೇಕು – ಆದರೆ ಏನು ಮಾಡಬೇಕು. ಸಪ್ಪೆ ಎಂದ ರೋಗಿಯ ನಾಲಗೆಯಂತೆ ಹುಳಿ, ಖಾರಕ್ಕೆ ಹಾತೊರೆಯುತ್ತದೆ ಅವಳ ಮನಸು.

ಒಮ್ಮೊಮ್ಮೆ ಇದೇ ಗತಿ, ಇದ್ದಷ್ಟು ದಿನವೂ ಬಾಳು ಹೀಗೇ ನಡೆಯ ಬೇಕೇನೋ ಎನಿಸಿ ಹೆದರಿಕೆ ಅವಳ ಹೃದಯವನ್ನು ಹಿಂಡುತ್ತದೆ.

ಕೆಲಸ ಬೇಕೆಂದು ಹತ್ತು ಸಾರಿ ಬಟ್ಟೆ ಬದಲಿಸುವಳು, ಹತ್ತು ಬಗೆ ಯಾಗಿ ಜಡೆ ಹಾಕಿಕೊಳ್ಳುವಳು, ಕೈಗೆ ಸಿಕ್ಕ ಪೇಪರು, ಪುಸ್ತಕಗಳನ್ನು ಓದುವಳು – ಹೇಗಾದರೂ ಮಾಡಿ ಬೇಸರವನ್ನು ಮರೆಯಲೆತ್ನಿಸುವಳು. ಆ ಹೊತ್ತಿನಲ್ಲಿ –

ಕಾಲೇಜಿನ ಉತ್ಸಾಹಯುಕ್ತ ಚಟುವಟಿಕೆಯ ವಾತಾವರಣ, ಬಿಡುವಿಲ್ಲದ ಓಡಾಟ, ಬೇಡ ಬೇಡವೆಂದರೂ ಬರುತ್ತಿದ್ದ ಗೆಳತಿಯರ ಗದ್ದಲ, ಆ ನಗು, ಕೆಲೆದಾಟ, ಉತ್ಸಾಹ, ಚಟುವಟಿಕೆಗಳ ನೆನಪು ಹೊಳೆಯಂತೆ ನುಗ್ಗಿಬಂದು, ಮತ್ತೆ ಅವಳ ಮಿದುಳಿನಲ್ಲಿ ಶೂನ್ಯವನ್ನುಳಿಸಿ ತೆರಳುತ್ತದೆ. ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಹತಾಶಳಾಗಿ ಕುಳಿತುಕೊಳ್ಳುತ್ತಾಳೆ ಪ್ರಭಾವತಿ.

ಯಾವುದೂ ಬೇಡ – ಏನೋ ಬೇಕು.

ಈ ವಿಚಿತ್ರ ಬೇಕು ಬೇಡಗಳ ಉರಿ – ಹಿಮಗಳ ಶಯ್ಯೆಯಲ್ಲಿ ನರಳು ತ್ತಿದಾಳೆ – ಅವಳು.

ನಿಡು ಬೇಸರದ ಈ ಹೋಟಲು ಬಾಳಿಗೆ ಎಂದು ಕೊನೆಯೋ ಎಂದು ಚಿಂತಿಸುತ್ತಾಳೆ. ಮ್ಲಾನ ಮುಖ, ಬೆಳಕಾರಿದ ಕಣ್ಣು, ಕಾವಾರಿದ ಯೌವ್ವನದ ನರನಾಡಿ, ಬೇಸರದ ಬಯಲು ತುಂಬಿದ ಎದೆಯು ಭಾರ ಹೊತ್ತು, ಹೋಟಲಿನ ಯಾಂತ್ರಿಕ ಜೀವನದ ಮುಂದ ಪ್ರವಾಹದಲ್ಲಿ ಹುಲ್ಲುಕಡ್ಡಿಯಂತೆ ತೇಲುತ್ತಿ ದಾಳೆ....ತೇ....ಲು....ತ್ತಿ....ದಾ ಾ ಾ ಾ....ಳೆ....

ಅಲಂಕರಿಸಿದ ಶವ!

ಶಾಂತಾರಾಂ ದಿನವೂ ಅಲೆದು ಬರುತ್ತಾನೆ – ಮನೆ, ಕೆಲಸ.

ಗೊತ್ತಾದ ಆದಾಯ ಬರುವವರೆಗೂ ಮನೆ ಮಾಡುವ ಸಾಹಸ ಮಾಡು ವಂತಿಲ್ಲ ಅವನು. ಆದರೆ ಕೆಲಸ ಮಾತ್ರ ಎಲ್ಲೂ ಕಾಣಿಸುತ್ತಿಲ್ಲ.

ಕೆಲಸ....ಕೆಲಸ....ಕೆಲಸ.

ಹೊಯ್ದಾಡುತ್ತಾನೆ, ಹಾರಾಡುತ್ತಾನೆ, ಸಿಟ್ಟಿನಿಂದ ತಲ್ಲಣಿಸುತ್ತಾನೆ. ಏನು ಕೆಲಸವಾದರೂ ಸರಿಯೆ, ಆದರೆ ಅವನ ಆತುರಕ್ಕೆ ಒಲಿಯುವ ಕೆಲಸ ಯಾವುದೂ ಇಲ್ಲ.

ಹಾಗೇ – ಅವನ ಬಾಳು ಗಳಿಗೆ ಗಳಿಗೆಗೆ ಕರಗಿಸುವ ಉರಿದ್ರಾವಕದಲ್ಲಿ ಅದ್ದಿದ ವಸ್ತುವಿನಂತಾಗಿದೆ. ಸಣ್ಣ ಉರಿಯಮೇಲಿಟ್ಟ ಬೆಣ್ಣೆಯ ಮುದ್ದೆ.

ದಿನದಿನಕ್ಕೆ ಕೈಯಲ್ಲಿದ್ದ ಹಣ ಕರಗಿ, ಕೆಲಸ ಸಿಕ್ಕರೂ ಹೋಟಲ ಋಣ ತೀರಿಸಿ ಹೋಟಲು ಬಿಡುವ ದಾರಿ ಹೇಗೆಂಬ ಯೋಚನೆಯೊಂದು ಅವನ ಮಿದುಳನ್ನು ಕೆಣಕುತ್ತಿದೆ, ಕೆಸರಿನಲ್ಲಿ ತುಳಿದ ಮುಳ್ಳಿನಂತೆ ಆಳವಾಗಿ ಹೂತು, ತೆಗೆಯಲು ಬಾರದೆ, ಇರಲೆಂದು ಬಿಡಲು ಸಾಧ್ಯವಾಗದೆ.

ಬಂದದ್ದು ಬರಲೆಂದು ಹಲ್ಲು ಕಚ್ಚಿ, ಪರಿಸ್ಥಿತಿಯನ್ನು ಗೆಲ್ಲಲು ಹೆಣಗು ತ್ತಿದಾನೆ. ಗಾಳಿಯಲ್ಲಿ ಕೈ ಬೀಸಿದಂತಾಗುತ್ತಿದೆ. ಬರೀ ಶ್ರಮ, ಶ್ರಮ – ಮೈ, ಮಿದುಳಿಗೆ.

ತನ್ನ ಎಲ್ಲ ಚಿಂತೆಯನ್ನೂ ಶಾಂತಾರಾಂ ಪ್ರಭಾವತಿಗೆ ಹೇಳುವನು. ತನ್ನೆದೆಯ ಬೇಗೆಯನ್ನು ಅವಳ ತೋಳತೆಕ್ಕೆಯ ತಣ್ಪಿನಲ್ಲಿ ಮರೆಯಲೆತ್ನಿಸು ವನು. ಆದರೆ ಅವಳ ತೋಳತೆಕ್ಕೆಯ ತಣ್ಪಿನಲ್ಲೂ, ಕರಗುತ್ತಿರುವ ಹಣದ ಚಿಂತೆಯ ಉರಿಯನ್ನು ಮರೆಯಲಾರ. ಪ್ರಭಾವತಿಗೆ ಎಲ್ಲವನ್ನೂ ಹೇಳು ತ್ತಾನೆ – ಆದರೆ ಹಣದ ಚಿಂತೆಯನ್ನು ಮಾತ್ರ ಹೇಳಲಾರ.

ಆದರೆ ಹಣ ಮಾತ್ರ, ಮುಷ್ಟಿಯಲ್ಲಿ ಹಿಡಿದ ಮಂಜಿನ ಗಡ್ಡೆಯಂತೆ ಕರಗುತ್ತಿದೆ. ಅದು ಕರಗಿದಂತೆ, ಹೊತ್ತಳಿದ ಮುಗಿಲು ಕಪ್ಪಾಗುವಂತೆ, ಅವನ ಭವಿಷ್ಯದ ದಿಗಂತ ಕತ್ತಲಾಗುತ್ತಿದೆ.

ಬೇಸರ – ಬಳಲಿಕೆಯಿಂದ ಒಬ್ಬರನ್ನೊಬ್ಬರು ತಬ್ಬಿ, ಕೆರಳುವ ಕಾಮದಲ್ಲಿ ಎಲ್ಲವನ್ನೂ ಮರೆಯಲು ಯತ್ನಿಸುತ್ತಾರೆ. ಸುತ್ತಲೂ ಗಂಟು ಹಾಕಿದ ಮುಖ,

ತಾತ್ಸಾರದಿಂದ ತುಂಬಿದ ಕಣ್ಣುಗಳ ಕಾಡಿನಲ್ಲಿ ಒಬ್ಬರನ್ನೊಬ್ಬರು ನೋಡಿ ನಕ್ಕು, ನಂದುತ್ತಿರುವ ಬೆಳಕಿಗೆ ಉತ್ಸಾಹದ ಗಾಳಿ ಬೀಸಲು ಯತ್ನಿಸುತ್ತಾರೆ.

ಆದರೆ ಅದರಲ್ಲೂ ಮೊದಮೊದಲಿನ ಉದ್ವೇಗವಿಲ್ಲ, ಆವೇಗವಿಲ್ಲ, ಉದ್ರೇಕವಿಲ್ಲ, ಉನ್ಮಾದವಿಲ್ಲ. ಜಡಮೈ – ಜಡಮನೆ. ಆ ಜಡತೆಯಾಳದಲ್ಲಿ ಎಲ್ಲೋ, ಕತ್ತಲಿನಲ್ಲಿ ಕಪ್ಪಾದ ನೀರಿನಾಳದಲ್ಲಿ ಕ್ಷೀಣ ನಕ್ಷತ್ರಕಾಂತಿ ಮಿನುಗಿದಂತೆ ಉರಿಯುತ್ತಿದೆ ಕಾತರ – ಬೇಸರಿಕೆ – ಬಳಲಿಕೆಗಳ ದಡದ ನಡುವೆ.

ಜಗತ್ತಿಗೇ ತಾವು ಬೇಡವೇನೋ ಎಂಬಂತಿದ್ದರು ಅವರು. ಆದರೆ ಬಯಕೆಯ ಪಶು ಹಸಿದು ನೋಡುತ್ತಿತ್ತು.

ಒಂದು ದಿನ ಹೋಟಲು ಮ್ಯಾನೇಜರ್ ಶಾಂತಾರಾಮನಿಗೆ ಹೇಳಿದ –

"ಸಾರ್, ನಿಮ್ಮ ಬಾಕಿ ಹೆಚ್ಚಾಗುತ್ತಿದೆ. ಕೊಂಚ ಹಣ ಕೊಡುತ್ತೀರಾ?"

"ಹಣ ಬರುವುದಿದೆ. ಬಂದ ಕೂಡಲೇ ಕೊಡುತ್ತೇನೆ" ಎಂದ ಶಾಂತಾರಾಂ. ಬಾಕಿ ಹೆಚ್ಚುತ್ತಿರುವ ವಿಚಾರ ಬೆಂಕಿಯಂತೆ ಉರಿಯಿತು. ಆ ದಿನವೇನೋ ಆ ಸಮಾಧಾನದ ಮಾತು ಕೇಳಿ ಮ್ಯಾನೇಜರ್ ಸುಮ್ಮನಾದ.

ಆದರೆ ಅಂದಿನಿಂದ ಅವನು ಶಾಂತಾರಾಂ ಪ್ರಭಾವತಿ ಓಡಾಡುವಾಗ ಅವರನೇ ನೋಡುವುದು ಹೆಚ್ಚಾಯಿತು.

ಮನೆ ಬಿಟ್ಟು ಬಂದವಳಾದರೂ ಪ್ರಭಾವತಿ ಮನೆ ಬಿಟ್ಟು ಬರುವಾಗ ತಂದ ಬೆಲೆ ಬಾಳುವ ಬಟ್ಟೆ ಧರಿಸುತ್ತಾಳೆ. ಆದರೆ ಶಾಂತಾರಾಮನದು ಸಾದಾ ಉಡುಪು.

ಈ ವ್ಯತ್ಯಾಸ ಪ್ರಭಾವತಿಗೂ ಕಂಡು ಆದಷ್ಟು ಸಾದಾ ಸೀರೆ ಉಡುತ್ತಿದ್ದಳು. ನೋಡಲು ಸಾದಾ ಆದರೂ, ಬೆಲೆ ಬಾಳುವ ರೇಶಿಮೆಯ ಹೊಳಪು, ನವಿರು ಅದರ ಬೆಲೆಯನ್ನು ಸಾರಿ ಹೇಳುತ್ತದೆ. ಮೈಮೇಲಿನ ಒಂದೆರಡು ಒಡವೆ, ಅವಳ ಮಾತು, ನಡತೆಯ ರೀತಿ. ಹುಟ್ಟಿನ ಶ್ರೀಮಂತಿಕೆಯನ್ನು ಸಾರಿ ಹೇಳುತ್ತದೆ. ಶಾಂತಾರಾಮನದು ಸಾದಾ ಉಡುಪು – ಸಾದಾ ಬೆಲೆ. ವ್ಯತ್ಯಾಸ ಎದ್ದು ಕಾಣಿಸುತ್ತದೆ.

ಹೋಟಲಿಗೆ ಬಂದ ನೂರಾರು ಗಿರಾಕಿಗಳನ್ನು ನೋಡಿ ಪಳಗಿದ ಮ್ಯಾನೇಜರ ಕಣ್ಣು ಆ ವ್ಯತ್ಯಾಸವನ್ನು ಗುರುತಿಸಿ, ಮತ್ತಷ್ಟು ಆಳವಾಗಿ ನೋಡುವುದು. ನೋಡ ನೋಡುತ್ತಲೇ ಅವರೊಂದಿಗಿ ವಿಶ್ವಾಸವಾಗಿ ಮಾತನಾಡುವನು.

ಬೇಸರ ಕಳೆಯಲೆಂದು ಒಂದೊಂದು ಸಂಜೆ ಇಬ್ಬರೂ ಲಾಲ್‌ಬಾಗಿಗೋ, ಕಬ್ಬನ್‌ಪಾರ್ಕಿಗೋ ಹೋಗಿ ಬರುವರು.

ಹೋಗುವಾಗ ಉತ್ಸಾಹದಿಂದ ಹೋದರೂ, ಬರುವಾಗ ಬೇಸರ ವ್ಯಥೆಯ ಭಾರ ಹೊತ್ತು ಬಳಲಿ ಬರುವರು.

ಮ್ಯಾನೇಜರ್ ಅದನ್ನು ನೋಡುವನು. ಅವನ ಮನಸ್ಸು ಏನೋ ಲೆಕ್ಕಾಚಾರ ಹಾಕುವುದು. ನೋಡಿಯೇ ನೋಡುವನು. ಅವನು ತಮ್ಮನ್ನು ಹಾಗೆ ನೋಡುವುದನ್ನು ಮೊದಲು ಪ್ರಭಾವತಿ ಗಮನಿಸಿ ಹೇಳಿದಳು.

"ಅವನು ಹೇಗೆ ನೋಡುತ್ತಾನೆ ನೋಡಿ. ತೆಗೆದು ಕಪಾಳಕ್ಕೆ ಬಾರಿಸ ಬೇಕೆನ್ನಿಸುತ್ತದೆ."

"ಸುಂದರ ವಸ್ತುವನ್ನು ಕಂಡಾಗ ಎಲ್ಲರಿಗೂ ನೋಡಬೇಕೆನ್ನಿಸುತ್ತದೆ. ಹೋಗಲಿ ಬಿಡು. ಅವನು ಕೆಟ್ಟವನಲ್ಲ."

ಅವನು ಕೆಟ್ಟವನಲ್ಲ, ಆದರೆ ಬಾಕಿ ತೀರಿಸಲು ಆಗಾಗ ಕೇಳುತ್ತಾನೆ. ಅದೂ ಸರಿಯೆ. ಅವನೇ ಹೋಟಲ ಮಾಲಕನಲ್ಲವಲ್ಲ. ಮಾಲಕನಿಗೆ ಲೆಕ್ಕ ಕೊಡಬೇಡವೇ?

ಯಾರಿಂದಲಾದರೂ ಅಷ್ಟು ಹಣ ಸಾಲ ತಂದು ತೀರಿಸಬೇಕೆಂದು ಯತ್ನಿಸಿದ ಶಾಂತಾರಾಂ. ಬಹಳ ಪ್ರಯತ್ನ ಪಟ್ಟರೆ ಐದೋ ಹತ್ತೋ ರುಪಾಯಿ. ಪಾಠದ ಮನೆಗಳಲ್ಲಿ ಬಾಕಿ ಬರಬೇಕಾಗಿದ್ದುದನ್ನು ತಂದು ಜೋಡಿಸಿಕೊಟ್ಟ. ಆದರದು ದಿನದಿನಕ್ಕೆ ಬೆಳೆದ ಬಾಕಿಯ ರಾವಣ ಹೊಟ್ಟೆಗೆ ಅರಕಾಸಿನ ಮಜ್ಜಿಗೆ.

ದಿನದಿನಕ್ಕೆ ಮ್ಯಾನೇಜರನ ವರಾತ ಹೆಚ್ಚಿತು.

ತೀರಿಸಬೇಕು. ತೀರಿಸಲೇಬೇಕು – ಆದರೆ ಹಣವೆಲ್ಲಿ? ಅವನ ಹಣವೆಲ್ಲಾ ಕರಗಿತ್ತು. ಪ್ರಭಾವತಿಯ ಬಳಿ ಇದ್ದುದೂ ಮುಗಿದು ಹತ್ತಾರು ರುಪಾಯಿ ಉಳಿದಿದ್ದರೆ ಹೆಚ್ಚಾಗಿತ್ತು. ಅವಳು ಮನೆಯಿಂದ ಬರುವಾಗ ಹಣ ತಂದಿರ ಲಿಲ್ಲ. ಹ್ಯಾಂಡ್ ಬ್ಯಾಗಿನಲ್ಲಿದ್ದ ಇಪ್ಪತ್ತು ಮೂವತ್ತು ರೂಪಾಯಿಗಳೇ ಅವಳ ಬಳಿ ಇದ್ದದ್ದು. ಅದೂ ಖರ್ಚಾಗುತ್ತಿತ್ತು.

ದಿನದಿನಕ್ಕೆ ಮ್ಯಾನೇಜರ್ ಬಾಕಿ ಕೇಳುವುದು ಹೆಚ್ಚಾಯಿತು.

ಹೋಟಲಿಗೆ ಸೇರುವಾಗಲೇ ಅಷ್ಟು ಹಣ ಅಡ್ವಾನ್ಸ್ ಕೊಟ್ಟದ್ದ.

ನಡುವೆ ಕೇಳಿದಾಗ ಹತ್ತಿಪ್ಪತ್ತು ರುಪಾಯಿ ಕೊಟ್ಟಿದ್ದ. ಆದರೆ ಹದಿನೈದು ದಿನದ ಬಾಕಿಗೆ ಅಷ್ಟು ಸಾಕೇ?

ಕೊಡಬೇಕು – ಆದರೆ ಎಲ್ಲಿಂದ ಕೊಡುವುದು ?

ಒಂದು ದಿನ ಮ್ಯಾನೇಜರನೇ ಶಾಂತಾರಾಮನಿಗೆ ಬಾಕಿ ತೀರಿಸುವ ದಾರಿ ತೋರಿಸಿದ.

ದಿನದಂತೆ ಕೆಲಸದ ಬೇಟೆಗೆ ಹೋಗಿದ್ದ ಶಾಂತಾರಾಂ ಇನ್ನೂ ಹಿಂದಿರುಗಿರಲಿಲ್ಲ. ಅವನು ಬರುವುದನ್ನು ಕಾಯುತ್ತಾ, ಸಂಜೆಯ ಮುಗಿಲಿನಲ್ಲಿ ಕತ್ತಲು ಕವಿಯುವುದನ್ನು ನೋಡುತ್ತಾ ಕುಳಿತುಕೊಂಡಿದ್ದಳು ಪ್ರಭಾವತಿ. ಕೋಣೆಯಲ್ಲಾಗಲೇ ಕತ್ತಲು ಕವಿದಿದ್ದರೂ, ದೀಪ ಹಾಕಬೇಕೆನಿಸಿರಲಿಲ್ಲ. ಯಾರೋ ಮಹಡಿಯ ಮೆಟ್ಟಲು ಹತ್ತಿ ಬರುವ ಸದ್ದಾಯಿತು. ಬಾಗಿಲ ಬೋಲ್ಟ್ ಹಾಕಿರದಿದ್ದರಿಂದ, ಶಾಂತಾರಾಂ ಆದರೆ ಒಳಗೆ ಬರುತ್ತಾನೆ ಎಂದುಕೊಂಡು ಹಾಗೇ ಕುಳಿತಿದ್ದಳು. ಅವಳ ಕೋಣೆಯ ಬಾಗಿಲ ಬಳಿಯೇ ಬಂದು ಹೆಜ್ಜೆ ಸದ್ದು ನಿಂತಿತು. ಒಂದು ನಿಮಿಷವಾದ ಬಳಿಕ ಬಾಗಿಲು ಮೆಲ್ಲಗೆ ತೆಗೆಯಿತು.

" ಯಾರು ?" ಪ್ರಭಾವತಿ ಕೇಳಿದಳು.

" ಮಿಸ್ಟರ್ ಶಾಂತಾರಾಂ ಇಲ್ಲವೇ ?" ಮ್ಯಾನೇಜರ್ ಕೇಳಿದ.

" ಇನ್ನೂ ಬಂದಿಲ್ಲ. ಏನಾದರೂ ಹೇಳುವುದಿತ್ತೆ ?"

ಪ್ರಭಾವತಿ ಎದ್ದು ದೀಪ ಹೊತ್ತಿಸಿ ಕೇಳಿದಳು.

" ಅವರೊಂದಿಗೇ ಮಾತಾಡುವುದಿತ್ತು. ಇಷ್ಟು ಹೊತ್ತಿಗೆ ಬಂದಿರಬಹುದು ಎಂದುಕೊಂಡಿದ್ದೆ." ಎಂದ ಮ್ಯಾನೇಜರ್ ಅಂಗೈ ಉಜ್ಜಿಕೊಳ್ಳುತ್ತಾ.

" ಅವರಿಲ್ಲವಲ್ಲಾ. ಏನಾದರೂ ಹೇಳುವುದಿದ್ದರೆ ಹೇಳಿ. ಬಂದ ಕೂಡಲೇ ತಿಳಿಸುತ್ತೇನೆ."

" ಇನ್ನೇನೂ ಇಲ್ಲ....ಕ್ಷಮಿಸಬೇಕು....ಈ ದಿನ ಬಾಕಿಯ ಹಣ ಕೊಡುತ್ತೇನೆ ಅಂತ ಹೇಳಿದ್ದರು. ಬಾಕಿ ಬಹಳವಾಗಿದೆ. ಯಜಮಾನರಿಗೆ ತಿಳಿಸಿದರೆ ಕೋಪಿಸಿಕೊಳ್ಳುತ್ತಾರೆ. ಮೊನ್ನೆಯೇ ಹೇಳಿದ್ದೆ. ಇವತ್ತು ಖಂಡಿತ ಕೊಡುವುದಾಗಿ ಹೇಳಿದ್ದರು."

" ಎಷ್ಟಿದೆ ಬಾಕಿ ?"

" ಇಪ್ಪತ್ತು ಚಿಲ್ಲರೆಯಾಗುತ್ತೆ...."

"ಅಷ್ಟು ಉಳಿದಿದೆಯೇ?" ಆಶ್ಚರ್ಯದಿಂದ ಕೇಳಿದಳು ಪ್ರಭಾವತಿ.

"ನಾನೂ ಅದೇ ಹೇಳಿದೆ. ಬಾಕಿ ಬಹಳವಾಯಿತು. ಐದೋ ಹತ್ತೋ ಆಗಿದ್ದರೆ ಹೇಗೋ ತಳ್ಳಿಕೊಂಡು ಹೋಗಬಹುದಾಗಿತ್ತು. ಆದರೆ ಇಷ್ಟು ಹಣಕ್ಕೆ ಯಜಮಾನರಿಗೆ ಲೆಕ್ಕ ಹೇಳುವುದು ಕಷ್ಟ. ಅಡ್ವಾನ್ಸಿಲ್ಲದೆ, ಯಾರಿಗೂ ರೂಂ ಕೊಡುವುದಿಲ್ಲ. ಅದರಲ್ಲೆಲ್ಲಾ ನಮ್ಮ ಯಜಮಾನರು ಬಹಳ ಕಟ್ಟು ನಿಟ್ಟು...."

"ಆಗಲಿ, ಅವರು ಬಂದ ಕೂಡಲೇ ಹೇಳುತ್ತೇನೆ."

ಆ ಸಂಭಾಷಣೆಯನ್ನು ಮುಂದುವರಿಸಲಿಚ್ಛೆಯಿಲ್ಲದೆ ಹೇಳಿದಳು ಪ್ರಭಾವತಿ.

"ಹೀಗೆ ಹೇಳಿದೆ ಎಂದು ನಿಮಗೆ ಸಿಟ್ಟು ಬಂದಿರಬಹುದು....ನಾನೂ ಮನುಷ್ಯನೇ....ಅವರ ಬಳಿಯೂ ದುಡ್ಡಿದ್ದಂತಿಲ್ಲ....ಅದಕ್ಕೇ...."

"ಏನು ಅದಕ್ಕೇ?"

"ನೀವು ಮನಸ್ಸು ಮಾಡಿದರೆ ಆ ಬಾಕಿ ತೀರುವುದೇನೂ ದೊಡ್ಡದಲ್ಲ...."

ಅವನು ಮಾತಾಡಿದ ರೀತಿ, ಆ ಮಾತಿನ ಏರಿಳಿವು, ಪ್ರಭಾವತಿಯನ್ನು ಚಾಟಿಯಿಂದ ಜಡಿದವು. ಅವಳ ಮೈಯ ನರನರವೂ ನಿಮಿರಿ ಎಚ್ಚರವಾದವು. ತೀಕ್ಷ್ಣವಾದ ಕಣ್ಣುಗಳಿಂದ ಅವನನ್ನು ನೋಡುತ್ತಾ, ಮುಂದೆ ಸರಿದು ಕೇಳಿದಳು –

"ಏನು ಹಾಗೆಂದರೆ...."

"ನಾನು ಹೇಳಬೇಕೇ? ನಿಮಗೆ ಗೊತ್ತಿಲ್ಲವೇ? ಜನ ನಿಮ್ಮಂಥವರಿಗೆ ಏಕೆ ಹಣ ಕೊಡುತ್ತಾರೆಂದು...."

ಅವನ ಮಾತು ಮುಗಿಯುವುದರೊಳಗಾಗಿ ಅವನ ಕೆನ್ನೆಯ ಮೇಲೆ 'ಫಳಾರ್' ಎಂದು ಏಟು ಬಿತ್ತು.

"ಗೆಟೌಟ್ ಯು ಡರ್ಟಿ ಡಾಗ್"

ಏಟಿನಿಂದ ಸಾವರಿಸಿಕೊಳ್ಳುತ್ತಾ ಮ್ಯಾನೇಜರ್ "ಕ್ಷ....ಕ್ಷ....ಮಿ....ಸಿ" ಎಂದ.

"ಮೊದಲು ತೊಲಗಿಲ್ಲಿಂದ"

ಗುಂಡು ತಗುಲಿದ ಹುಲಿಯಂತೆ ಅಬ್ಬರಿಸಿದಳು ಪ್ರಭಾವತಿ. "ಇನ್ನೊಮ್ಮೆ ಇತ್ತ ಕಡೆ ಕಾಲಿಟ್ಟರೆ, ಚಪ್ಪಲಿಯಿಂದ ಉತ್ತರ ಕೊಡಬೇಕಾದೀತು."

ಅವಳು ಕೆರಳಿ ನಿಂತ ನಿಲವು ನೋಡಿ ಮ್ಯಾನೇಜರ್‌ಗೆ ಅವಳಿದಿರು ನಿಲ್ಲಲು ಧೈರ್ಯವಾಗಲಿಲ್ಲ. ಮೆತ್ತ ಮೆತ್ತಗೆ ಬಾಗಿಲಿನತ್ತ ಸರಿದು, ಬಾಗಿಲು ಸಮೀಪಿಸಿದೊಡನೆಯೇ ಹಿಂದಕ್ಕೆ ತಿರುಗಿ ಓಡಿದ.

ಬಾಗಿಲನ್ನು ಧಡಾರನೆ ರಾಚಿದಳು. ನೆರೆಯಂತೆ ಏರಿಬಂದ ಕ್ರೋಧದಲ್ಲಿ ಅವಳ ಮೈ ಬುಸುಗರೆಯುತ್ತಿತ್ತು. ಅಪಮಾನಿತವಾದ ಅವಳ ಮೈಯ ನರನರವೂ ರಕ್ತದಾಹದಿಂದ ಚೀರುತ್ತಿದ್ದವು. ಅವಳ ಕಣ್ಣಲ್ಲಿ ಅಪಮಾನದಿಂದ ಉದ್ರೇಕಿತವಾದ ಕ್ರೋಧ, ಇದಿರಿಗೆ ಕಂಡುದೆಲ್ಲವನ್ನೂ ದಹಿಸುವಂತೆ ಉರಿಯುತ್ತಿತ್ತು. ನಿಂತ ಎಡೆಯಿಂದ ಕದಲಲಾಗದೆ ನಿಂತೇ ಇದ್ದಳು. ಮೈಯನ್ನು ತುಂಬಿ ಧೋ ಧೋ ಎಂದು ಪ್ರವಹಿಸುತ್ತಿದ್ದ ಸಿಟ್ಟಿನ ನೆರೆ ಇಳಿದಂತೆ, ದುಃಖ ತುಂಬಿ ಹೊರಳಿತು. ಬುಡ ಕಡಿದ ಬಳ್ಳಿಯಂತೆ ನೆರಕ್ಕುರುಳಿದಳು.

'ನೀವು ಮನಸ್ಸು ಮಾಡಿದರೆ ಬಾಕಿ ತೀರುವುದು ದೊಡ್ಡದಲ್ಲ....'

ಜಗತ್ತು ಅವಳ ಬೆಲೆ ಕಟ್ಟಿತ್ತು. ಬಾಕಿಯ ತೀರುವಳಿಗೆ ಅವಳ ಮೈಯ ಬೆಲೆ. ಬೆಲೆ ಕಟ್ಟಿದವನು ಹೋಟಲ ಮ್ಯಾನೇಜರ್!

ಸುತ್ತಿಸಿ, ಸುತ್ತಿಸಿ ಚಾಟಿಯಿಂದ ಜಡಿದಂತಾಗುತ್ತಿತ್ತು ಅವಳಿಗೆ....

ಸೂಳೆ! ಬೆಲೆವೆಣ್ಣು....

ಮನೆಯ ಮಾಲಕ.... ಹೋಟಲು ಮಾಲಕ....ಈ ಮ್ಯಾನೇಜರ್– ಎಲ್ಲರ ದೃಷ್ಟಿಯಲ್ಲೂ ತಾನು ಅಷ್ಟೇ....

ಜಗತ್ತನ್ನೇ ತನ್ನ ಕಾಲಡಿಯಲ್ಲಿ ತುಳಿದು ಹೊಸಕಿಬಿಡಬೇಕೆನ್ನುವಷ್ಟು ಸಿಟ್ಟು ಬಂತು....

ಸಿಟ್ಟು – ಅಸಹಾಯಕತೆ – ಒಂದರಲ್ಲೊಂದು ಕರಗಿ ಕಂಬನಿಯಾಗಿ ಹರಿಯಿತು. ಉರುಳಿದುದು ನೆಲವೆಂದೂ ಅರಿಯದೆ, ಬಾಣದ ಪೆಟ್ಟು ತಗಲಿದ ಹಕ್ಕಿಯಂತೆ ಹೊರಳಾಡಿದಳು....

ಅವಳು ಹಾಗೆ ಹೊರಳುತ್ತಿದ್ದಾಗಲೇ ಶಾಂತಾರಾಂ ಕೋಣೆಯನ್ನು ಪ್ರವೇಶಿಸಿ, ಅವಳನ್ನು ನೋಡಿದ. ಅವಳನ್ನು ನೋಡುತ್ತಿದ್ದ ಹಾಗೇ ಅವನ ಎದೆಯನ್ನು ಚೂರಿಯಿಂದ ಇರಿದಂತಾಯಿತು. ಅವಳೆಡೆಗೆ ಹಾರಿ, ಎತ್ತಿ ಎದೆಗೊತ್ತಿಕೊಂಡು ಮೈಯೆಲ್ಲಾ ಕಾತರವಾಗಿ ಕೇಳಿದ–

"ಏನಾಯಿತು ಪ್ರಭಾ?"

ಏನೆಂದು ಹೇಳಬೇಕು? ಹೇಗೆ ಬಾಯಾರ ಹೇಳಬೇಕು ಆ ಘೋರ ವನ್ನು....ಅವನ ಮೈಗೆ ಒರಗಿಯೂ ನಿಲ್ಲುವುದಾಗಲಿಲ್ಲ ಅವಳಿಗೆ. ಕುಂಬಾರನ ಚಕ್ರದಂತೆ ಸುತ್ತುತ್ತಿತ್ತು ಅವಳ ತಲೆ. ಕುರ್ಚಿಯ ಮೇಲೆ ಜಾರಿ ಕುಳಿತು, ಎರಡು ನಿಮಿಷ ಸುಮ್ಮನಿದ್ದು ಹೇಳಿದಳು –

"ಈ ಹೋಟಲ ಬಾಕಿಯ ಋಣ ತೀರಿಸಿದಿರಾ?"

"ಇಲ್ಲ. ಏನಾದರೂ ಆಡಬಾರದ ಮಾತಾಡಿದನೇ ಮ್ಯಾನೇಜರ್?"

"ಅದಾವುದನ್ನೂ ಕೇಳಬೇಡಿ. ಮೊದಲು ಬಾಕಿ ತೀರಿಸಿಬಿಡಿ."

"ಅದಕ್ಕೇ ಹಣ ಜೋಡಿಸಲು ಹೋಗಿದ್ದೆ."

"ಸಿಕ್ಕಿತೇ?"

"ಇಲ್ಲ. ಇನ್ನು ಎರಡು ಮೂರು ದಿನದಲ್ಲಿ ಸಿಗಬಹುದು."

"ಅಲ್ಲಿಯವರೆಗೂ ಇಲ್ಲಿರುವುದು ಸಾಧ್ಯವಿಲ್ಲ. ನಿಮ್ಮ ಬಳಿ ಹಣ ವಿಲ್ಲವೇ?"

ನಾಲಿಗೆಯನ್ನೇ ತುಂಡು ತುಂಡಾಗಿ ಕತ್ತರಿಸುವಷ್ಟು ಕಷ್ಟದಿಂದ ಹೇಳಿದ ಶಾಂತಾರಾಂ –

"ಇಲ್ಲ."

"ಹಣವಿಲ್ಲವೆಂದು ನನಗೇಕೆ ಹೇಳಲಿಲ್ಲ?"

ಸಿಟ್ಟಾಗಿ ಕೇಳಿದಳು ಪ್ರಭಾವತಿ. ಆ ಪ್ರಶ್ನೆಗೆ ಏನು ಉತ್ತರ ಕೊಡ ಬೇಕೆಂದು ತೋಚದೆ ಸುಮ್ಮನಿದ್ದ ಶಾಂತಾರಾಂ.

"ಏಕೆ ಹೇಳಲಿಲ್ಲ? ನಿಮಗೆ ನಾನೇನೂ ಸಂಬಂಧವಿಲ್ಲವೇ? ಜೊತೆ ಜೊತೆಯಾಗಿ ನಡೆಯಬೇಕೆಂದು ಬಂದವರಲ್ಲವೇ ನಾವು? ನನಗೇಕೆ ಹೇಳಲಿಲ್ಲ?"

"ಗಂಡಸಾಗಿ ಹಣದ ಕಷ್ಟ ಹೆಣ್ಣಿಗೆ ಹೇಳುವುದೇ?"

ಆ ಪ್ರಶ್ನೆ ಕೇಳಿ ಪ್ರಭಾವತಿಗೆ ಓಡುವ ಕುದುರೆಯನ್ನು ತಟಕ್ಕನೆ ಎಳೆದು ನಿಲ್ಲಿಸಿದಂತಾಯಿತು. ಒಂದು ಗಳಿಗೆ ತುಟಿ ಕಡಿದು ಸುಮ್ಮನಾಗಿ, ಬಳಿಕ ಶುಷ್ಕವಾದ ಧ್ವನಿಯಲ್ಲಿ ಹೇಳಿದಳು.

"ಈಗೇಕೆ ಆ ಮಾತು. ಮೊದಲು ಈ ಹೋಟಲು ಬಾಕಿ ತೀರಿಸಿ ಹೋಗೋಣ." ಎಂದು ಕೈಯಲ್ಲಿದ್ದ ಬಂಗಾರದ ಬಳೆಗಳನ್ನು ತೆಗೆದುಕೊಟ್ಟು,

" ಇವನ್ನು ಮಾರಿ, ಬಂದ ಹಣದಲ್ಲಿ ಈ ಋಣ ತೀರಿಸಿಬಿಡಿ. ಇನ್ನೊಂದು ದಿನವೂ ಇಲ್ಲಿರುವುದು ಬೇಡ." ಎಂದಳು.

ಎದುರಿನ ನೇಜಿನ ಮೇಲೆ ಪ್ರಭಾವತಿ ಇಟ್ಟ ಬಂಗಾರದ ಬಳೆಗಳನ್ನು ನೋಡಿ, ಶಾಂತಾರಾಂ ವಿಹ್ವಲನಾದ. ಎದೆಯೊಳಗೆ ಬಿರುಗಾಳಿ ಕೆದರಿದವ ನಂತೆ ಹತ್ತಾರು ಬಾರಿ ಕೋಣೆಯಲ್ಲಿ ಅತ್ತಿತ್ತ ಸುತ್ತಾಡಿ, ಕಿಟಕಿಯ ಬಳಿ ಹೋಗಿ ಆಗಸದತ್ತ ಮುಖಮಾಡಿ ನಿಂತುಕೊಂಡ. ಪ್ರಭಾವತಿಗೆ ಅವನ ಬೆನ್ನು ಮಾತ್ರವೇ ಕಾಣಿಸಿದರೂ, ಅವನನ್ನು ಯಾವುದೋ ಬೆಂಕಿ ಸುಡುತ್ತಿರುವಂತೆ ಅವಳೆದೆಗೆ ಭಾಸವಾಯಿತು. ಅವನ ಬಳಿಸಾರಿ, ಮೃದುವಾಗಿ ಅವನ ಮುಖ ವನ್ನು ತನ್ನತ್ತ ತಿರುಗಿಸಿಕೊಂಡಳು. ಮಿಂಚು ಸೋಕಿದಂತಾಯಿತು ಅವಳ ಮೈಗೆ. ಶಾಂತಾರಾಮನ ಕಣ್ಣಲ್ಲಿ ಹನಿಯೊಡೆದಿದ್ದವು.

" ಇದೇನು ಹುಚ್ಚು?"

ಹೂವಿನ ಸ್ಪರ್ಶದಷ್ಟು ಮೃದುವಾದ ಧ್ವನಿಯಲ್ಲಿ ಕೇಳಿದಳು ಪ್ರಭಾವತಿ.

" ಗಂಡಾಗಿ ಹುಟ್ಟಿ, ಒಲಿದು ಬಂದ ಹೆಣ್ಣಿನಿಂದ ಈ ತ್ಯಾಗ ಮಾಡಿಸ ಬೇಕಾಗುವುದೆಂದು ನಾನು ನಂಬಿರಲಿಲ್ಲ ಪ್ರಭಾ."

" ಒಲಿದು ಬಂದ ಹೆಣ್ಣು ಸ್ವೀಕಾರಕ್ಕೇ ಬರುವುದಿಲ್ಲ, ತ್ಯಾಗದ ಅಧಿಕಾರ ವನ್ನೂ ಪಡೆದು ಬಂದಿರುತ್ತಾಳೆ. ದಾಂಪತ್ಯವೆಂದರೆ ನಾನು, ಒಂದಕ್ಕೆ ಎಳೆಯು ವುದು, ಒಂದಕ್ಕೆ ಉಳುವುದು ನಿಗದಿಯಾದ ನೇಗಿಲು – ಎತ್ತು ಎಂದು ನಾನು ತಿಳಿದಿಲ್ಲ ಡಾರ್ಲಿಂಗ್. ದಾಂಪತ್ಯ ಎರಡು ಕಣ್ಣಿದ್ದಂತೆ. ಒಂದಕ್ಕೆ ನೋವಾದರೆ ಇನ್ನೊಂದು ಕಂಬನಿಗರೆಯುತ್ತದೆ; ಸಂತೋಷವಾದಾಗ ಎರಡೂ ಹೊಳೆಯು ತ್ತವೆ. ನಿನ್ನಲ್ಲಿ ನಾನು ಬಯಸಿ ಬಂದುದು ಆ ಸಮ ಭಾಗ್ಯವನ್ನು. ಆ ಸುಖ ಕೊಡುವುದಿಲ್ಲವೇ ನನಗೆ?"

" ಪ್ರಭಾ, ನಿನ್ನ ಪ್ರೇಮಕ್ಕೆ ಪಾತ್ರನಾಗುವುದೊಂದೇ ನಾನು ಬೇಡುವ ವರ"

ಎಂದ ಶಾಂತಾರಾಂ ಅವಳ ಮಾತಿನಿಂದ ತನ್ನೆದೆಯಲ್ಲಿ ಮೂಡಿ ಬಂದ ಮಧುರ ಭಾವದಲ್ಲಿ ಕರಗಿಹೋಗುತ್ತಾ.

ಸ್ವಲ್ಪ ಹೊತ್ತು ಇಬ್ಬರೂ ನೀರವವಾಗಿ, ಒಬ್ಬರ ಬಳಿಯಲ್ಲೊಬ್ಬರು ನಿಂತು ಮುಗಿಲನ್ನು ದಿಟ್ಟಿಸುತ್ತಿದ್ದರು. ಬಳಿಕ ಶಾಂತಾರಾಂ ಕೇಳಿದ:

" ಇಂದೇಕೆ ಅಷ್ಟು ಪ್ರಕ್ಷುಬ್ಧಳಾಗಿದ್ದೆ ಪ್ರಭಾ? ಏನಾಯಿತು?"

" ಕೇಳಿ ಮನಸ್ಸು ಕಹಿ ಮಾಡಿಕೊಳ್ಳಬೇಕೇ ?"

" ಏಕೋ – ಏನಾಯಿತೆಂದು ತಿಳಿಯದೆ ತೃಪ್ತಿಯಿಲ್ಲ. ನನ್ನಲ್ಲಿ ಹೇಳ ಲಾರೆಯಾ ?"

ಒಣಗಿದ ಧ್ವನಿಯಲ್ಲಿ ಪ್ರಭಾವತಿ ನಡೆದುದೆಲ್ಲವನ್ನೂ ಹೇಳಿದಳು. ಹೇಳ ಹೇಳುತ್ತಾ, ಮತ್ತೆ ಹಿಂದಿನ ದುಃಖ ಮರುಕಳಿಸಿ, ಧ್ವನಿಯ ಬಳ್ಳಿಯಲ್ಲಿ ಅಳುವಿನ ಕವಲು ಚಿಗುರಿ, ಮತ್ತೆ ಉದ್ವಿಗ್ನಳಾಗಿ ಹೇಳಿದಳು.

" ಹೊರಟುಹೋಗೋಣ, ನಡಿಯಿರಿ. ಇಲ್ಲಿರುವುದು ಬೇಡ."

ತನ್ನೆದೆಯೊಳಗೆ ನಡೆಯುತ್ತಿದ್ದ ಪ್ರಚಂಡ ಹೋರಾಟವನ್ನು ತೋರ ಗೊಡದೆ, ಹಲ್ಲು ಕಚ್ಚಿ ಕೇಳಿದ ಶಾಂತಾರಾಂ –

" ಎಲ್ಲಿಗೆ ಹೋಗುವುದು ಪ್ರಭಾ ?"

"ಎಲ್ಲಿಗಾದರೂ. ಎಲ್ಲಿಗಾದರೂ ಸರಿಯೆ. ದೂರ, ದೂರ, ಬಹು ದೂರ–ಈ ವಿಷವಾಯುವಿನಿಂದಾಚೆಗೆ, ಮನುಷ್ಯರು ಮನುಷ್ಯರಾಗಿ ಬಾಳಲು ಸಾಧ್ಯವಿರುವ ಎಡೆಗೆ; ಎಲ್ಲಿ ಗತಕಾಲದ ಭೂತ ತನ್ನ ಕರಾಳ ಛಾಯೆಯಿಂದ ನಮ್ಮ ಬಾಳನ್ನು ಕಲುಷಿತ ಮಾಡುವುದಿಲ್ಲವೋ ಅಲ್ಲಿಗೆ ಹೊರಟು ಹೋಗೋಣ. ಇನ್ನೊಂದು ಗಳಿಗೆಯೂ ಇಲ್ಲಿರುವುದು ಬೇಡ–ಇನ್ನಿಲ್ಲಿ ನಿಂತರೆ ನಾವು ಉಸಿರು ಕಟ್ಟಿ ಸಾಯುವುದು ಖಂಡಿತ. ಇದು ನಗರವಲ್ಲ, ಕಾಡು. ಇಲ್ಲಿರುವುದು ಮಾನವೀಯತೆಯಲ್ಲ, ಪಶುತ್ವ."

ಅವಳ ಮಾತುಗಳಲ್ಲಿ ಅಷ್ಟು ದಿನದ ಕಟು ಅನುಭವದ ಯಾತನೆ, ದುಃಖ, ನಿರಾಶೆ, ಅಸಹಾಯಕತೆ, ಬಳಲಿಕೆಗಳು ತೆರೆತೆರೆ ತೂಗಿದವು. ಮುಗಿಲಂಗಳದಲ್ಲಿ ತಣ್ಣಗೆ ಹೊಳೆಯುವ ನಕ್ಷತ್ರಗಳತ್ತ ನೋಡುತ್ತಾ ಹೇಳಿದಳು ಪ್ರಭಾವತಿ. ಅವನ ಬೆನ್ನನ್ನು ಒತ್ತಿ ನಿಂತ, ಅವನ ಕೆನ್ನೆ ಅವಳ ನೆತ್ತಿಯನ್ನು ನೇವರಿಸುತ್ತಿತ್ತು.

" ನಿಜ ಪ್ರಭಾ. ಹೊರಟುಹೋಗೋಣ "

ಎಂದ ಶಾಂತಾರಾಂ. ಅವನ ಕಣ್ಣಿಂದ ಹರಿದ ನೀರಿನಿಂದ ಅವಳ ನೆತ್ತಿ ತೇವವಾಯಿತು. ಹಾಗೇ ಕೈ ಎತ್ತಿ ಅವನ ಕೆನ್ನೆಯನ್ನು ನೇವರಿಸಿದಳು. ಅವಳ ಕಣ್ಣುಗಳಿಂದಲೂ ನೀರು ಹರಿಯುತ್ತಿತ್ತು.

ಮರುದಿನವೇ ಶಾಂತಾರಾಂ ಪ್ರಭಾವತಿಯ ಬಳೆಗಳನ್ನು ಮಾರಿ ಬಂದ ಹಣದಲ್ಲಿ ಹೋಟಲು ಬಾಕಿಯನ್ನು ತೀರಿಸಿದ. ಬಳಿಕ ಇಬ್ಬರೂ ಮುಂದೇನು ಮಾಡಬೇಕೆಂದು ಚಿಂತಿಸಿದರು. ಬಹಳ ಹೊತ್ತು ಚರ್ಚೆ ಮಾಡಿದ ಬಳಿಕ, ಪರಿಚಯದವರಾರೂ ಹೆಚ್ಚಿಗೆ ಇರದ ಬೊಂಬಾಯಿಗೆ ಹೋಗಿ ಮುಂದೆ ಅದೃಷ್ಟ ಪರೀಕ್ಷೆ ಮಾಡಬೇಕೆಂದು ನಿರ್ಧರಿಸಿದರು. ಹೋದ ಹೊಸದರಲ್ಲಿ ಅಲ್ಲಿಳಿಯಲು, ಶಾಂತಾರಾಮನ ಪರಿಚಯದವರೊಬ್ಬರಿದ್ದುದರಿಂದ ಅಲ್ಲಿ ಹೋಗಿ, ನಾಲ್ಕು ದಿನ ನಿಲ್ಲುವುದೆಂದು ಲೆಕ್ಕ ಹಾಕಿದರು. ಮಧ್ಯಾಹ್ನವೇ ಶಾಂತಾರಾಂ, ತನ್ನ ಮನೆಯ ಸಾಮಾನುಗಳನ್ನಿಟ್ಟಿದ್ದ ಮಿತ್ರನ ಮನೆಗೆ ಹೋಗಿ 'ಒಂದೆರಡು ತಿಂಗಳ ಕಾಲ ಅವು ನಿನ್ನಲ್ಲೇ ಇರಲಿ' ಎಂದು ಹೇಳಿ ಬಂದ. ಆದರೆ ಆತನಿಗೂ ಮುಂದೆ ತಾನೆಲ್ಲಿ ಹೋಗುವನೆಂದು ತಿಳಿಸಲಿಲ್ಲ.

ಆ ರಾತ್ರಿಯೇ ಪೂನಾದ ರೈಲಿನಲ್ಲಿ ಇಬ್ಬರೂ ಬೊಂಬಾಯಿಗೆ ಹೊರಟರು.

ರೈಲು ಬೆಂಗಳೂರಿನ ನಿಲ್ದಾಣವನ್ನು ಬಿಟ್ಟು ಕದಲಿತು. ಪ್ರಭಾವತಿ ಕಿಟಕಿಯಲ್ಲಿ ಮೊಗವಿಟ್ಟು ಹಿಂದು ಹಿಂದಾಗುತ್ತಿರುವ ಬೆಂಗಳೂರನ್ನೇ ನೋಡುತ್ತಾ ಇದ್ದಳು. ಮಹಾರಾಜಾ ಮಿಲ್, ಮಲ್ಲೇಶ್ವರದ ರೈಲ್ವೆ ನಿಲ್ದಾಣ, ತಾತಾ ವಿಜ್ಞಾನಮಂದಿರದ ಗೋಪುರದ ದೀಪ – ಅವಳ ಪರಿಚಯದ ಒಂದೊಂದು ಗುರುತೂ ಹತ್ತಿರಾಗಿ – ದೂರವಾಗಿ ಕತ್ತಲಲ್ಲಿ ಕರಗಿ ಹೋದವು.

ಪ್ರಭಾವತಿಯ ಹೃದಯದಾಳದಿಂದ ಮೂಡಿ ಬಂದ ನಿಟ್ಟುಸಿರೂ ಕತ್ತಲಲ್ಲಿ ಕರಗಿ ಹೋಯಿತು.

## ೧೩

ಬೊಂಬಾಯಿ!

ಜನಸ್ತೋಮ, ಭವ್ಯ ಭವನಗಳು, ಮುಗಿಲಿಗೆ ಹೊಗೆಯುಗುಳುತ್ತಾ ನಿಂತ ಕಾರ್ಖಾನೆಯ ಚಿಮಣಿಗಳು, ಬಿಡುವಿಲ್ಲದೆ ಓಡಾಡುವ ವಾಹನಗಳು –

ಮೊದಲ ಬಾರಿಗೆ ಆ ಪ್ರಚಂಡ ಪಟ್ಟಣವನ್ನು ನೋಡಿದಾಗ, ಪ್ರಭಾವತಿಗೆ ಕಗ್ಗತ್ತಲ ಗವಿಯಿಂದ, ಹೊಳ ಬೆಳಕಿನ ನಂದನಕ್ಕೆ ಬಂದಂತಾಯಿತು. ಬೊಂಬಾಯಿನ ಗಾಳಿಯಲ್ಲೇ ಹೊಸತನವನ್ನು ಕೊಡುವ ಜೀವಶಕ್ತಿ ಇದ್ದಂತಿತ್ತು. ಆ ಗಾಳಿಯನ್ನು ಎಳೆದೆಳೆದು ತನ್ನ ಎದೆಯಲ್ಲಿ ತುಂಬಿಕೊಂಡಳು. ಬೇಸರಿಕೆಯಿಂದ ಭಾರವಾದ ಅವಳ ಕಣ್ಣಲ್ಲಿ ಉತ್ಸಾಹ ಮತ್ತೆ ಥಳಥಳಿಸಿತು.

ಶಾಂತಾರಾಮುನನ್ನು ಹೊಸ ಬಾಳಿನ ಉತ್ಸಾಹದ ಗಾಳಿ ಆರಿಸುತ್ತಿತ್ತು.

ತನ್ನ ಗೆಳೆಯ ಸದಾನಂದನಿಗೆ, ಶಾಂತಾರಾಂ ಬೆಂಗಳೂರು ಬಿಡುವ ಮುನ್ನವೆ, ಇಂಥ ದಿನ, ಇಂಥ ರೈಲಿಗೆ ಬರುತ್ತೇನೆಂದು ಟೆಲಿಗ್ರಾಂ ಕಳಿಸಿದ್ದುದರಿಂದ, ಆತ ರೈಲ್ವೆ ನಿಲ್ದಾಣದಲ್ಲಿ ಕಾಯುತ್ತಿದ್ದ. ಅಕಸ್ಮಾತ್ತಾಗಿ ಅವನು ನಿಲ್ದಾಣಕ್ಕೆ ಬರದಿದ್ದರೆ, ಅವನ ಮನೆ ಹೇಗೆ ಪತ್ತೆ ಹಚ್ಚುವುದೆಂದು, ಶಾಂತಾರಾಮುನಿಗೆ ದೊಡ್ಡ ಚಿಂತೆಯಾಗಿತ್ತು. ನಿಲ್ದಾಣದಲ್ಲಿ ಗೆಳೆಯನ ಮುಖ ಕಂಡು, ಆ ಚಿಂತೆ ತಪ್ಪಿತು.

ಶಾಂತಾರಾಮುನೊಂದಿಗೆ ಗಾಡಿಯಿಂದ ಕೆಳಗಿಳಿದ ಪ್ರಭಾವತಿಯನ್ನು ಕಂಡು ಸದಾನಂದನಿಗೆ ಆಶ್ಚರ್ಯವಾಯಿತು. ಆದರೂ ಇವರು ಯಾರೆಂದು ಕೇಳದೆ, ಶಾಂತಾರಾಮುನ ಮುಖವನ್ನು ಮಿಟಮಿಟ ನೋಡಿದ. ಅವನ ಸಂದೇಹ ಶಾಂತಾರಾಮುನಿಗೆ ಅರಿವಾಯಿತು. ಇಬ್ಬರಿಗೂ ಪರಸ್ಪರ ಪರಿಚಯ ಮಾಡಿಕೊಟ್ಟ. ಪ್ರಭಾವತಿ ಶಾಂತಾರಾಮುನ ಪತ್ನಿ ಎಂಬುದನ್ನು ಕೇಳಿ, ಅವನಿಗೆ ಸಂತೋಷವಾಯಿತು.

“ ಇಷ್ಟು ಸಂತೋಷದ ವಿಚಾರ ನನಗೆ ತಿಳಿಸಲೇ ಇಲ್ಲವಲ್ಲಾ. ಅನ್ಯಾಯವಾಗಿ ಒಂದು ಒಳ್ಳೆ ಊಟ ತಪ್ಪಿಸಿಬಿಟ್ಟೆ. ಹ್ಞ. ಹೇಗೂ ಈಗ ಕೈಗೇ ಸಿಕ್ಕಂತಾಯಿತಲ್ಲ. ಅದರ ಸಿಹಿ ಈಗ ಕೊಡಿಸಿದರಾಯಿತು ” ಎಂದು, ಪ್ರಭಾವತಿಯತ್ತ ತಿರುಗಿ–

“ ಈ ಆನೆ ಪಳಗಿಸುವುದಕ್ಕೆ ಒಂದು ಅಂಕುಶ ಬೇಕಾಗಿತ್ತು. ನಿಮಗಷ್ಟು ಶಕ್ತಿ ಇದೆ ಎಂದೇ ನಾನು ಹಾರೈಸುತ್ತೇನೆ. ಈಗಲೇ ಹೇಳಿಬಿಡುತ್ತೇನೆ– ಹಾಂ– ಕಿವಿ ಹಿಂಡದಿದ್ದರೆ ಇದು ಓಡುವ ಯಂತ್ರವಲ್ಲ, ಎಚ್ಚರಿಕೆ” ಎಂದು ನಗೆಯಾಡಿದ. ಅಪರಿಚಿತನಾದರೂ, ಆತನು ತನ್ನಲ್ಲಿ ತೋರಿದ ಆದರವನ್ನು ಕಂಡು ಪ್ರಭಾವತಿಗೂ ಆತನ ವಿಷಯದಲ್ಲಿ ವಿಶ್ವಾಸ ಮೂಡಿತು ನಗು ನಗುತ್ತಲೇ–

“ ನನ್ನಲ್ಲಿ ನಂಬಿಕೆ ಇಡಿ. ನಿಮ್ಮ ಇಚ್ಛೆಯನ್ನು ಖಂಡಿತವಾಗಿಯೂ ಪೂರೈಸುತ್ತೇನೆ” ಎಂದಳು.

“ ಮೊದಲು ನನ್ನ ಇಚ್ಛೆ ಪೂರೈಸಿ, ಬಳಿಕ ನಿಮ್ಮ ಇಚ್ಛೆ ಬಂದಂತೆ ಮಾಡಿ ” – ಶಾಂತಾರಾಂ ಹೇಳಿದ.

“ ಏನು ?”

"ಎಲ್ಲಾದರೂ ಅಷ್ಟು ಕಾಫಿ ಕುಡಿಯೋಣ. ಆಮೇಲೆ ಬೇಕಾದ್ದು ಮಾಡಿ."

"ಕಾಫಿ! ಇದು ಬೊಂಬಾಯಿ. ಇಲ್ಲಿ ಸಿಕ್ಕುವುದು ಚಹಾ. ಕಾಫಿ ಬೇಕೆಂದರೆ ಮನೆಗೆ ಹೋಗುವವರೆಗೂ ಕಾಯಬೇಕು. ಇಲ್ಲವೇ ಇಂಡಿಯನ್ ಕಾಫಿ ಬಾರ್‌ಗೆ ಹೋಗಬೇಕು. ಸುಮ್ಮನೆ ಸುತ್ತಾಗುತ್ತದೆ." – ಸದಾನಂದ ಹೇಳಿದ.

"ಬೊಂಬಾಯಿ ಇಷ್ಟು ಕೆಟ್ಟ ಊರೆಂದು ತಿಳಿದಿರಲಿಲ್ಲ. ಮತ್ತೆ ಬಂದದ್ದಾಯಿತು. ಮಾಡುವುದೇನು. ಸುತ್ತಾದರಾಯಿತು – ಕಾಫಿ ಬಾರ್‌ಗೆ ಹೋಗಿಯೇ ಹೋಗೋಣ."

ಎಂದು ಪ್ರಭಾವತಿಯೂ ಶಾಂತಾರಾಮನ ಸಲಹೆಯನ್ನು ಅನುಮೋದಿಸಿದಳು.

"ಒಂದು ವಿಷಯದಲ್ಲಾದರೂ ನಿಮ್ಮಲ್ಲಿ ಪರಸ್ಪರ ಏಕಮತವಿದೆ ಎಂದು ಗೊತ್ತಾಯಿತು. ಬಹಳ ಸಂತೋಷ. ಈಗಿನ ಗಂಡ ಹೆಂಡಿರಲ್ಲಿ ಅದೇ ಅಪರೂಪ"

ಎಂದು, ನಗುತ್ತಾ ಸದಾನಂದ ಟ್ಯಾಕ್ಸಿಯಲ್ಲಿ ಸಾಮಾನುಗಳನ್ನಿಟ್ಟು, ಡ್ರೈವರಿಗೆ ಕಾಫಿ ಬಾರ್‌ಗೆ ಟ್ಯಾಕ್ಸಿ ಬಿಡಲು ಹೇಳಿದ.

ನಿಧಾನವಾಗಿ, ನಗೆಯಾಡುತ್ತಾ ಕಾಫಿ ಕುಡಿದು, ಬಳಿಕ ಗಿರಿಗಾಂನಲ್ಲಿದ್ದ ಸದಾನಂದನ ಮನೆ ಸೇರಿದರು.

ಸದಾನಂದನ ಮನೆಯನ್ನು ನೋಡಿ, ಅದುವರೆಗೂ ಬೊಂಬಾಯಿಗೆ ಬರದ ಪ್ರಭಾವತಿಗೆ ಆಶ್ಚರ್ಯವಾಯಿತು. ಐದಂತಸ್ತಿನ ಮನೆಯ ಮೂರನೆಯ ಅಂತಸ್ತಿನಲ್ಲಿತ್ತು ಅವನ ಮನೆ. ಮೆಟ್ಟಲುಗಳನ್ನು ಹತ್ತಿ 'ಫ್ಲ್ಯಾಟ್'ನ ಬಾಗಿಲ ಬಳಿ ತಲಪಿದಾಗ, "ಇದೇ ನನ್ನ ಪಾರಿವಾಳದ ಗೂಡು" ಎಂದು ಹೇಳಿ ಬಾಗಿಲ ಬದಿಯ ವಿದ್ಯುದ್ – ಗಂಟೆಯನ್ನು ಒತ್ತಿದ. ಇವರು ಬರುವುದನ್ನೇ ನಿರೀಕ್ಷಿಸುತ್ತಿದ್ದ ಸದಾನಂದನ ಪತ್ನಿ ಗಂಟೆಯ ಕರೆ ಕೇಳುತ್ತಿದ್ದ ಹಾಗೇ ಬಂದು ಬಾಗಿಲು ತೆಗೆದಳು. ಒಳಗೆ ಹೋಗಿ ಕುಳಿತ ಮೇಲೆ ಸದಾನಂದ ತನ್ನ ಪತ್ನಿಗೆ ಇಬ್ಬರ ಪರಿಚಯವನ್ನೂ ಮಾಡಿಕೊಟ್ಟ,

ಮತ್ತೊಮ್ಮೆ ಕಾಫಿ ತಿಂಡಿಯ ಉಪಚಾರವಾಯಿತು.

"ಈಗ ಸ್ನಾನ ಮುಗಿಸಿ ಊಟ ಮಾಡಿ ಮಲಗಿಬಿಡಿ. ರೈಲಿನಲ್ಲಿ ನಿದ್ರೆ ಆಗಿರಲಿಕ್ಕಿಲ್ಲ, ಸಂಜೆಗೆ ಎಲ್ಲಾದರೂ ಹೋಗೋಣ" ಎಂದ ಸದಾನಂದ.

"ಎಲ್ಲಿಗೆ ಹೋಗುವುದು?"

"ಸಿನಿಮಾಕ್ಕೆ, ಪೇಟೆ ತಿರುಗಲಿಕ್ಕೆ, ಬೀಚ್‌ಗೆ–ಎಲ್ಲಿಗೆ ಬೇಕಾದರಲ್ಲಿಗೆ."

"ಸಿನಿಮಾ, ಪೇಟೆ ಎಲ್ಲ ಊರಿನಲ್ಲೂ ನೋಡಿದ್ದಾಗಿದೆ. ಬೀಚಿಗೇ ಹೋಗೋಣ" ಎಂದಳು, ಅದುವರೆಗೂ ಕಡಲನ್ನು ಕಾಣದ ಪ್ರಭಾವತಿ.

"ಆಯಿತು. ಹಾಗೇ ಆಗಲಿ, ನೀವು ಸಮುದ್ರ ಕಾಣದ ಜನ."

ಪ್ರಭಾವತಿ ಸದಾನಂದನ ವಿಶ್ವಾಸಪೂರ್ಣ ನಡತೆಯನ್ನು ಕಂಡು ಮೆಚ್ಚಿ ಕೊಂಡಿದ್ದಳು. ಅವನ ಹೆಂಡತಿ ಲೀಲಾವತಿಯೂ ಅಷ್ಟೇ ಒಳ್ಳೆಯವಳೆಂದು ಕಂಡುಹಿಡಿಯಲು ತಡವಾಗಲಿಲ್ಲ.

ಲೀಲಾವತಿ ಗಂಡನ ಹಾಗೇ ನಗೆಮೊಗದ ಹುಡುಗಿ. ಕನ್ನಡವಾಡುವ ಜನರೇ ಅಪರೂಪವಾದ ಅವಳಿಗೆ ಅವರು ಬಂದುದು ನೆಂಟರು ಬಂದುದ ಕ್ಕಿಂತಲೂ ಹೆಚ್ಚಾಗಿತ್ತು. ಒಂದೆರಡು ಗಂಟೆಗಳಲ್ಲೇ ಬೊಂಬಾಯಿನ ಜೀವನದ ರೀತಿ–ನೀತಿಗಳನ್ನೆಲ್ಲಾ ಪ್ರಭಾವತಿಯೊಂದಿಗೆ ಹೇಳಿಕೊಂಡಳು; ತನ್ನ ಗಂಡನ ಗುಣ ದೋಷಗಳನ್ನು ಬಿತ್ತರಿಸಿದಳು; ನಿರಾಯಾಸವಾಗಿ ಗಾಳಿಯಲ್ಲಿ ಬೆರೆ ಯುವ ಪರಿಮಳದಂತೆ, ಪ್ರಭಾವತಿಯ ಹೃದಯದಲ್ಲಿ ಬೆರೆತು ಹೋದಳು.

ತಂದೆಯ ಮನೆ ಬಿಟ್ಟು ಬಂದ ದಿನದಿಂದ ಅಂದಿನವರೆಗಿನ ಉರಿಬಾಳಿನ ಅನುಭವದಿಂದ, ಈ ಬಗೆಯ ವಿಶ್ವಾಸ, ಸ್ನೇಹ, ಅಂತಃಕರಣ, ನಿರ್ಮಲವಾದ ನಗು ಇಲ್ಲವೇ ಇಲ್ಲವೇನೋ ಎಂದುಕೊಂಡಿದ್ದ ಪ್ರಭಾವತಿಗೆ ಅವರ ಹೃದಯ ಸ್ಪರ್ಶಿಯಾದ ಪ್ರೀತಿಯನ್ನು ಕಂಡು ಎದೆ ತುಂಬಿ ಬಂತು. ಆ ನಿರ್ವ್ಯಾಜ ಪ್ರೇಮದ ಕ್ಷೀರಸಾಗರದಲ್ಲಿ ಅವಳೂ ಸಕ್ಕರೆಯಂತೆ ಕರಗಿ ಹೋದಳು.

ಆ ದಿನ ಮೊದಲ ಬಾರಿಗೆ ಕಡಲನ್ನು ಕಂಡಳು ಪ್ರಭಾವತಿ. ನೋಡಿ ಮುಗ್ಧಳಾಗಿ ಹೋದಳು.

ದಿಗಂತದಂಚಿನವರೆಗೂ ಹರಡಿ, ಅಚೆ ಎಲ್ಲೋ ಕರಗಿ ಹೋದ ವಿಸ್ತಾರ ವಾದ ಕಡಲಿನ ಶಾಂತ ವಕ್ಷಸ್ಥಲದ ಮೇಲೆ, ಸಂಜೆಯ ಸೂರ್ಯನ ಹೊಂಬಣ್ಣದ ಮಿರುಗುಹೊತ್ತು ಮಿಂಚಿನ ಮರಿಗಳಂತೆ ಕುಣಿವ ಹಸಿರು–ನೀಲಿಯ ಬಣ್ಣದ ಅಲೆಗಳ ಆಟವನ್ನು ನೋಡಿದಷ್ಟೂ ಅವಳಿಗೆ ತಣಿಯಲಿಲ್ಲ. ಮರಳಿನ ಮೇಲೆ ಓಡಿ, ಅವಳತ್ತ ಹರಿದು ಬಂದ ಅಲೆಯಲ್ಲಿ ಕಾಲು ತೋಯಿಸಿ, ಅಲೆ ಹಿಂದೆ

ಸರಿದಾಗ ಕಾಲಡಿಯ ಮರಳೂ ಸರಿದು ಬೀಳುವಂತಾದಾಗ ಭೀತಿಗೊಂಡು, ಮರುಗಳಿಗೆಯೇ ನಕ್ಕು ಕೇಕೆ ಹಾಕಿದಳು. ಸಾಗರದಲೆಗಳ ಗಂಭೀರ ಘೋಷ ವನ್ನಾಲಿಸುತ್ತಾ ಮೈಮರೆತಳು.

"ಓ! ಇದೆಷ್ಟು ಸುಂದರ" ಎಂದು ಬಣ್ಣಿಸಹೋಗಿ, ಮಾತು ಸೋತು ಮೂಕಳಾಗಿ, ಕಣ್ಣರಳಿಸಿ, ಸಮುದ್ರದ ಭವ್ಯ ಸೌಂದರ್ಯ ವೈಭವವನ್ನು ನೋಡುತ್ತಾ ನಿಂತಳು.

"ನಿಮಗಿದು ಇಷ್ಟು ಮೆಚ್ಚಿಗೆಯಾದರೆ, ಊರಿಗೆ ಮರಳುವಾಗ ಸಣ್ಣ ಪಾರ್ಸಲು ಮಾಡಿ ಕೊಡುತ್ತೇನೆ. ತೆಗೆದುಕೊಂಡು ಹೋಗಿ" ಎಂದಳು ಲೀಲಾವತಿ ನಗುತ್ತಾ.

ಅವಳ ಮಾತು ಕೇಳಿ, ಬೆಂಗಳೂರಿನ ನೆನಪು ಒಂದು ಗಳಿಗೆ ಮುಳ್ಳಿ ನಂತೆ ಇರಿಯಿತು. ಮರುಗಳಿಗೆಯೇ ಆ ಭಾವನೆಯನ್ನು ಹುಟ್ಟಿನಲ್ಲೇ ಹೊಸಗಿಬಿಟ್ಟು—

"ಇನ್ನು ಇದರ ಬಳಿ ಬಿಟ್ಟು ಹೋದರೆ ತಾನೇ ಆ ಮಾತು" ಎಂದಳು, ತಾನೂ ಉತ್ಸಾಹದ ನಗೆ ನಗುತ್ತಾ.

ಕಡಲ ಮೇಲೆ ಹಾದು ಬಂದ ಗಾಳಿ ಅವಳಿಗೆ, ಅವಳು ಬಯಸಿದ ಬಿಡುಗಡೆಯನ್ನು ಕೊಟ್ಟಂತಾಗಿತ್ತು.

ಬೇಲ್‌ಪುರಿ. ಗರಂ ಚನೆ ತಿಂದು, ಕಬ್ಬಿನ ಹಾಲು ಕುಡಿದು, ಮಕ್ಕಳ ಹಾಗೆ ಬಲೂನ್‌ಗಳನ್ನು ಕೊಂಡು ಗಾಳಿಯಲ್ಲಿ ಆಡಿಸಿ, ಸೂರ್ಯಾಸ್ತವಾಗುವ ವರೆಗೂ ಕಾಲ ಕಳೆದರು.

ಅಲ್ಲಿಯ ಸೂರ್ಯಾಸ್ತದ ಸೊಬಗನ್ನು ನೋಡಿಯಂತೂ ಪ್ರಭಾವತಿಗೆ ಹುಚ್ಚೇ ಹಿಡಿದಂತಾಯಿತು. ಬಂಗಾರದ ಮುದ್ದೆಯಂತೆ ದಿಗಂತದಂಚಿನಲ್ಲಿ ನಿಧಾನವಾಗಿ ಕರಗಿ, ಕಡಲನ್ನು ಬೆಂಕಿಯ ನೀರಾಗಿ ಮಾಡಿದ ಅಸ್ತಮಯ ಸಮಯದ ಸೌಂದರ್ಯ ಅವಳನ್ನು ಪರವಶಳನ್ನಾಗಿ ಮಾಡಿತು. ಮಾತ ನಾಡುವುದೂ ಮರೆತುಹೋಯಿತು ಅವಳಿಗೆ, ಮತ್ತೆ ಕಡಲು ಕಪ್ಪಾಗುವ ವರೆಗೂ.

ಮಬ್ಬು ಕವಿದ ಮೇಲೆ ಎಲ್ಲರೂ ಅಲ್ಲಿಂದೆದ್ದು, ಹತ್ತಿರದಲ್ಲೇ ಇದ್ದ ಇರಾನಿ ರೆಸ್ಟೋರಾಗೆ ಹೋಗಿ ಕೇಕ್, ಬಿಸ್ಕತ್, ಚಾ ಕುಡಿದರು. ಚಾ

ಕುಡಿಯುವಾಗ ಅದರ ಅಭ್ಯಾಸವಿಲ್ಲದ ಪ್ರಭಾವತಿ ಮುಖ ಮುರಿದಳು. ಅದನ್ನು ಕಂಡು ಸದಾನಂದ--

"ರೋಮಿನಲ್ಲಿದ್ದಾಗ ರೋಮನರಾಗಬೇಕು, ಅಲ್ಲವೇ?" ಎಂದ.

"ಹಾಗೇನೋ ಗಾದೆ ಇದೆ, ನಿಜ. ಆದರೆ 'ಬೊಂಬಾಯಿಗೆ ಬಂದು ಚಾ ಕುಡಿ' ಎಂದೇನೂ ಗಾದೆ ಇಲ್ಲವಲ್ಲ" ಎಂದಳು ಪ್ರಭಾವತಿ ನಗುತ್ತಾ.

"ಹಾಗೆಂದು ಗಾದೆಯಿಲ್ಲ. ಆದರೆ ಇಲ್ಲಿಯ ಚಪಾತಿ ಚಾ ಕುಡಿಯದೆ ಅರಗುವುದಿಲ್ಲ ಎನ್ನುತ್ತದೆ." ಲೀಲಾವತಿ ಹೇಳಿದಳು.

"ದೋಸೆಗೆ ಕಾಫಿ ಇದ್ದ ಹಾಗೆ, ಚಪಾತಿಗೆ ಚಾ ಒಲಿದು ಬಂದ ಹೆಂಡತಿಯೇನೋ" ಶಾಂತಾರಾಮನೂ ನಡುವೆ ಮಾತು ಬೆರಸಿದ.

"ಛೆ, ಛೆ, ಸದಾನಂದ - ಲೀಲಾವತಿ ಇದ್ದ ಹಾಗೆ ಚಾ - ಚಪಾತಿ"

ಸದಾನಂದ ಹೇಳಿದ. ಎಲ್ಲರೂ ನಕ್ಕರು, ಅವನ ಪ್ರಾಸಪೂರ್ಣ ಮಾತನ್ನು ಕೇಳಿ.

"ಇರಬೇಕು. ನಿಮ್ಮ ಹಾಗಿದ್ದದ್ದಕ್ಕೇ ಈ ಚಾ ಕುಡಿಯಲು ಇಷ್ಟು ಕಷ್ಟವಾಗುತ್ತದೆ" ಎಂದು ಗಂಡನ ಮೇಲೆ ವಾಗ್ಬಾಣವೆಸೆದಳು.

"ಓಹೋ, ಇಷ್ಟು ಮಾತಾಡುವುದಕ್ಕೇ ಇರಬೇಕು, ಚಪಾತಿ ಅಷ್ಟು ತಟ್ಟಿಸಿಕೊಂಡು, ಒಲೆಯ ಮೇಲೆ ಬೆಯ್ಯುವುದು" ಮಾತಿಗೆ ಮಾತು ಮುಟ್ಟಿಸಿದ ಸದಾನಂದ.

"ಇದು ಬೇಯಲಿ. ಅದು ಕುದಿಯಲಿ – ನಮಗೇನೋ ಎರಡರಿಂದಲೂ ಸಂತೋಷವೇ" ಪ್ರಭಾವತಿ ಹೇಳಿದಳು. ಮತ್ತೊಮ್ಮೆ ಎಲ್ಲರೂ ನಕ್ಕರು.

ಚಾ ಕುಡಿದುದಾದಮೇಲೆ, ಹೋಟಲಿನ ಹಣ ಕೊಟ್ಟು ಹೊರಬಿದ್ದು ಮುಂದೇನು ಮಾಡಬೇಕೆಂದು ಯೋಚಿಸಿದರು.

"ಹೇಗೂ ಬಂದದ್ದಾಗಿದೆ. ರಾತ್ರಿಯ ಅಡಿಗೆಯನ್ನೂ ಮಾಡಿಯಾಗಿದೆ. ಮಲಬಾರ್ ಹಿಲ್ಲಿಗೆ ಹೋಗಿ, ಅಲ್ಲಿಯ ಉದ್ಯಾನದಲ್ಲಷ್ಟು ಹೊತ್ತು ಕಳೆದು ಹೋಗೋಣ" ಎಂದಳು ಲೀಲಾವತಿ. ಎಲ್ಲರಿಗೂ ಮನೆಗೆ ಹಿಂದಿರುಗುವುದಕ್ಕಿಂತ ಅಲೆಯುವುದೇ ಬೇಕಾಗಿದ್ದುದರಿಂದ, ಅವಳ ಸೂಚನೆಗೆ ಯಾರೂ ಇದಿರಾಡಲಿಲ್ಲ.

ಮಲಬಾರ್ ಹಿಲ್ಲಿಗೆ ಹೋಗುವ ಬಸ್ಸು ಹಿಡಿದು ಹೊರಟರು. ಕಡಲ ದಂಡೆಯಲ್ಲಿ ಏರಿ ಇಳಿದು ಹರಿವ ದಾರಿಯಲ್ಲಿ ಬಸ್ಸು ಓಡಿದಾಗ, ಬಸ್ಸಿನಂತೇ

ಪ್ರಭಾವತಿಯ ಹೃದಯವೂ ಸಂತೋಷದಲ್ಲಿ ತೂಗುತ್ತಿತ್ತು. ಅಲ್ಲಿಯ ಪ್ರಶಾಂತ ವಾತಾವರಣ, ಹಿತವಾದ ಗಾಳಿ, ರಾಜಭವನಗಳು – ಒಂದೊಂದೂ ಅವಳ ಮನ ಸೆಳೆದವು.

ಮಲಬಾರ್ ಹಿಲ್ಲಿನ ಉದ್ಯಾನದಲ್ಲಿ ಪ್ರಭಾವತಿ ಮತ್ತೊಮ್ಮೆ ಮಗುವಾದಳು.

ಉದ್ಯಾನದಲ್ಲಷ್ಟು ಹೊತ್ತು ಸುತ್ತಾಡಿದ ಬಳಿಕ, ಸದಾನಂದ ಹೇಳಿದ –

“ಕಾಫಿ ಕಾಫಿ ಎಂದು ಕನವರಿಸುತ್ತಿದ್ದಿರಲ್ಲ, ಇಲ್ಲಿ ಬನ್ನಿ, ಕಾಫಿ ಕೊಡಿಸುತ್ತೇನೆ” ಎಂದು ಎಲ್ಲರನ್ನೂ ಉದ್ಯಾನದ ಸಮೀಪದ ಕಂದರದಲ್ಲಿದ್ದ ‘ತಾಜ್’ ಹೋಟಲಿಗೆ ಕರೆದೊಯ್ದ.

ಹೋಟಲಿನ ಬಿಸಿಲು ಮಾಳಿಗೆಯ ಮೇಲೆ ಕುಳಿತು “ಈಗ ನೋಡಿ ಕಡಲ ಸೌಂದರ್ಯವನ್ನು” ಎಂದ ಸದಾನಂದ.

ಪ್ರಭಾವತಿ ನೋಡಿದಳು, ನೋಡೇ ನೋಡಿದಳು, ಹೃದಯದಲ್ಲಿ ಎಳೆದು ತುಂಬಿಕೊಳ್ಳುವಂತೆ ನೋಡಿದಳು – ಯಾವುದೋ ಅಪೂರ್ವ ಸುಂದರ ಸ್ವಪ್ನ ಕಂಡಂತಾಯಿತು ಅವಳಿಗೆ, ಅಲ್ಲಿಂದ ಕಂಡ ಕಡಲ ದೃಶ್ಯ.

ಇರುಳ ತಣ್ಣಗತ್ತಲಿನಲ್ಲಿ, ಕಪ್ಪಾದ ಕಡಲಾಳದಲ್ಲಿ, ನಗರದ ಮ್ಯಾರೀನ್ ಡ್ರೈವ್‌ನ ಭವ್ಯ ಭವನಗಳ ಹತ್ತಾರು ಬಣ್ಣದ ಲಕ್ಷಾಂತರ ವಿದ್ಯುದ್ದೀಪಗಳು ನಿಶ್ಚಲವಾಗಿ ಪ್ರತಿಬಿಂಬಿಸಿ, ಬೀಸಿ ಬಂದ ತಂಗಾಳಿಯಲ್ಲಿ ಅನಂತ ಶಾಂತಿಯ ಅಮೃತಪಾನ ಮಾಡಿಸುತ್ತಿತ್ತು. ಪ್ರಭಾವತಿಯ ಹೃದಯದಲ್ಲೂ ಶಾಂತಿ ಮೂಡಿ, ಕ್ರಮೇಣ ಅವಳ ಮೈ – ಮನಸುಗಳನ್ನೆಲ್ಲಾ ವ್ಯಾಪಿಸಿ, ಕಡಲಾಳದ ತಂಪು, ಶಾಂತಿ, ಅವಳ ಮೈಯಲ್ಲಿ ಮನೆ ಮಾಡಿತು. ಅದನ್ನು ನೋಡ ನೋಡುತ್ತಾ ಸುತ್ತಲ ಜಗತ್ತೇ ಅವಳಿಗೆ ಮರೆತುಹೋಯಿತು. ಪರಿಮಳ ಪೂರ್ಣ ತಂಪುಗತ್ತಲು ಅವಳ ಕಣ್ಣನ್ನು ತುಂಬಿತು. ಅರಿವಿಲ್ಲದೆಯೇ ಪಕ್ಕದಲ್ಲಿ ಕುಳಿತ ಶಾಂತಾರಾಮನ ಎದೆಯ ಮೇಲೆ ತಲೆಯೊರಗಿಸಿ ತೃಪ್ತಿಯ ನಿಟ್ಟುಸಿರು ಬಿಟ್ಟಳು. ಆಟವಾಡಿ ದಣಿದು ಬಂದ ಮಗು, ತಾಯ ತೊಡೆಯ ಮೇಲೆ ನಿಶ್ಚಿಂತೆಯಿಂದ ನಿದ್ರಿಸಿದಂತಿತ್ತು.

“ಎಷ್ಟು ಹಾಯಾಗಿದೆ!”

ತನ್ನೆದೆಯನ್ನು ತುಂಬಿದ ಶಾಂತಿಯ ಮಾದಕತೆಯಿಂದ ಭಾರವಾದ ಧ್ವನಿಯಲ್ಲಿ ಎಳೆದು ಮೃದುವಾಗಿ ಹೇಳಿದಳು ಪ್ರಭಾವತಿ. ಶಾಂತಾರಾಂ

ಮಾತನಾಡದೆ, ಮೃದುವಾಗಿ ಅವಳ ಕೆನ್ನೆಯನ್ನು ನೇವರಿಸಿ ಬೆರಳುಗಳಿಂದ ಅವಳ ಹಣೆಯನ್ನು ತಟ್ಟಿದ.

ಮಾಣಿ ತಂದಿಟ್ಟ ಕಾಫಿ ಮೇಜಿನ ಮೇಲೆ ಆರುತ್ತಿತ್ತು. ಸದಾನಂದ ಅದನ್ನು ಜ್ಞಾಪಿಸಲು ಯತ್ನಿಸಿದ. ಲೀಲಾವತಿ 'ಷ್' ಎಂದು ಅವನನ್ನು ಸುಮ್ಮನಿರಿಸಿದಳು.

ಹತ್ತು ನಿಮಿಷವಾದ ಮೇಲೆ ಪ್ರಭಾವತಿಗೆ ಎಚ್ಚರವಾಯಿತು. ಕಡಲ ನಾಳದಿಂದ ಹಿಂದಿರುಗಿ ಬರುವುದಿಲ್ಲವೆನ್ನುವ ಕಣ್ಣ ನೋಟವನ್ನು ಬಲವಂತ ದಿಂದ ಕಿತ್ತು, ಮೇಜಿನ ಮೇಲಿದ್ದ ಕಾಫಿಯನ್ನು ನೋಡಿ –

"ಓ! ಕಾಫಿಯಾಗಲೇ ಬಂದಿದೆ." ಎಂದಳು.

"ಎಚ್ಚರವಾಯಿತೇ?" ಎಂದಳು ಲೀಲಾವತಿ, ಅವಳ ಕಣ್ಣುಗಳಲ್ಲಿ ನೋಡಿ ಮುಗುಳ್ನಗೆ ನಗುತ್ತಾ. ಅದನ್ನು ಕೇಳಿ ಏಕೋ ಪ್ರಭಾವತಿಗೆ, ನಲ್ಲನಿಗೆ ಚುಂಬನ ಕೊಡುವ ಮುಗ್ಧ ನಲ್ಲೆಯನ್ನು ಪರರು ಕಂಡಾಗ ಆಗುವಂಥ ನಾಚಿಕೆ ಯಾಗಿ ಮೈ ಪುಲಕಿತವಾಯಿತು. ಜೀವನದಲ್ಲಿ ಎಂದೂ ಅವಳು ಅನುಭವಿಸದಂಥ ಮಧುರ ಅನುಭವ ಅದು. ಆ ಮುಗುಳ್ನಗೆಗೆ ಮಂದಹಾಸದ ಪ್ರತ್ಯುತ್ತರ ವಿತ್ತಳು. ಮನಸಿನ ಆ ಮೋಡಿ ಮಾತಾಡಿದರೆ ಎಲ್ಲಿ ಭಂಗವಾಗುವುದೋ ಎಂಬಂತಿತ್ತು ಅವಳ ಸ್ಥಿತಿ.

ಬಸ್ಸಿಗೆ ವೇಳೆಯಾದುದರಿಂದ ಬೇಗ ಬೇಗ ಕಾಫಿ ಮುಗಿಸಿ, ಉದ್ಯಾನದ ಎದುರಿನ ಬಸ್ ನಿಲ್ದಾಣಕ್ಕೆ ಬಂದು ಬಸ್ ಹತ್ತಿದರು.

ಮನೆಗೆ ಬಂದು ತಲುಪುವವರೆಗೂ ಪ್ರಭಾವತಿಯ ಮನಸಿನಲ್ಲಿ ಆ ಕನಸು ತೂಗುತ್ತಲೇ ಇತ್ತು.

ಊಟ ಮುಗಿಸಿ ಮಲಗಿದಾಗ, ಎಲ್ಲೋ ದೂರದಲ್ಲಿ ಓಡುವ ಟ್ರಾಂ, ಬಸ್ಸುಗಳ ಕ್ಷೀಣ ಸದ್ದನ್ನಾಲಿಸುತ್ತಾ, ಶಾಂತಾರಾಮನ ಎದೆಯೊಳಗೆ ಹುದುಗಿ ಕೊಳ್ಳುತ್ತಾ ಹೇಳಿದಳು ಪ್ರಭಾವತಿ –

"ಇಂದೇ ನಮ್ಮ ಹೊಸ ಬಾಳಿನ ವಸಂತದ ಮೊದಲ ದಿನ."

ಹೂವಿನಂತೆ ಅರಳಿದ ಅವಳ ತುಟಿಗೆ ಮುತ್ತಿಟ್ಟು ಶಾಂತಾರಾಂ ಅವಳ ಮಾತಿಗೆ ತನ್ನ ಸಮ್ಮತಿ ಸೂಚಿಸಿದ. ಅವಳ ಬೆಚ್ಚನೆ ತೋಳು ಅವನ ಎದೆ ಯನ್ನು ಸುತ್ತಿ ಬಿಗಿಯಿತು.

# ೧೪

ಎರಡು ಮೂರು ದಿನ ಹೀಗೆ ಊರು ಸುತ್ತುವುದು, ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ಕಳೆಯಿತು. ಸದಾನಂದ-ಲೀಲಾವತಿಯರೇನೋ ಇವರಿಬ್ಬರೂ ಮದುವೆಯಾದ ಬಳಿಕ ನಾಲ್ಕು ದಿನ ಬೊಂಬಾಯಿನಲ್ಲಿದ್ದು ಸಂತೋಷಪಡಲು ಬಂದವರೆಂದೇ ತಿಳಿದಿದ್ದರು. ಅವರನ್ನು ದಿನಕ್ಕೊಂದು ಬಗೆಯಲ್ಲಿ ಸಂತೋಷಪಡಿಸಲು ಯತ್ನಿಸುತ್ತಿದ್ದರು. ಆದರೆ ಹೀಗೇ ಎಷ್ಟು ದಿನ ಕಳೆಯಲು ಸಾಧ್ಯ? ಎಷ್ಟು ದಿನ ಅವರಿಂದ ನಿಜಪರಿಸ್ಥಿತಿಯನ್ನು ಮುಚ್ಚಿಡಲಾದೀತು? ಹೊಸ ಊರಿಗೆ ಬಂದಿಳಿದ ಉತ್ಸಾಹದ ಉಕ್ಕು ಆರಿದ ಮೇಲೆ, ಅದುವರೆಗೂ ಕಣ್ಣುಮರೆಯಾಗಿದ್ದ ವಾಸ್ತವ ಪರಿಸ್ಥಿತಿ ಮತ್ತೆ ಅವರ ಕಣ್ಣೆದಿರು ಹಲ್ಲು ಕಿಸಿದು ನಿಂತಿತು.

ನಿಜ ಪರಿಸ್ಥಿತಿಯನ್ನು ಅವರಿಗೆ ಹೇಳಬೇಕು, ಆದರೆ ಯಾರು, ಯಾರಿಗೆ, ಹೇಗೆ ಹೇಳಬೇಕು? ನಂತರ ಏನಾಗುವುದೋ? ಈ ಭಯವೂ ಅವರಲಿತ್ತು. ಹಾಗೇ ಅವರ ನಿರ್ಮಲ ಸ್ನೇಹಾಂತಃಕರಣದಿದಿರು, ತಾವು ತಮ್ಮ ನಿಜಸ್ಥಿತಿ ಯನ್ನು ಮುಚ್ಚಿಡುವುದೂ ಮೋಸವೆಂದೇ ತೋರುತ್ತಿತ್ತು.

ಮಧ್ಯಾಹ್ನ ಲೀಲಾವತಿ ಸಂಜೆಯ ಉಪಾಹಾರದ ಸಿದ್ಧತೆ ಮಾಡು ತ್ತಿದ್ದಳು. ಸದಾನಂದ ಆಫೀಸಿಗೆ ಹೋಗಿದ್ದ. ಶಾಂತಾರಾಮನೂ ಮನೆಯಲ್ಲಿರ ಲಿಲ್ಲ. ಯಾರೋ ಪರಿಚಯದವರನ್ನು ನೋಡಲು ಹೋಗಿದ್ದ. ಗೆಳತಿಯ ರಿಬ್ಬರೇ ಸೇರಿಕೊಂಡಿದ್ದರು.

"ನಾಳೆ ಹೇಗೂ ಭಾನುವಾರ. ಎಲಿಫೆಂಟಾಕ್ಕೆ ಹೋಗಿ ಬರೋಣವೇ? ಸಮುದ್ರವೆಂದರೆ ನೀನಷ್ಟು ಜೀವ ಬಿಡುತ್ತಿ. ಸಮುದ್ರಪ್ರಯಾಣ ಮಾಡಿದ ಅನುಭವವೂ ಸ್ವಲ್ಪ ಆಗುತ್ತದೆ."

ಆಲೂಗಡ್ಡೆಯನ್ನು ಹಚ್ಚುತ್ತಾ ಲೀಲಾವತಿ ಹೇಳಿದಳು.

"ನಾಳೆಯೇ ಏನು? ಮತ್ತೆಂದಾದರೂ ನೋಡಿದರೆ ಆಗುತ್ತದೆ!" ಪ್ರಭಾವತಿ ಉತ್ತರ ಕೊಟ್ಟಳು.

"ಹಾಗೆಂದು ದಿನವೂ ಬೊಂಬಾಯಿಗೆ ಬರುವುದಾಗುತ್ತದೆಯೇ? ಬಂದಾಗ ಒಮ್ಮೆ ನೋಡುವುದೆಲ್ಲವನ್ನೂ ನೋಡಿದಂತಾಯಿತು."

"ಬೊಂಬಾಯಿ ಬಿಡುವ ಆಲೋಚನೆ ಮಾಡಿದ್ದರೇ ಅಲ್ಲವೇ ಮತ್ತೆ ಹೋಗುವುದು, ಬರುವುದರ ಪ್ರಶ್ನೆ."

"ಅಂದರೆ?"

ಪ್ರಭಾವತಿಯ ಉತ್ತರ ಕೇಳಿ, ಚಕಿತಳಾಗಿ ಲೀಲಾವತಿ ಕೇಳಿದಳು. ಆ ಪ್ರಶ್ನೆಗೆ ಏನೆಂದು ಉತ್ತರ ಕೊಡುವುದು? ಆ ಪ್ರಶ್ನೆ ಪ್ರಭಾವತಿಯ ತಲೆಯನ್ನು ಕಾಡತೊಡಗಿತು. ಎರಡು ನಿಮಿಷ ಅದನ್ನೇ ಚಿಂತಿಸುತ್ತಾ ಸುಮ್ಮನೆ ಕುಳಿತಿದ್ದಳು. ಆ ಚಿಂತೆಯ ಮೋಡ ಅವಳ ಮುಖವನ್ನು ಕವಿದಿತು. ಅದನ್ನು ನೋಡಿ ಲೀಲಾವತಿಗೆ, ತಾನು ಆ ಪ್ರಶ್ನೆ ಕೇಳಬಾರದಾಗಿತ್ತೋ ಏನೋ, ಕೇಳಿ ಆಕೆಯ ಮನ ನೋಯಿಸಿದೆನೋ ಎನಿಸಿತು. ಅಷ್ಟಕ್ಕೇ ಆಕೆಯ ಮುಖ ಸಣ್ಣದಾಯಿತು.

"ಹೋಗಲಿ ಬಿಡು, ಏನೋ ಕೇಳಿಬಿಟ್ಟೆ. ಮತ್ತೆ ಮನಸ್ಸಿಗೇನೂ ತಿಳಿದುಕೊಳ್ಳಬೇಡ."

ಅಂತಃಕರಣದ ಆಳದಿಂದ ಮೂಡಿ ಬಂದ ಆ ಪಶ್ಚಾತ್ತಾಪದ ಮಾತು, ಪ್ರಭಾವತಿಯ ಎದೆಯನ್ನು ಕರಗಿಸಿತು. ಕಣ್ಣು ಹನಿಗೂಡಿದವು.

"ನಿನ್ನ ಮಾತಿಗೆ ನಾನೇನಾದರೂ ತಿಳಿದುಕೊಳ್ಳುವುದೇ ಲೀಲಾ, ನೀನು ಮನುಷ್ಯಳಲ್ಲ, ಸ್ನೇಹದೇವತೆ. ಹೇಳುವುದನ್ನು ಹೇಗೆ ಹೇಳುವುದೆಂದು ತಿಳಿಯದೆ, ತೊಳಲುತ್ತಿದ್ದೆ...."

"ಹೇಳುವುದು ಅಷ್ಟು ಕಷ್ಟವಾದರೆ ಹೇಳುವುದೇಕೆ?...."

"ಹಾಗೆಂದು ನಿನ್ನಿಂದ ಮುಚ್ಚಿಡಲೂ ಆರೆ ಲೀಲಾ....ನಿನಗೆ ಮೋಸ ಮಾಡಲಾರೆ. ಬಂದ ದಿನವೇ ನಿನಗೆ ಹೇಳಬೇಕಾಗಿತ್ತು. ಹೇಳದೆ ಅಪರಾಧ ಮಾಡಿದೆ. ನಿನ್ನ ಪ್ರೇಮಕ್ಕೆ, ವಿಶ್ವಾಸಕ್ಕೆ ನಾನು ಪಾತ್ರಳೊ ಅಲ್ಲವೊ ನಾನೇ ಹೇಳಲಾರೆ ಲೀಲಾ...."

"ಷ್, ಹಾಗೆ ಮಾತಾಡಬಾರದು. ನಿನ್ನಲ್ಲಿ ಮೋಸವಿಲ್ಲ, ನಾ ಬಲ್ಲೆ."

ಲೀಲಾವತಿ ನಿಧಾನವಾಗಿ ತಲೆಯಾಡಿಸುತ್ತಾ ಹೇಳಿದಳು.

"ನನ್ನಲ್ಲಿ ಮೋಸವಿಲ್ಲವೇ ಲೀಲಾ, ನನ್ನ ವಿಚಾರ ನಿನಗೇನೂ ತಿಳಿಯದು."

"ನಿಜ. ನಿನ್ನ ವಿಚಾರ ನನಗೆ ತಿಳಿಯದು. ಆದರೆ ನಿನ್ನನ್ನು ಬಲ್ಲೆ. ಆದ್ದರಿಂದಲೇ ಇಷ್ಟು ಧೈರ್ಯವಾಗಿ ನಿನ್ನಲ್ಲಿ ಮೋಸವಿಲ್ಲೆಂದು ಹೇಳಿದ್ದು."

"ನನ್ನನ್ನಾದರೂ ನೀನೇನು ಕಂಡೆ ಲೀಲಾ?"

"ಏನು ಕಾಣಬೇಕು ಪ್ರಭಾ? ಯಾರನ್ನಾದರೂ ಹೊಟ್ಟೆ ಬಗಿದು ಅವರೊಳಗೆ ಏನಿದೆ ಎಂದು ನೋಡುತ್ತೇವೆಯೇ? ಅಂತಃಕರಣಕ್ಕೆ ಅಂತಃಕರಣ ಅರಿವಾಗುತ್ತದೆ. ಮೊದಲ ದಿನ ನೀನು ಮಲಬಾರ್ ಹಿಲ್ಲಿನಲ್ಲಿ ಕಡಲ ದೃಶ್ಯ ಕಂಡು ಮೈ ಮರೆತಾಗಲೇ ಗೊತ್ತಾಯಿತು."

"ಏನು?"

"ಕಡಲನ್ನು ಕಂಡು ಪರವಶವಾಗುವ ಮುಗ್ಧ ಮನಸಿನಲ್ಲಿ ಕಪಟತನದ ಕಸಿರು ಇಲ್ಲ ಎಂದು."

"ಹಾಗೆಂದು ಹೇಳಿತೇ ನಿನ್ನ ಮನಸ್ಸು!"

"ಹೂ. ಇನ್ನೂ ಏನೇನೋ ಹೇಳಿತು. ಅದು ಹೇಳಿದ್ದನ್ನೆಲ್ಲಾ ಹೇಳಿದರೆ, ನಿನ್ನ ತಲೆ ಆಕಾಶಕ್ಕೇರಿ ಬಿಡುತ್ತದೆ. ಅದಕ್ಕೇ ಅದಾವುದನ್ನೂ ನಿನಗೆ ಹೇಳುವುದಿಲ್ಲ." ಮಧುರವಾದ ನಗು ನಗುತ್ತಾ ಹೇಳಿದಳು ಲೀಲಾವತಿ.

"ನನಗೆ ಹೇಳುವುದಿಲ್ಲವಾದರೆ, ಮತ್ತಾರಿಗೆ ಹೇಳುತ್ತೀ?"

"ನಿನ್ನ ಯಜಮಾನರಿಗೆ!...."

"ನನ್ನ ಯಜಮಾನರು! ಅದಕ್ಕೇ ಲೀಲಾ ನೀನೇನೂ ತಿಳಿಯದ ಮುಗ್ಧೆ ಎಂದದ್ದು. ಈ ಜಗತ್ತಿನ ದೃಷ್ಟಿಯಲ್ಲಿ ಅವರು ನನ್ನ ಯಜಮಾನರಲ್ಲ. ನಾನವರ ಪತ್ನಿಯಲ್ಲ. ಅವರು ಹುಡುಗಿಯನ್ನು ಹಾರಿಸಿಕೊಂಡು ಬಂದ ನೀಚರು, ನಾನು....ನಾನು....ನಾನು ಏನೆಂದು ಹೇಳಲಿ....ನಿಜ....ಹೊಸಲು ದಾಟಿದ ಹೆಣ್ಣು."

ಬೆಂಗಳೂರಿನಲ್ಲಿ ಕಳೆದ ಕೆಲದಿನಗಳ ಕಹಿ ಅನುಭವದ ನೆನಪೆಲ್ಲಾ ಕಡೆ ಕಡೆದು ಕರ್ಕಶತೆಯಾಗಿ ತೇಲಿಬಂತು ಪ್ರಭಾವತಿಯ ಮಾತಿನಲ್ಲಿ.

ತನ್ನ ಮಾತು ಕೇಳಿ ಲೀಲಾವತಿ ಬೆಚ್ಚಿ ಬೀಳಬಹುದು, ಸಿಟ್ಟಾಗ ಬಹುದು, ತನ್ನಿಂದ ದೂರ ಸರಿಯುಬಹುದು ಎಂದು ಪ್ರಭಾವತಿ ನಿರೀಕ್ಷಿಸಿದ್ದಳು. ಅವಳ ನಿರೀಕ್ಷೆ ತರ್ಕಬದ್ಧವಾಗಿತ್ತು. ಆದರೆ ಲೀಲಾವತಿಯು ಹಾಗೇನೂ ಮಾಡಲಿಲ್ಲ. ಅವಳ ಮಾತನ್ನು ಕೇಳಿ, ಎದೆವೀಣೆಯನ್ನು ಮಧುರವಾಗಿ ಮಿಡಿವ ನಗೆ ನಕ್ಕು, ಅಷ್ಟು ದೂರ ಕುಳಿತ ಪ್ರಭಾವತಿಯನ್ನು ಹತ್ತಿರ ಎಳೆದು ಕೊಂಡು ಅವಳ ಹೆಗಲ ಮೇಲೆ ಕೈ ಹಾಕಿ ಹೇಳಿದಳು –

"ಅಷ್ಟೆ ತಾನೇ. ಅದು ನನಗೆ ಗೊತ್ತು."

ಲೀಲಾವತಿ ಕೊಟ್ಟ ಉತ್ತರ ಕೇಳಿ ಪ್ರಭಾವತಿ ಆಶ್ಚರ್ಯದಿಂದ ತಬ್ಬಿಬ್ಬಾಗಿ ಹೋದಳು.

"ಗೊತ್ತೆ, ಇದು ನಿನಗೆ ಗೊತ್ತೆ, ಯಾರು ಹೇಳಿದರು? ಅವರು...."

"ಊಹೂ. ಶಾಂತಾರಾಂ ಹೇಳಲಿಲ್ಲ. ಹಾಗೇ ಗೊತ್ತಾಯಿತು."

"ಯಾರೂ ಹೇಳಲಿಲ್ಲ, ಆದರೂ ತಿಳಿಯಿತು. ಹೇಗೆ?"

"ನಿನಗೆ ಈ ದಿನ ನಿನ್ನ ವಿಚಾರವೆಲ್ಲಾ ಹೇಳಬೇಕೆನಿಸಿದೆ. ಹೇಳುವವರೆಗೂ ನಿನ್ನ ಹೃದಯ ಹಗುರವಾಗುವುದಿಲ್ಲ. ಹೇಳಿಬಿಡು ಆಮೇಲೆ ಹೇಗೆ ಗೊತ್ತಾಯಿತೆಂದು ಹೇಳುತ್ತೇನೆ."

"ಇಲ್ಲ ಲೀಲಾ, ಮೊದಲು ನಿನಗಿದು ಹೇಗೆ ಗೊತ್ತಾಯಿತೆಂದು ಹೇಳು?"

"ನಾನು ಮೊದಲು, ನೀನು ಮೊದಲು ಎನ್ನುವುದಕ್ಕೆ ಇದೇನು ಉರುಟಣೆಯ ಹಾಡೇ? ಮೊದಲು ನನ್ನಿಂದ ಗುಟ್ಟು ಮಾಡಿದವಳು ನೀನು. ಎಂತಲೇ ಮೊದಲು ನಿನ್ನ ಸರದಿ. ನಿನ್ನದಾಗಲಿ, ಆಮೇಲೆ ನನ್ನದು ಹೇಳುತ್ತೇನೆ."

ತನ್ನ ವಿಷಯವನ್ನು ಅವಳೆದುರಿಗೆ ಹೇಗೆ ಹೇಳುವುದೆಂದು ಚಿಂತಿಸುತ್ತಿದ್ದ ಪ್ರಭಾವತಿಯ ಹೃದಯದ ಭಾರ ಕಡಿಮೆಯಾಗಿತ್ತು. ಈಗ ಹೇಳುವುದು ಕಷ್ಟವೆನಿಸಲಿಲ್ಲ. ತನ್ನ ಮನೆ, ಅಲ್ಲಿಯ ಜೀವನ, ಮೊದಲು ಶಾಂತಾರಾಮನನ್ನು ಕಂಡುದು ಮೊದಲು ಮಾಡಿಕೊಂಡು, ಬೊಂಬಾಯಿಗೆ ಬಂದವರೆಗಿನ ವಿಚಾರದವರೆವಿಗೆ ಎಲ್ಲವನ್ನೂ, ಏನೂ ಮುಚ್ಚುಮರೆ ಮಾಡದೆ ಹೇಳಿ ಮುಗಿಸಿದಳು.

"ಲೀಲಾ – ಇಂದು ನಮ್ಮ ಪಾಲಿಗೆ ಜಗತ್ತಿನಲ್ಲಾರೂ ಇಲ್ಲಿ. ಜಗತ್ತೇ ನಮ್ಮ ಪಾಲಿಗೆ ಬಾಗಿಲು ಮುಚ್ಚಿಬಿಟ್ಟಿದೆ. ಜಗತ್ತಿನ ದೃಷ್ಟಿಯಲ್ಲಿ ನಾನು ಪಾಪಿ, ಜಾರಿಣಿ, ಮಾನಗೆಟ್ಟ ಸ್ವೈರಾಚಾರಿ....ತನ್ನ ಪಾಲಿಗಾರೂ ಇಲ್ಲ...." ಬೇಡ ಬೇಡವೆಂದರೂ ಹರಿದು ಬಂದ ಕಂಬನಿಯ ಹೊಳೆಯಲ್ಲಿ ತೇಲುತ್ತಾ ಪ್ರಭಾವತಿ ತನ್ನ ಕಥೆ ಹೇಳಿ ಮುಗಿಸಿದಳು.

ಲೀಲಾವತಿ ಶಿಲಾರ್ಪಿತ ಪ್ರತಿಮೆಯಂತೆ ಮೈ ಮರೆತು ಕೇಳಿದಳು, ಪ್ರಭಾವತಿಯ ಬಾಳಿನ ದಾರುಣ ವೃತ್ತಾಂತವನ್ನು. ಅವಳ ಕಣ್ಣಿನಲ್ಲೂ ಕಂಬನಿ ಕೆರೆಗಟ್ಟಿ, ತುಳುಕಿ ಬಂದ ಹನಿಯೊಂದು ಕಣ್ಣಿನಿಂದಿಳಿದು, ಕೆನ್ನೆಯ ಮೇಲೆ ಜಾರಿ, ಕೆನ್ನೆಯಂಚಿನಲ್ಲಿ ಒಂದು ಗಳಿಗೆ ತೂಗಾಡಿ, ವಕ್ಷಸ್ಥಲದ ಮೇಲೆ

ಧುಮುಕಿತು. ಒಳಗಿನ ದುಃಖದಾಳದೊಳಗೇ ಮುಳುಗಿಹೋಗಲೆಳಸುವ
ಧ್ವನಿಯನ್ನು ಬಲಾತ್ಕಾರವಾಗಿ ಹೊರಗೆ ಎಳತಂದು ಹೇಳಿದಳು –

"ನೀನು ಆ ಮಾತಾಡಬಾರದು ಪ್ರಭಾ"

"ಯಾವ ಮಾತು ?"

"ನಿನ್ನ ಭಾಗಕ್ಕೆ ಯಾರೂ ಇಲ್ಲವೆಂದುದು. ನನ್ನನ್ನೂ ಜಗತ್ತಿನ
ಜೊತೆಗೇ ಸೇರಿಸಿ ದೂಡಿಬಿಟ್ಟೆಯಾ? ನಿನ್ನ ಹೃದಯದಲ್ಲಿ ನನಗೂ ಸ್ಥಾನ
ವಿಲ್ಲವೇ ?"

"ಲೀಲಾ, ಲೀಲಾ, ಆ ಮಾತಾಡಬೇಡ – ನನ್ನನ್ನು ಕೊಲ್ಲಬೇಡ. ನಿನ್ನ
ಹೃದಯದಲ್ಲಿ ನನಗಷ್ಟು ತಾವು ಕೊಟ್ಟರೆ ಅದೇ ನನ್ನ ಭಾಗ್ಯ."

"ನಾನು ಹೇಳುವುದೂ ಅಷ್ಟೇ ಪ್ರಭಾ."

ಅವಳ ಮಾತುಕೇಳಿ, ದುಃಖವೆಲ್ಲೋ ಬತ್ತಿಹೋಗಿ, ತಾನೇ ತಾನಾಗಿ
ನುಗ್ಗಿಬಂದ ಹರ್ಷದಲ್ಲಿ ಮೈ ಮರೆತು, ಪ್ರಭಾವತಿ ಲೀಲಾವತಿಯನ್ನು ಆಲಂಗಿಸಿ
ಮುತ್ತು ಕೊಟ್ಟಳು. ಅದರಿಂದ ಲೀಲಾವತಿಗೂ ಮತ್ತೇರಿದಂತಾಯಿತು.
ಒಂದು ಗಳಿಗೆ ಸುಮ್ಮನಿದ್ದು ಬಳಿಕ ಹೇಳಿದಳು –

"ಇದಕ್ಕೇ ನಾನು ನಿನ್ನನ್ನು ಹುಚ್ಚು ಹುಡುಗಿ ಎನ್ನುವುದು. ಇಂಥ
ಅನ್ಯಾಯ ಮಾಡಬಹುದೇ ?"

"ನಾನೇನು ಮಾಡಿದೆ ಲೀಲಾ ?"

"ನಿನ್ನ ಗಂಡನಿಗೆ ಮೀಸಲಾಗಿಡಬೇಕಾದುದನ್ನು ನನಗೆ ಕೊಡುವುದೇ ?"

ಅವಳ ತುಂಟತನದ ಮಾತು ಕೇಳಿ ಲಜ್ಜಿತಳಾದ ಪ್ರಭಾವತಿ, ಲೀಲಾ
ವತಿಯ ಕೆನ್ನೆಯನ್ನು ಮೃದುವಾಗಿ ಹಿಂಡಿ ಹೇಳಿದಳು –

"ನೀನು ಲಜ್ಜೆಗೆಟ್ಟವಳು ಲೀಲಾ."

"ಅಲ್ಲಿಗೆ ನಮ್ಮಿಬ್ಬರ ಜೋಡಿ ಸರಿಹೋಯಿತಲ್ಲ."

ಸ್ಟೌವಿನ ಮೇಲೆ ಆಲೂಗಡ್ಡೆ ಬೇಯಿಸಲೆಂದು ಇಟ್ಟ ನೀರು, ಕುದಿ
ಕುದಿದು 'ನನ್ನನ್ನು ಮರತೇಬಿಟ್ಟಿರಲ್ಲಾ' ಎಂದು ಕೊರಗುತ್ತಿತ್ತು. ಅದನ್ನು
ನೋಡಿ ಲೀಲಾವತಿ –

"ಹೋಗಿ ನೊದಲು ಮುಖ ತೊಳೆದು ಬಾ. ಅಕಸ್ಮಾತ್ತಾಗಿ ನಿನ್ನ
ಗಂಡ ಬಂದರೆ, ನಿನ್ನ ಕಣ್ಣೀರಿನ ಕರೆಗಟ್ಟಿದ ಮುಖ ನೋಡಿ, ನನಗೆ ಹಿಡಿ
ಶಾಪ ಹಾಕಿಯಾನು."

"ಆ ಮಾತು ನಿನಗೂ ಅನ್ವಯಿಸುತ್ತದೆ ಲೀಲಾ."

"ಮೊದಲು ನೀನು ಮುಖ ತೊಳೆದು ಬಾ. ಹೇಗೂ ನೀರು ಮರಳು ತ್ತಿದೆ. ಒಂದು ಲೋಟ ಕಾಫಿ ಮಾಡಿಟ್ಟಿರುತ್ತೇನೆ ಆಮೇಲೆ ನಾನೂ ಮುಖ ತೊಳೆದು ಬರುತ್ತೇನೆ. ಹಾಯಾಗಿ ಕಾಫಿ ಕುಡಿಯೋಣ."

ಅವಳ ಮಾತಿಗೆ ಬದಲಾಡಲಾರದೆ, ಪ್ರಭಾವತಿ ಎದ್ದು ಹೋಗಿ ಮುಖ ತೊಳೆದು ಬಂದಳು. ಅವಳ ಹಣೆಗೆ ತಾನೇ ಕುಂಕುಮವಿಟ್ಟು ಲೀಲಾವತಿ –

"ನಿನ್ನಿಂದ ನನಗೆ ತುಂಬಾ ಕಷ್ಟವಾಯಿತು. ಹೋಗಲಿ, ಅದಕ್ಕೆ ಪರಿಹಾರವಾಗಿ, ಕಾಫಿ ಸೋದಿಸಿ, ಹಾಲು ಸಕ್ಕರೆ ಬೆರಸಿ, ನಾನು ಬರುವ ಹೊತ್ತಿಗೆ ಸಿದ್ಧವಾಗಿಟ್ಟಿರು. ಇಲ್ಲವಾದರೆ ಸಿಗಿದುಬಿಟ್ಟೇನು. ನಾನೆಷ್ಟು ಕೆಟ್ಟವಳು ಅನ್ನುವುದು ನಿನಗೆ ತಿಳಿಯದು" ಎಂದು ಹೇಳಿ ತಾನೂ ಮುಖ ತೊಳೆದು ಬರಲು ಹೋದಳು.

ಅವಳು ಬರುವ ವೇಳೆಗೆ ಪ್ರಭಾವತಿ ಕಾಫಿಯನ್ನು ಸಿದ್ಧಮಾಡಿ, ಅವಳು ಬರುತ್ತಿದ್ದ ಹಾಗೇ ಲೋಟಕ್ಕೆ ಬಗ್ಗಿಸಿ ಕೊಟ್ಟು, ತಾನೂ ಒಂದು ಬಟ್ಟಲಿನಲ್ಲಿ ಹಾಕಿಕೊಂಡಳು. ಕಾಫಿ ಕುಡಿಯುತ್ತಿದ್ದಾಗ ಪ್ರಭಾವತಿಗೆ, ಲೀಲಾವತಿ 'ಯಾರೂ ಹೇಳಲಿಲ್ಲ, ಆದರೂ ತಿಳಿಯಿತು.' ಎಂಬುದು ನೆನಪಾಗಿ ಕುತೂಹಲ ಕೆರಳಿತು.

"ಮರತೇಬಿಟ್ಟಿದ್ದೆ."

"ಏನು?"

"ನಾನು ಹೇಳದೆ ನನ್ನ ವಿಚಾರವೆಲ್ಲಾ ತಿಳಿಯಿತು ಎಂದೆಯಲ್ಲಾ, ಹೇಗೆ ತಿಳಿಯಿತು?"

"ಅದೇ – ಹೆಂಗಸಿನದು ಎಕ್ಸ್–ರೇ ಕಣ್ಣು. ಅದರಿಂದ ಯಾವುದನ್ನೂ ಮುಚ್ಚಿಡಲು ಸಾಧ್ಯವಿಲ್ಲ."

"ಬಡಾಯಿ ಕೊಚ್ಚಬೇಡ. ಮೊದಲು ನಿನಗೆ ಹೇಗೆ ಗೊತ್ತಾಯಿತು ಎಂದು ಹೇಳು. ಬಳಿಕ ನಿನ್ನದು ಎಕ್ಸ್‌ರೇ ಕಣ್ಣು, ಅಹುದೋ ಅಲ್ಲವೋ ಹೇಳುತ್ತೇನೆ."

"ಅದೇನು ಹೇಳುತ್ತೀಯೋ. ಗುಡ್ಡದಷ್ಟು ಓದಿದೀಯ. ಆದರೆ ವ್ಯವಹಾರದಲ್ಲಿ ಮಾತ್ರ ಹಸುಗೂಸು. ಪ್ರಪಂಚಪರಿಜ್ಞಾನ ಎಳ್ಳುಕಾಳು ಮುಳ್ಳು ಮೊನೆಯಷ್ಟೂ ಇಲ್ಲ."

"ಏಕೆ?"

"ಕೇಳಿದರೆ ನೀವಿಬ್ಬರೂ ಗಂಡಹೆಂಡಿರೆಂದು ಹೇಳಿಕೊಳ್ಳುತ್ತೀರ. ಆದರೆ ನೀವು ಹೇಳದೆ ತಾನೇ ಹೇಳುವ ಮಂಗಳಸೂತ್ರವನ್ನು ಶಾಸ್ತ್ರಕ್ಕಾದರೂ ಕಟ್ಟಿಕೊಳ್ಳಬೇಕೆಂಬ ಜ್ಞಾನವಿಲ್ಲ. ಅದಿಲ್ಲದೆ ನೀವು ಗಂಡ ಹೆಂಡಿರೆಂದರೆ ಯಾರು ನಂಬುತ್ತಾರೆ ಹೇಳು?"

ತಾವಿಬ್ಬರೂ ಗಂಡ ಹೆಂಡಿರೆಂದು ಹೇಳಿಕೊಂಡೂ, ತನ್ನ ಕೊರಳಲ್ಲಿ ಮಾಂಗಲ್ಯವಿಲ್ಲದ ಅಸಂಬದ್ಧತೆ ಅವಳಿಗೆ ಅರಿವಾದುದು ಆಗಲೇ.

"ನಿಜ, ನಿಜ, ಲೀಲಾ. ನಿನ್ನದು ಎಕ್ಸ್–ರೆ ಕಣ್ಣು. ಈ ಅಸಂಬದ್ಧತೆ ನನಗೆ ಹೊಳದೇ ಇರಲಿಲ್ಲ, ಅವರೂ ಹೇಳಲಿಲ್ಲ."

"ಸರಿ, ಅದು ಮತ್ತೊಂದು ಮಂಕುದಿಣ್ಣೆ. ನೀವಿಬ್ಬರೂ ನನ್ನ ಹೆಗಲು ಹತ್ತಿದೀರ. ಬೊಂಬಾಯಿಯಂಥ ಪಟ್ಟಣದಲ್ಲಿ ನಿಮ್ಮಿಬ್ಬರನ್ನೂ ಕಟ್ಟಿಕೊಂಡು ನಾನು ಹೇಗೆ ಬಾಳುವೆ ಮಾಡಬೇಕೋ ನಾನರಿಯೆ." ಎಂದಳು ಲೀಲಾವತಿ, ಸ್ನೇಹದಲ್ಲಿ ತೊಯ್ದು ಸವಿಯಾದ ನಗು ನಗುತ್ತಾ.

"ಅದೆಲ್ಲಾ ಇರಲಿ. ಇದು ನಿನಗೆ ಯಾವಾಗ ಗೊತ್ತಾಯಿತು?"

"ನೀವು ಬಂದ ದಿನವೇ ನನ್ನ ಗಂಡ 'ಇವರು ಶಾಂತಾರಾಂನ ಹೆಂಡತಿ' ಎಂದು ಪರಿಚಯ ಮಾಡಿಸಿದಾಗಲೇ, ನನ್ನ ಕಣ್ಣು ನಿನ್ನ ಕತ್ತು ನೋಡಿತು. ಕಳ್ಳನ ಗುಟ್ಟು ಬಯಲಾಯಿತು. ನೀನೇ ಹೇಳಬಹುದು ಎಂದಿದ್ದೆ."

"ಹಾಗಾದರೆ ನಿನಗೆ ನಮ್ಮಿಬ್ಬರ ಮೇಲೂ ತುಂಬಾ ಅಸಮಾಧಾನವಾಗಿರಬೇಕು."

"ಏಕೆ?"

"ಇಂಥಾ ಮುಚ್ಚುಮರೆ ಮಾಡಿದ್ದಕ್ಕೆ, ಅಲ್ಲವೇ?"

"ಅಸಮಾಧಾನ ಏಕಾಗಬೇಕು?"

"ಹೇಳಲಿಲ್ಲ ಎಂದು."

"ಎಲ್ಲರೂ ಕಂಡವರೆಲ್ಲರಿಗೂ ತಮ್ಮ ಜೀವನವನ್ನೆಲ್ಲಾ ಸಾರಿ ಹೇಳುತ್ತಾರೆಯೇ? ಅವರವರ ಜೀವನ ಅವರಿಗೆ."

"ನಮ್ಮ ವಿಷಯ ನೀವು ತಪ್ಪು ತಿಳಿದುಕೊಳ್ಳಲಿಲ್ಲವೇ?"

"ಊಹೂ. ತಪ್ಪೇಕೆ ತಿಳಿದುಕೊಳ್ಳಬೇಕು?"

"ಮತ್ತೇನೆಂದು ತಿಳಿದುಕೊಂಡೆ?"

"ಓಹೋ – ಇದು ಬೊಂಬಾಯಿಗೆ ರಿಜಿಸ್ಟರು ಮದುವೆಗೆ ಬಂದ ಕಳ್ಳ ಜೋಡಿ. ಎರಡು ದಿನದ ಮೇಲೆ ತಾನೇ ಗೊತ್ತಾಗುತ್ತದೆ ಎಂದುಕೊಂಡು ಹಾಯಾಗಿದ್ದುಬಿಟ್ಟೆ."

"ನಿನ್ನ ಗಂಡನಿಗೂ ಇದು ಗೊತ್ತಾಯಿತೆ?"

"ಗೊತ್ತಾಗದೆ – ಆ ದಿನವೇ, ನಾನೇ ಅವರಿಗೆ ಹೇಳಿದೆ. ನಿಮ್ಮ ಹಾಗೆ ಗುಟ್ಟು ಮಾಡುವುದು ನನಗೆ ಬರದು."

"ಅವರು ಏನೆಂದರು?"

"ಒಂದು ಗಳಿಗೆ ಅವರಿಗೆ ಅಸಮಾಧಾನವಾಯಿತು."

"ಅಸಮಾಧಾನವಾಯಿತೇ?" – ಕಂಗಾಲಾಗಿ ಕೇಳಿದಳು ಪ್ರಭಾವತಿ.

"ಮತ್ತೆ ಇಷ್ಟು ಸ್ನೇಹಿತರು. ತನ್ನಲ್ಲೇ ಮುಚ್ಚುಮರೆ ಮಾಡಬೇಕೇ, ಹೇಳಿದ್ದರೆ ಏನು ತಪ್ಪಾಗುತ್ತಿತ್ತು ಎಂದು ನೊಂದುಕೊಂಡರು."

"ಹಾಗಾದರೆ ಈಗಲೂ ಅವರಿಗೆ ನಮ್ಮ ಮೇಲೆ ಅಸಮಾಧಾನವಿರಬೇಕು."

"ಊಹೂ. ನಾನು ಕಿವಿ ಹಿಂಡಿ ಹೇಳಿದೆ – 'ನಿಮಗೆ ಸಹನೆಯಿಲ್ಲ. ರೈಲಿನಲ್ಲಿ ಬಂದಿಳಿದ ಕೂಡಲೇ ಯಾರಾದರೂ ಹೇಳುತ್ತಾರೆಯೇ? ಹಾಗೆ ಹೇಳಬಾರದೆಂದಿದ್ದರೆ, ಇಲ್ಲಿಗೆ ಬರುತ್ತಲೇ ಇರಲಿಲ್ಲ. ಹೋಟಲಿಲ್ಲವೇ ಇರಲಿಕ್ಕೆ. ಹೇಳುವವರೆಗೂ ಸುಮ್ಮನಿರಿ' ಎಂದೆ."

"ಏನು ಹೇಳಿದರು?"

"ನಾನು ಹೇಳುವುದು ನಿಜ ಎಂದು ಶಾಂತವಾದರು."

"ಲೀಲಾ, ನೀನು ನಿಜವಾಗಿಯೂ ಮನುಷ್ಯಳಲ್ಲ, ದೇವತೆ."

"ಸ್ಸರಿ. ಅವರ ಮುಂದೆ ನಾನು ಹುಲ್ಲುಕಡ್ಡಿ. ಆಮೇಲೆ ಅವರೇ ನನಗೇನು ಹೇಳಿದರು ಗೊತ್ತೆ?"

"ಏನು ಹೇಳಿದರು."

"ಇದು ನಮಗೆ ಗೊತ್ತಾಗಿದೆ ಎಂಬುದು ಸ್ವಲ್ಪವೂ ಅವರಿಗೆ ಗೊತ್ತಾಗದ ಹಾಗಿರಬೇಕು. ಹಾಗೇನಾದರೂ ತಿಳಿದುಕೊಂಡರೆ ಇಲ್ಲಿರಲು ಸಂಕೋಚಪಟ್ಟುಕೊಂಡಾರು. ಏನು ದುಃಖಕ್ಕೆ ಸಿಕ್ಕಿ ಬಳಲಿ ಬಂದಿದಾರೋ. ಇಲ್ಲಿ

ಇರುವಷ್ಟು ದಿನ ಹಾಯಾಗಿರಲಿ' ಎಂದರು. ಎಷ್ಟು ಜನ ಗಂಡಸರಿಗೆ ಈ ಸಹನೆ ಬಂದೀತು ಹೇಳು?"

ಲೀಲಾವತಿ ಹೇಳಿದುದನ್ನು ಕೇಳಿ, ಆ ಗಂಡ ಹೆಂಡಿರ ಒಳ್ಳೆಯತನ ಕಂಡು ಪ್ರಭಾವತಿ ಮೂಕಳಾದಳು.

"ಲೀಲಾ, ಜಗತ್ತಿನ ಜನವೆಲ್ಲಾ ನಿನ್ನ ಹಾಗೇ ಇದ್ದರೆ ಎಷ್ಟು ಚೆನ್ನ."

"ಹಾಗಿಲ್ಲದ್ದೇ ಒಳಿತಾಯಿತು."

"ಏಕೆ?"

"ನಮ್ಮಂಥ ಜನವೇ ಇದ್ದರೆ, ಆಗ ನಿಮ್ಮಂಥವರನ್ನು ಹುಡುಕಲಿಕ್ಕೆ ಸೂರ್ಯಮಂಡಲಕ್ಕೆ ಹೋಗಬೇಕಾಗಿತ್ತು."

ಇಬ್ಬರೂ ಶೃತಿ ಮಾಡಿದ ವೀಣೆಗಳು ಗಾಳಿಗೂ ಮಿಡಿದು ಮಂಜುಲ ನಾದ ಸೂಸುವಂತೆ ನಕ್ಕರು,

"ನಿಮ್ಮಿಬ್ಬರದು ಹಾಲು ಸಕ್ಕರೆ ಜೋಡಿ," ಪ್ರಭಾವತಿ ಹೇಳಿದಳು.

"ನಿಮ್ಮದು ಹೂವು ಪರಿಮಳವಿದ್ದಂತಾಗಲಿ."

ಗೆಳತಿಯರಿಬ್ಬರಿಗೂ ತಮ್ಮ ಮಾತುಕತೆಯಲ್ಲಿ ಹೊತ್ತು ಹೋದುದೇ ಗೊತ್ತಾಗಿರಲಿಲ್ಲ. ಪ್ರಭಾವತಿಗಂತೂ ಲೀಲಾವತಿಯ ಹೃದಯದಲ್ಲಿ ಹೊಸ ಲೋಕವನ್ನೇ ಕಂಡಂತಾಗಿತ್ತು. ಆಫೀಸಿನಿಂದ ಸದಾನಂದ ಹಿಂದಿರುಗಿ, ಅವರಿಬ್ಬರನ್ನೂ ಈ ಲೋಕಕ್ಕೆ ಎಳೆತಂದ.

"ಹೆಂಗೆಸರಿಗೆ ಹೆಂಗಸರ ಜೊತೆ ಸಿಕ್ಕಬಾರದೆನ್ನುವುದು ಇದಕ್ಕೇ ಎಂದು ಕಾಣುತ್ತೆ," ಎಂದು ಗದ್ದಲ ಮಾಡಿದ.

"ಅದಕ್ಕೇ ನಿಮ್ಮಂತಹವರ ಜೊತೆ ಸೃಷ್ಟಿ ಮಾಡಿರಬೇಕು ಬ್ರಹ್ಮ. ಈಗೇನು ಲೋಕ ಮುಳುಗಿ ಹೋದದ್ದು."

"ಮೆಟ್ರೋ ಥಿಯೇಟರಿಗೆ ಫೋನ್ ಮಾಡಿ, ಸೀಟು ರಿಜರ್ವ್ ಮಾಡಿ ಸಿದ್ದೆ. ಮಾತಿನ ಭರಾಟೆಯಲ್ಲಿ ಶನಿವಾರ ಸಂಜೆ ಎಂಬುದು ಮರೆತುಹೋಯಿ ತೇನೋ. ಶಾಂತಾರಾಂ ಎಲ್ಲಿ?"

"ಯಾರೋ ಪರಿಚಯದವರನ್ನು ನೋಡಿ ಬರುತ್ತೇನೆ ಎಂದು ಹೋದರು. ಇನ್ನೇನು ಅವರೂ ಬರುವ ಹೊತ್ತಾಯಿತು," ಪ್ರಭಾವತಿ ಉತ್ತರ ಕೊಟ್ಟಳು.

"ಸರಿ – ಅವನನ್ನು ಮನೆ ಬಿಟ್ಟು ಹೊರಹಾಕಿ, ಹರಟೆಗೆ ಕುಳಿತಿ

ರೇನೋ – ಅಕ್ಕಪಕ್ಕದ ಮನೆಯವರ ಕುಲ ಗೋತ್ರಗಳೆಲ್ಲಾ ತಿಳಿದು ಹೋಯಿತೋ, ಅಥವಾ ಇನ್ನೂ ಏನಾದರೂ ಉಳಿಸಿದೆಯೋ ಲೀಲಾ ?"

"ಇನ್ನೇನು ನಮಗದೇ ಕೆಲಸ. ಎಲ್ಲರದೂ ಆಯಿತು, ನಿಮ್ಮೊಬ್ಬರದು ಮಾತ್ರ ಬಾಕಿ ಉಳಿದಿದೆ. ಈಗ ಅದನ್ನು ಆರಂಭಿಸಬೇಕು ಎಂದಿದ್ದೇವೆ. ಆಗಬಹುದೇ ?" ಹುಸಿ ಮುನಿಸಿನಿಂದ ಲೀಲಾವತಿ ಕೇಳಿದಳು.

"ಪುಣ್ಯಾತಗಿತ್ತಿ, ಬೇಕಾದ್ದು ಮಾಡು, ಆದರೆ ನನ್ನಂಥ ಬಡಪಾಯಿಗಳ ತಂಟೆಗೆ ಮಾತ್ರ ಬರಬೇಡ. ನನ್ನ ಮೇಲಷ್ಟು ವಿಶ್ವಾಸವಿದ್ದರೆ, ಕಾಫಿ ಕೊಡುವ ಕೃಪೆ ಮಾಡು."

ಆ ಗಂಡಹೆಂಡಿರ ಹುಡುಗಾಟ, ನಗೆಯಾಟವನ್ನು ಕಂಡು ಪ್ರಭಾವತಿಗೆ 'ತಾವಿಬ್ಬರೂ ಎಂದು ಹಾಗಿರುವುದು ?' ಎನಿಸಿತು. ನೋಡಿದಷ್ಟೂ ಸಾಲ ದೆಂಬಂತೆ, ಅಭಿಮಾನ ತುಂಬಿದ ಕಣ್ಣುಗಳಿಂದ, ಅವರಿಬ್ಬರನ್ನೂ ನೋಡುತ್ತಾ ನಿಂತುಬಿಟ್ಟಿದ್ದಳು. ಅವಳ ಹೃದಯದಲ್ಲಿ ಒಂದು ಮಾತು ಮತ್ತೆ ಮತ್ತೆ ಮಿಡಿಯುತ್ತಿತ್ತು –

"ಗಂಡ ಹೆಂಡಿರೆಂದರೆ ಹೀಗಿರಬೇಕು. ನಾವೂ ಹೀಗೇ ಇರಬೇಕು. ಲೀಲಾ ಹೇಳಿದ ಹಾಗೆ ಹೂ – ಪರಿಮಳದ ಹಾಗೆ ಬೆರೆಯಬೇಕು."

ಸದಾನಂದ ಹೆಂಡತಿಯೊಂದಿಗೆ ಜಗಳವಾಡಿ, ಕಾಫೀ ಕುಡಿದು ಸಿಗರೇಟು ಹೊತ್ತಿಸುತ್ತಿರುವಾಗ, ಶಾಂತಾರಾಮನೂ ಬಂದ. ಸ್ವಲ್ಪ ಹೊತ್ತಿನಲ್ಲೆ ಎಲ್ಲರೂ ಸಿದ್ಧವಾಗಿ ಸಿನಿಮಾಕ್ಕೆ ಹೊರಟರು.

ಸಿನಿಮಾ ಮುಗಿಸಿಕೊಂಡು ಬಂದು ಊಟಮಾಡಿ ಮಲಗಿದ ಮೇಲೆ, ಪ್ರಭಾವತಿ ಶಾಂತಾರಾಮನಿಗೆ ಆ ದಿನ ನಡೆದುದೆಲ್ಲವನ್ನು ತಿಳಿಸಿ –

"ಅವರಿಬ್ಬರೂ ಈ ಲೋಕದ ಮನುಷ್ಯರಲ್ಲ," ಎಂದಳು.

ಶಾಂತಾರಾಮನಿಗೂ ಹಾಗೇ ಅನಿಸಿತು.

"ಸದಾನಂದನಿಗೆ ಇದನ್ನು ಹೇಗೆ ಹೇಳುವುದು, ಹೇಳಿದರೆ ಬಳಿಕ ತಪ್ಪು ತಿಳಿದುಕೊಂಡರೆ ಏನು ಮಾಡುವುದು ಎಂದು ಹೆದರಿಕೊಂಡಿದ್ದೆ. ಅವನ ಇದಿರು ಹೇಳದೆ, ನಮ್ಮ ಸಣ್ಣತನ ತೋರಿಸಿಕೊಂಡಂತಾಯಿತು. ಮೊದಲು ಬೆಳಗ್ಗೆ ಕ್ಷಮಾಪಣೆ ಕೇಳಬೇಕು," ಎಂದ.

"ಅವರೆಂದೂ ತಪ್ಪು ತಿಳಿದುಕೊಂಡಿಲ್ಲ, ತಿಳಿದುಕೊಳ್ಳುವುದೂ ಇಲ್ಲ. ಅನಂತಸ್ನೇಹದ ಸುವರ್ಣಮೂರ್ತಿ ಆತ."

"ಲೀಲಾವತಿಯೂ ಅಷ್ಟೆ – ಕರುಣೆಯ ಕಾಮಧೇನು."

ಕೃತಜ್ಞತಾಭಾರವಾದ ಹೃದಯದಿಂದ ಇಬ್ಬರೂ ಹಗುರಾಗಿ, ನಿದ್ರೆ ಮಾಡಿದರು. ಅಂಥ ನಿದ್ರೆ ಮಾಡಿ ಎಷ್ಟು ದಿನವಾಗಿತ್ತೋ ಎನಿಸಿತು ಪ್ರಭಾವತಿಗೆ.

## ೧೫

"ಪರವಾಯಿಲ್ಲ. ನೀನು ಏನೋ ಅಂತ ಇದ್ದೆ. ಸದ್ದು ಮಾಡದೆ ಒಳ್ಳೇ ಹುಡುಗಿಯನ್ನೇ ಕದ್ದು ಬಿಟ್ಟೆ. ಅಂಥ ಅದೃಷ್ಟ ಎಲ್ಲರಿಗೂ ಸಿಗಲಾರದು," ಎಂದು ಲೀಲಾವತಿಯಿಂದ ಸುದ್ದಿಯೆಲ್ಲವನ್ನೂ ತಿಳಿದ ಸದಾನಂದ ಶಾಂತಾರಾಮನನ್ನು ರೇಗಿಸಿದ.

"ಕ್ಷಮಿಸು ಸದಾನಂದ. ನಿಮ್ಮೀರ್ವರ ಹೃದಯ ವೈಶಾಲ್ಯವನ್ನು ಅರ್ಥ ಮಾಡಿಕೊಳ್ಳಲಾಗದ ಅಪರಾಧಿ ನಾನು," ಶಾಂತಾರಾಂ ಹೃತ್ಪೂರ್ವಕವಾಗಿ ಸದಾನಂದನನ್ನು ಕೇಳಿದ.

"ಕ್ಷಮಿಸಬೇಕೋ, ಶಿಕ್ಷಿಸಬೇಕೋ, ಅದರ ಇತ್ಯರ್ಥ ಆಮೇಲೆ. ಈಗ ಮುಂದಿನದೇನು ಯೋಚನೆ ಮಾಡಿದ್ದೀಯ," ಎಂದ ಸದಾನಂದ ಸಿಗರೇಟಿನ ಹೊಗೆಯುಗುಳುತ್ತಾ.

ಲೀಲಾವತಿ – ಪ್ರಭಾವತಿಯರಿಬ್ಬರೂ ಪೇಟೆಗೆ ಸಾಮಾನು ಖರೀದಿ ಮಾಡಲು ಹೋಗಿದ್ದುದರಿಂದ, ಇವರಿಬ್ಬರೇ ಇದ್ದರು ಮನೆಯಲ್ಲಿ. ಆ ಹೊತ್ತಿನಲ್ಲಿ ನಿಸ್ಸಂಕೋಚವಾಗಿ ಮಾತನಾಡಬಹುದೆಂದು ಆ ಮಾತು ತೆಗೆದಿದ್ದ ಸದಾನಂದ.

"ಮುಂದೆ ಏನು ಮಾಡಬೇಕೆಂಬುದೇ ನನಗೂ ತೋಚದಾಗಿದೆ. ನಿನ್ನನ್ನೇ ಕೇಳಬೇಕೆಂದಿದ್ದೆ. ನಿಜ ಹೇಳಬೇಕೆಂದರೆ ನಿನ್ನನ್ನು ನಂಬಿಯೇ ಬೊಂಬಾಯಿಗೆ ಬಂದದ್ದು. ಇಲ್ಲವಾದರೆ ಈ ಸಾಗರಕ್ಕಿಳಿಯುವ ಸಾಹಸ ಮಾಡುತ್ತಿರಲಿಲ್ಲ."

"ಅಂತೂ ಬೊಂಬಾಯಿ ಬಿಡುವ ಯೋಚನೆ ಇಲ್ಲವೆಂದಾಯಿತು."

"ಊಹೂ. ಅದೊಂದೇ ಮಾತು ಸಧ್ಯಕ್ಕೆ ನಿರ್ಧರವಾಗಿರುವುದು. ಇನ್ನು ಎಲ್ಲಾದರೂ ಕೆಲಸ ಹುಡಕಬೇಕು. ನಿನ್ನೆ ಮಧ್ಯಾಹ್ನ ಅದಕ್ಕೇದೇ ಹೋಗಿದ್ದೆ."

"ಯಾರಲ್ಲಿಗೆ ?"

"ಜ್ಯೂಪಿಟರ್ ಜನರಲ್ ಇನ್ಷುರೆನ್ಸ್ ಕಂಪನಿಯಲ್ಲಿ ನಮ್ಮ ಊರಿನ ದಾಮೋದರ ಹೆಗ್ಗಡೆ ಇದ್ದಾನೆ. ಎಲ್ಲಾದರೂ ಕೆಲಸ ಸಿಕ್ಕೀತೋ ಏನೋ ಎಂದು ವಿಚಾರಿಸಿದೆ."

"ಏನು ಹೇಳಿದ?"

"ನಮ್ಮಲ್ಲಾವುದೂ ಸ್ಥಳ ಇಲ್ಲ. ಬೇರೆ ಕಡೆ ವಿಚಾರಿಸಿ ತಿಳಿಸುತ್ತೇನಿ ಎಂದ."

"ನಿನ್ನ ವಿಷಯ ಮತ್ತೇನೂ ಅವನಿಗೆ ಹೇಳಲಿಲ್ಲ ತಾನೇ?"

"ಇಲ್ಲ."

"ಒಳ್ಳೆಯದು ಮಾಡಿದೆ. ಇಂಥ ವಿಷಯ ಎಷ್ಟು ಕಡಮೆ ಜನಕ್ಕೆ ತಿಳಿದರೆ ಅಷ್ಟು ಮೇಲು. ಎಲ್ಲರ ಕಣ್ಣು, ಬಾಯಿ ಒಂದೇ ರೀತಿ ಇರುವುದಿಲ್ಲ."

"ನನಗೂ ಅದರ ಸಾಕಷ್ಟು ಅನುಭವವಾಯಿತು."

"ಅನುಭವವಾದದ್ದೇ ಒಳಿತಾಯಿತು. ಒಮ್ಮೆ ಸುಟ್ಟ ಬೆರಳು ಮತ್ತೆ ಬೆಂಕಿಯ ಬಳಿ ಸುಳಿಯುವುದಿಲ್ಲ."

ಅವನ ಮಾತು ಕೇಳಿ ಶಾಂತಾರಾಂ ಅಚ್ಚರಿಗೊಂಡ. ಅವರಿಬ್ಬರ ಮಿತ್ರತ್ವ ಇಂದು ನಿನ್ನೆಯದಲ್ಲ, ಕಾರ್ಕಳದಲ್ಲಿ ಜೊತೆಗೆ ಸಾಲೆ ಕಲಿಯುವಾಗಿನಿಂದಲೂ ಸ್ನೇಹಿತರು. ಆಗ ಶಾಂತಾರಾಮನೇ ಅವನನ್ನು ತಮಾಷೆ ಮಾಡುತ್ತಿದ್ದ – 'ಭಂಟರ ಹುಡುಗನಿಗೆ ಬುದ್ಧಿ ಕಡಿಮೆ' ಎಂದು.

"ಇಷ್ಟೆಲ್ಲವನ್ನು ಎಲ್ಲಿ ಕಲಿತೆಯೋ ಸದಾನಂದ?"

"ಜೀವನವೇ ಜಗದ್ಗುರು ಶಾಂತಾರಾಂ, ಅದು ಕಲಿಸಲಾಗದುದನ್ನು ಯಾವ ವಿಶ್ವವಿದ್ಯಾನಿಲಯವೂ ಕಲಿಸಲಾರದು. ನಾನು ನೀನೆಂದುಕೊಂಡಷ್ಟು ಬುದ್ಧಿವಂತನಲ್ಲ. ಆದರೆ ನಿನ್ನ ಹಾಗಲ್ಲ. ಮೊದಲಿನಿಂದಲೂ ಸ್ವಲ್ಪ ಗಾಳಿ ಗುದರೆ ಸವಾರಿ ಮಾಡುವ ಸ್ವಭಾವ ನಿನ್ನದು. ಮಂಗಳೂರಿನಲ್ಲಿ ಕಾಲೇಜಿನಲ್ಲಿ ಓದುವಾಗ ಕುಮುದಿನಿಯೊಂದಿಗಾದ ಸರಸ–ವಿರಸ ಈಗಲೂ ನೆನಪಿದೆ...."

"ಮತ್ತದನ್ನು ನೆನಪಿಸಬೇಡ ಸದಾನಂದ...."

"ನಾನು ಬಲ್ಲೆ. ನಿನ್ನ ಆ ಹುಣ್ಣು ಇನ್ನೂ ಮಾದಿಲ್ಲ. ಈಗ ಈ ಹುಡುಗಿಯೊಂದಿಗೆ ನೀನು ಬಂದುದನ್ನು ನೋಡಿ, ಅವಳ ಕೊರಳಲ್ಲಿ ಮಾಂಗಲ್ಯ ವಿಲ್ಲವೆಂದು ಲೀಲಾ ಹೇಳಿದಾಗ, ಮತ್ತೇನು ಮಾಡಿಕೊಂಡೆಯೋ ಎಂದು ಗಾಬರಿಯಾಗಿತ್ತು. ಆದರೆ – ನಿನ್ನ ಅದೃಷ್ಟ, ನಿನ್ನ ಜೋಳಿಗೆಗೆ ರತ್ನ ಬಂದು

ಬಿದ್ದಿದೆ. ಎಚ್ಚರದಿಂದ ಕಾಪಾಡಿಕೋ. ನಿನಗಾಗಿ ಸಾಧ್ಯವಿದ್ದುದನ್ನೆಲ್ಲಾ ಮಾಡಲು ನಾನು ಸಿದ್ಧವಾಗಿದ್ದೇನೆ. ಕೆಲಸದ್ದೂ ಅಷ್ಟು ಯೋಚನೆ ಮಾಡ ಬೇಡ, ಹಾಯಾಗಿ ಇಲ್ಲಿರು. ಅದರ ವ್ಯವಸ್ಥೆ ನಾನು ಮಾಡುತ್ತೇನೆ."

"ಸದಾನಂದ – ನಿನ್ನ ಸ್ನೇಹದ ಋಣ– ಈ ಜನ್ಮದಲ್ಲಿ ತೀರಿಸಲಾಗದ್ದು." ಕೃತಜ್ಞತೆ ತುಂಬಿ ತುಳುಕುವ ಧ್ವನಿಯಲ್ಲಿ ಶಾಂತಾರಾಂ ಹೇಳಿದ.

"ನಿಜ. ಅದಕ್ಕೇ ಆ ಪ್ರಯತ್ನ ಮಾಡಬೇಡ," ಎಂದ ಸದಾನಂದ. ಆರಿಹೋಗುತ್ತಿದ್ದ ಸಿಗರೇಟಿನಲ್ಲಿ ಮತ್ತೊಂದು ಸಿಗರೇಟು ಹೊತ್ತಿಸಿಕೊಂಡು.

ಸದಾನಂದ, ಭಾರತದ ಸುಪ್ರಸಿದ್ಧ ಜಾಹೀರಾತು ಸಲಹೆಗಾರರಾದ ವಾಲ್ಟರ್ ಥಾಮ್ಸನ್ ಸಂಸ್ಥೆಯ ಬೊಂಬಾಯಿ ಕಛೇರಿಯಲ್ಲಿ ಕನ್ನಡ ಶಾಖೆಯ ಮುಖ್ಯಸ್ಥನಾಗಿದ್ದುದರಿಂದ, ಅವನಿಗೆ ಬೊಂಬಾಯಿನ ದೊಡ್ಡ ವ್ಯಾಪಾರಸ್ಥರ ನೇಕರ ಪರಿಚಯವಿತ್ತು. ಆದ್ದರಿಂದಲೇ ಸ್ವಲ್ಪ ಪ್ರಯತ್ನಪಟ್ಟರೆ, ಯಾವು ದಾದರೊಂದು ಒಳ್ಳೆಯ ಸಂಸ್ಥೆಯಲ್ಲಿ ಶಾಂತಾರಾಮನಿಗೊಂದು ಕೆಲಸ ಕೊಡಿಸುವುದು ಕಷ್ಟವಾಗಲಾರದೆಂದೇ ನಂಬಿದ್ದ. ಮರುದಿನದಿಂದ ಆ ಪ್ರಯತ್ನವನ್ನು ಆರಂಭಿಸಿದ. ಎಂಥದೋ ಬೇಕಾಬಿಟ್ಟಿಯ ಕೆಲಸನಾಗಿದ್ದರೆ, ಬೇಗ ಸಿಗಬಹುದಾಗಿತ್ತು. ಆದರೆ ಸಾಕಷ್ಟು ಆದಾಯವಿರದೆ, ಬೊಂಬಾಯಿ ನಲ್ಲಿ ಸಂಸಾರ ಸಾಗಿಸುವುದು ಎಷ್ಟು ಕಷ್ಟವೆಂಬುದು, ಸದಾನಂದನಿಗೆ ಹಲವರ್ಷಗಳ ಬೊಂಬಾಯಿ ಜೀವನದಿಂದ ಅರಿವಾಗಿತ್ತು. ಕೆಲಸವೂ ಶಾಂತಾ ರಾಮನಿಗೆ ಹೊಂದಿಕೆಯಾಗಬೇಕು, ಸಂಬಳವೂ ಸಾಕಷ್ಟು ಸಿಗಬೇಕು – ಅಂಥ ಕೆಲಸ ಹುಡುಕಬೇಕೆಂದು ಪ್ರಯತ್ನಪಟ್ಟುದರಿಂದ, ಅಂದುಕೊಂಡಷ್ಟು ಬೇಗ, ಕೆಲಸ ಸಿಕ್ಕಲಿಲ್ಲ. ಹತ್ತಾರು ಕಡೆ ಶಾಂತಾರಾಮನಿಗಾಗಿ ಕೆಲಸಕ್ಕೆ ಹೇಳಿದ್ದ ಸದಾನಂದನಿಗೇನೋ ಎಲ್ಲಾದರೂ ಕೆಲಸ ಸಿಗುವುದೆಂಬ ಭರವಸೆ ಇತ್ತು. ಕೆಲಸ ಸಿಕ್ಕಿ, ಸರಿಯಾದ ವ್ಯವಸ್ಥೆಯಾಗುವವರೆಗೂ ಅವರಿಬ್ಬರೂ ತಮ್ಮಲ್ಲೇ ಇರಬೇಕೆಂದು ಸದಾನಂದ – ಲೀಲಾವತಿ ಇಬ್ಬರೂ ತುಂಬಾ ಒತ್ತಾಯ ಮಾಡಿ ದ್ದರು. ಆದರೂ ಇವರಿಗೇ ಸಂಕೋಚ.

ಸದಾನಂದ – ಲೀಲಾವತಿಯರ ಮನದಷ್ಟು ಅವರಿದ್ದ ಮನೆ ವಿಶಾಲ ವಾಗಿರಲಿಲ್ಲ. ನಾಲ್ಕು ಸುಮಾರಾದ ಕೋಣೆಗಳ 'ಫ್ಲಾಟ್' ಅದು. ಅಡಿಗೆ ಮನೆ, ಬಚ್ಚಲುಮನೆ ಬಿಟ್ಟರೆ, ಉಳಿದದ್ದು ಎರಡು ಕೋಣೆ. ಅವರಲ್ಲಿ ಒಂದು ಅವರ ಶಯ್ಯಾಗೃಹ, ಇನ್ನೊಂದು ಬಂದು ಹೋಗುವವರು ಕುಳಿತುಕೊಳ್ಳುವ

ಡ್ರಾಯಿಂಗ್ ರೂಂ. ಅದನ್ನೇ ಅಚ್ಚುಕಟ್ಟಾಗಿ ಅಲಂಕಾರವಾಗಿ ಇಟ್ಟುಕೊಂಡಿದ್ದರು. ಈಗ ಡ್ರಾಯಿಂಗ್ ರೂಂ ಆಗಿದ್ದುದೇ ರಾತ್ರಿ ಇವರಿಬ್ಬರ ಶಯ್ಯಾಗೃಹವಾಗಬೇಕಾಗಿತ್ತು. ಹಾಗಾಗಿ ಅಲ್ಲಿರಲು ಶಾಂತಾರಾಂ ಪ್ರಭಾವತಿಯರಿಗೆ ಸಂಕೋಚವೆನಿಸತೊಡಗಿತು. ಎಷ್ಟು ದಿನ ಅಲ್ಲಿ ಅವರಿಗೆ ಅಡಚಣೆ ಮಾಡಿಕೊಂಡಿರುವುದು ?

ಆದರ ಜೊತೆಗೆ ಸದಾನಂದನ ಮೇಲೆ ಬಿದ್ದ ಇವರ ವೆಚ್ಚದ ಭಾರವೂ ಇವರ ಮನಸ್ಸನ್ನು ಕೊರೆಯುತ್ತಿತ್ತು. ಶಾಂತಾರಾಮನ ಬಳಿ ಬೆಂಗಳೂರಿನಲ್ಲಿ ಪ್ರಭಾವತಿಯ ಬಳೆ ಮಾರಿ ಬಂದ ಹಣದಲ್ಲಿ ಅಲ್ಪ ಸ್ವಲ್ಪ ಉಳಿದಿತ್ತು. ಅಷ್ಟಾದರೂ ಸದಾನಂದನ ಕೈಯಲ್ಲಿ ಹಾಕಬೇಕೆಂದು ಶಾಂತಾರಾಂ ಪ್ರಯತ್ನಪಟ್ಟ. ಆದರೆ ಸದಾನಂದ ಅದಕ್ಕೆ ಒಪ್ಪಲಿಲ್ಲ. ಪ್ರಭಾವತಿಯ ಮೂಲಕ ಲೀಲಾವತಿಯ ಕೈಗೆ ಕೊಡಲು ಯತ್ನಿಸಿದ. ಸದಾನಂದ ಸುಮ್ಮನೆ ಬೇಡವೆಂದರೆ ಲೀಲಾವತಿ ಸಿಟ್ಟೇ ಆದಳು –

"ಇದೇನು ದುಡ್ಡು, ಅನ್ನ ಹಾಕಿದ್ದಕ್ಕೆ ಚಾರ್ಜೇ? ಸಾಧ್ಯವಿದ್ದರೆ ಸ್ನೇಹಕ್ಕೂ ಹೀಗೆ ದುಡ್ಡು ಕೊಟ್ಟು ಋಣ ತೀರಿಸುತ್ತಿದ್ದೆಯೇನು ?" ಎಂದು ಕೇಳಿದಳು. ಪ್ರಭಾವತಿ ಮರು ಮಾತನಾಡದೆ ಸುಮ್ಮನಾಗಬೇಕಾಯಿತು.

ಹೀಗಿರುವಾಗ ಇವರ ಮೇಲೆ ಎಷ್ಟು ದಿನ ಭಾರ ಹಾಕುವುದು. ಎಂಥದಾದರೂ ಕೆಲಸ ಸಿಕ್ಕರಾಗುತ್ತಿತ್ತು ಎಂದು ಶಾಂತಾರಾಂ ಚಡಪಡಿಸುತ್ತಿದ್ದ. ಅದಕ್ಕೆ ಸದಾನಂದನದೊಂದೇ ಉತ್ತರ –

"ಎಂಥದೋ ಕೆಲಸವೆಂದು ಹೋಗಿ ತಗುಲಿಕೊಳ್ಳುವುದು ಸುಲಭ. ಆದರೆ ಇಲ್ಲಿನ ಪರಿಸ್ಥಿತಿ ಸೀನರಿಯೆ. ಒಂದೊಂದು ಕೆಲಸದಲ್ಲಿ ಒಂದೊಂದು ತರಹ ಸಂಕಟ. ನಮ್ಮ ಆಫೀಸಿನದೇ ತಗೋ. ನನ್ನ ಕೈ ಕೆಳಗೆ ಇಬ್ಬರು ಮೂವರು ಮೈಸೂರು, ಧಾರವಾಡದ ಕಡೆಯ ಜನ ಇದಾರೆ. ಅವರಿಗೆ ಈ ಮಂಗಳೂರಿನವನು ತಮ್ಮ ಮೇಲೆ ಇದಾನಲ್ಲಾ ಎಂದು ಹೊಟ್ಟೆ ಉರಿ. ಹೇಗಾದರೂ ನನ್ನನ್ನು ತಪ್ಪಿಸಬೇಕೆಂದು ಒಳಗೇ ಪ್ರಯತ್ನ ಪಡುತ್ತಿದ್ದಾರೆ. ಹೀಗೇ ಕನ್ನಡಿಗ – ಮರಾಟ, ಮರಾಟ–ಗುಜರಾತಿ, ತಮಿಳ–ಮಲೆಯಾಳಿ ಸಾವಿರದೆಂಟು ಸುಳಿ."

"ಅದೆಲ್ಲಾ ಇಲ್ಲದೆ, ಎಲ್ಲ ವಿಧದಲ್ಲೂ ನಮಗೆ ಅನುಕೂಲವಾದದ್ದೇ

ಸಿಗಬೇಕೆಂದರೆ ಆಗುತ್ತದೆಯೇ ಸದಾನಂದ? ಬೆಗ್ಗರ್ಸ್ ಆರ್ ನೋ ಚೂಸರ್ಸ್” (ತಿರುಪೆಯವರಿಗೆ ಆರಿಸುವ ಅಧಿಕಾರವಿಲ್ಲ)

“ಅದು ಸರಿಯಾದರೂ, ಸೇರುವಾಗ ಆದಷ್ಟು ಒಳ್ಳೆಯ ಜಾಗಕ್ಕೆ ಸೇರುವುದು. ನಂತರ ಬಂದದ್ದು ಬರಲಿ. ಕೊಂಚ ಸಮಾಧಾನವಾಗಿರು. ಹತ್ತಾರು ಕಡೆ ಹೇಳಿದೇನೆ. ಒಂದೆರಡು ಕಡೆ ಸಿಗುವ ಹಾಗಿದ್ದರೂ ನಾನೇ ಬೇಡವೆಂದೆ. ಇಷ್ಟರಲ್ಲೇ ಅನುಕೂಲವಾದ ಕಡೆ ಸಿಗಬಹುದು.” ಈ ಮಾತು ಕೇಳಿ ಶಾಂತಾರಾಂ ತಣ್ಣಗಾಗಬೇಕಾಗುತ್ತಿತ್ತು.

ದಿನವೂ ಸಂಜೆ ಶಾಂತಾರಾಂ ಸದಾನಂದ ಆಫೀಸಿನಿಂದ ಬರುವುದನ್ನೇ ಕಾದು ಕೂಡುವನು – ಏನಾದರೂ ಸುದ್ದಿ ತರುವನೆಂದು.

ಕಾಯುವುದು – ನಿರಾಶನಾಗುವುದು.

ಹೊತ್ತುಗೊತ್ತಿಗೆ ಉಂಡು, ಅತ್ತಿತ್ತ ಅಡ್ಡಾಡಿ ಬಂದು, ಬೆಚ್ಚಗೆ ಮಲಗುವುದು. ಈ ಆಲಸ್ಯ ಜೀವನದ ಬೇಸರ ಶಾಂತಾರಾಮನ ಮನಸ್ಸನ್ನು ದಿನ ದಿನಕ್ಕೆ ಪೆಡಸು ಮಾಡುತ್ತಿತ್ತು.

ಪ್ರಭಾವತಿಗೆ ಲೀಲಾವತಿಯೊಂದಿಗೆ ಹರಟೆ, ಪೇಟೆಗೆ ಹೋಗಿ ಬರುವುದು, ಅವಳೊಂದಿಗೆ ಮನೆಗೆಲಸದಲ್ಲಿ ನೆರವಾಗುವುದು, ಇದರಲ್ಲಿ ಹೇಗೋ ಹೊತ್ತು ಹೋಗುತ್ತಿತ್ತು. ಆದರೆ ಶಾಂತಾರಾಮನಿಗೆ –

ಕೆಲಸವಿಲ್ಲದ ಜೀವನ – ದಿನವೂ ಆಸೆ, ದಿನವೂ ನಿರಾಶೆ – ಹೀಗಾಗಿ ಅವನ ಮನಸ್ಸು ಆರಲಾಗದೆ, ಉರಿಯಲಾರದೆ ಇರುವ ಬೂದಿಯ ನಡುವಿನ ಕೆಂಡವಾಗಿತ್ತು. ಸಣ್ಣ ಗಾಳಿ ಬೀಸಿದರೂ ಅದು ಕಿಡಿಗೆದರುವುದು.

ಪ್ರಭಾವತಿಯ ಮನಸ್ಸಿನೊಳಗೂ ಪರಾವಲಂಬಿಯಾದ ಜೀವನ ಕುಟ್ಟೆ ಹುಳುವಿನಂತೆ ಒಳಗೇ ಕೊರೆಯುತ್ತಿದ್ದರೂ, ಅದನ್ನು ತೋರಗೊಡುತ್ತಿರಲಿಲ್ಲ.

ಹೀಗಿರುವಾಗಲೇ ಶಾಂತಾರಾಂ ಒಂದು ದಿನ ಸಂಜೆ ತನಗೆ ಕೆಲಸ ಸಿಕ್ಕ ಸಮಾಚಾರ ತೆಗೆದುಕೊಂಡು ಬಂದ. ಅದನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು. ಸದಾನಂದ ಆಫೀಸಿನಿಂದ ಹಿಂದಿರುಗುವುದನ್ನೇ ಕಾಯುತ್ತಿದ್ದ ಶಾಂತಾರಾಂ. ಅವನು ಬರುತ್ತಿದ್ದ ಹಾಗೇ ಈ ಸಂತೋಷದ ಸಮಾಚಾರವನ್ನು ಹೇಳಿದ.

“ಕಂಗ್ರಾಚ್ಯುಲೇಷನ್ಸ್” ಎಂದು ಅಭಿನಂದನೆಗಳನ್ನು ಹೇಳಿ, ಬಟ್ಟೆ

ಬದಲಿಸಿ ಮುಖ ತೊಳೆದು ಬಂದುಬಿಡುತ್ತೇನೆ. ಬಳಿಕ ಉಳಿದ ವಿವರಗಳನ್ನು ಹೇಳುವಿಯಂತೆ" ಎಂದ.

"ಎಲ್ಲಿಯಂತೆ ಕೆಲಸ, ಯಾರು ಹೇಳಿದರು?" ಮುಖ ತೊಳೆದು ಕಾಫಿ ಕುಡಿಯುತ್ತಾ ಕೇಳಿದ ಸದಾನಂದ.

"ಹಿಂದೆ ನಾನು ಹೇಳಿರಲಿಲ್ಲವೇ ದಾಮೋದರ ಹೆಗ್ಗಡೆಗೆ ಹೇಳಿದ್ದೆ ಅಂತ. ಇವತ್ತು ಫೋರ್ಟ್‌ನಲ್ಲಿ ಬರುತ್ತಿರುವಾಗ 'ವೇ ಸೈಡ್ ಇನ್'ನಲ್ಲಿ ಸಿಕ್ಕಿದ. ಅವರ ಆಫೀಸಿನಲ್ಲೇ ಒಂದು ಕೆಲಸ ಖಾಲಿ ಇದೆಯಂತೆ, 'ಅಕೌಂಟ್ಸ್ ಡಿಪಾರ್ಟ್‌ಮೆಂಟ್'ನಲ್ಲಿ. ಆ ಶಾಖೆಯ ಮುಖ್ಯಾಧಿಕಾರಿಯೂ ನಮ್ಮ ಕಡೆಯವರೇ ಅಂತೆ – ಜಿ. ಎಸ್. ಬೈಂದೂರ್ ಅಂತ. ಅವರೇನೋ ನನಗೇ ಆ ಕೆಲಸ ಕೊಡಿಸಲು ಒಪ್ಪಿದಾರೆ, ನಾಳೆ ಬಂದು ಮಾತಾಡು ಎಂದು ಹೇಳಿದ. ಹಾಗೇ ಅವನ ಜೊತೆಗೆ ಆಫೀಸಿನವರೆಗೂ ಹೋಗಿದ್ದೆ. ಬೈಂದೂರ್ ಸಿಕ್ಕಿದ್ದರು. ಅನಿರೀಕ್ಷಿತವಾಗಿ ಮಾತುಕತೆ ಎಲ್ಲಾ ನಡೆದು, ನಾಳೆನಿಂದಲೇ ಕೆಲಸಕ್ಕೆ ಬನ್ನಿ, ಲೆಟರ್ ಆಫ್ ಅಪಾಯಿಂಟ್‌ಮೆಂಟ್ ಕೊಡಿಸುತ್ತೇನೆ ಎಂದು, ನನ್ನಿಂದ ಅಪ್ಲಿಕೇಷನ್ ಕೂಡಾ ತೆಗೆದುಕೊಂಡರು."

ಅವನು ಹೇಳುವುದನ್ನೆಲ್ಲಾ ಸಮಾಧಾನವಾಗಿ ಕೇಳಿ, ಬಳಿಕ ಸದಾನಂದ ಕೇಳಿದ –

"ಸಂಬಳ ಎಷ್ಟಂತೆ?"

"ಆರಂಭಕ್ಕೆ ಎಪ್ಪತ್ತೈದು ರೂಪಾಯಿ."

"ಆ ಕೆಲಸಕ್ಕೆ ನೀನು ಒಪ್ಪಿಕೊಳ್ಳಬಾರದಾಗಿತ್ತು ಶಾಂತಾರಾಂ."

ಇದ್ದಕ್ಕಿದ್ದ ಹಾಗೇ ಸದಾನಂದ ಹೇಳಿದ ಮಾತು ಕೇಳಿ ಶಾಂತಾರಾಂ ಚಕಿತನಾದ.

"ಏಕೆ?"

"ಉಳಿದ ಕಾರಣ ಏನೇ ಇರಲಿ – ಆ ಹಣದಲ್ಲಿ ನೀವಿಬ್ಬರೂ ಬೊಂಬಾಯಿನಲ್ಲಿ ಜೀವಿಸುವುದು ಸಾಧ್ಯವಿದೆಯೇ? ಯೋಚನೆ ಮಾಡಿದೆಯಾ?"

"ಸಂಬಳ ಕಡಿಮೆ, ನಿಜ. ಆದರೆ ನಿರುದ್ಯೋಕ್ಕಿಂತ ಅದು ಮೇಲಲ್ಲವೇ? ಅಷ್ಟಕ್ಕೂ ಕಡಿಮೆ ಸಂಬಳ ಬರುವವರು ಎಷ್ಟು ಜನ ಬೊಂಬಾಯಿನಲ್ಲಿಲ್ಲ."

"ಇಲ್ಲ, ಎಂದು ನಾನು ಹೇಳುವುದಿಲ್ಲ. ಆದರೆ ಅವರ ಹಾಗೆ ಜೀವಿಸುವುದು ನಿನಗೆ, ನನಗೆ ಸಾಧ್ಯವಿಲ್ಲ. ಕೊಂಚ ನಿಧಾನಿಸು,"

"ಇಷ್ಟು ದಿನ ಕಾದದ್ದಾಯಿತಲ್ಲ. ಇನ್ನೂ ಹೀಗೇ ಕೈ ಬೀಸಿಕೊಂಡು ಇರು ಎಂದೇ ?"

"ನಿನಗೇನಾದರೂ ತೊಂದರೆಯಾಗಿದೆಯೇ ?"

"ತೊಂದರೆಯ ಮಾತಲ್ಲ. ಆದರೆ ಇದು ಗಂಡಸು ಇರಬೇಕಾದ ರೀತಿಯಲ್ಲ."

ಶಾಂತಾರಾಂ ಬಿರುಸಾಗಿ ಹೇಳಿದ ಆ ಮಾತನ್ನು. ಆ ಮಾತು ಕೇಳಿ ಮೃದು ಹೃದಯದ ಸದಾನಂದನಿಗೆ ಅಷ್ಟೇ ಸಾಕಾಯಿತು. ಮುಖ ತಗ್ಗಿಸಿ, ಸಿಗರೇಟು ಹತ್ತಿಸಿಕೊಂಡು, "ಕ್ಷಮಿಸು ಶಾಂತಾರಾಂ" ಎಂದು ಹೇಳಿ ಕೋಣೆಯನ್ನು ಬಿಟ್ಟು, ಮುಂದಿನ ವರಾಂಡಕ್ಕೆ ಹೋಗಿ ನಿಂತುಕೊಂಡ. ಅವರಿಬ್ಬರ ಸಂಭಾಷಣೆಯನ್ನು ಅಲ್ಲೇ ಇದ್ದ ಪ್ರಭಾವತಿ ಕೇಳಿದಳು. ಲೀಲಾವತಿಗೂ ಆ ಮಾತು ಕೇಳಿಸಿರಬೇಕು. ಇಂಥ ಒರಟು ಮಾತು ಕೇಳಿ ಆಕೆ ತಾನೆ ಎಷ್ಟು ನೊಂದುಕೊಳ್ಳಬೇಡ. ಆ ಭಾವನೆಯಿಂದಲೇ ಅವಳ ಕರುಳು ಕಿವುಚಿದಂತಾಯಿತು. ಅವಳಿಗೂ ತಡೆಯಲಾಗಲಿಲ್ಲ. ಆದರೂ ಧ್ವನಿಯ ಏರನ್ನು ತಡೆಹಿಡಿದು, ಮೃದುವಾಗಿ –

"ನೀವು ಆ ರೀತಿ ಮಾತಾಡಬಾರದಾಗಿತ್ತು !" ಎಂದಳು.

ಯಾವುದೋ ಗಳಿಗೆಯಲ್ಲಿ ಒರಟು ಮಾತಾಡಿ, ಹಾಗಾಡಬಾರದಾಗಿತ್ತೆಂದು ಪರಿತಪಿಸುತ್ತಿದ್ದ ಶಾಂತಾರಾಮನಿಗೆ, ಪ್ರಭಾವತಿ ತನ್ನನ್ನು ತಿದ್ದ ಹೊರಟಿದು ಸಹನವಾಗಲಿಲ್ಲ.

"ಏನು ಮಾತಾಡಬಾರದಾಗಿತ್ತು ? ಹೀಗೇ ಇರಬೇಕೆಂದೇನು ? ಮಾತು ರೀತಿಯನ್ನು ನಾನು ನಿನ್ನಿಂದ ಕಲಿಯಬೇಕಾಗಿಲ್ಲ."

ಅವನು ನಿರೀಕ್ಷಿಸಿಕೊಂಡುದಕ್ಕಿಂತಲೂ ಬಿರುಸಾಗಿ ಮಾತು ಬಂತು. ಪ್ರಭಾವತಿಗೂ ಸಹನೆ ತಪ್ಪಿತು.

"ಅಷ್ಟು ತಿಳಿದವರು ಹೀಗೆ ಬರಬಾರದಾಗಿತ್ತು. ಈಗ ಈ ರೀತಿ ಮಾತನಾಡುವುದು ಕೃತಘ್ನತೆ."

ಹತ್ತು ನಾಲಗೆಯ ಚಾಟಿಯಂತೆ ಅಪ್ಪಳಿಸಿತು ಅವಳ ಮಾತು.

"ಇದು ತಲೆಹರಟೆಯ ಮಾತು." – ಸಿಟ್ಟಿನಲ್ಲಿ ಕನಲಿ ಹೇಳಿದ ಶಾಂತಾರಾಂ.

ಆ ಮಾತಿಗೆ ಸಿಟ್ಟಿನ ಮತ್ತೇರಿದ ಪ್ರಭಾವತಿ ಏನು ಉತ್ತರ ಕೊಡುತ್ತಿದ್ದಳೋ. ಆದರೆ ಏರಿದ ಧ್ವನಿಯ ಅವಳ ಮಾತು ಕೇಳಿ ಹೊರಬಂದ ಲೀಲಾವತಿ, ಅವಳನ್ನು ಒಳಗೆಳೆದುಕೊಂಡಳು. ಸಿಟ್ಟಿನಿಂದ ಪ್ರಭಾವತಿಯ ಮೈ ಕಂಪಿಸುತ್ತಿತ್ತು. ಸುಯ್ಯುವ ಉಸುರಿನ ವೇಗಕ್ಕೆ ನಾಸಾಪುಟಗಳರಳಿ, ತುಟಿ ನಡುಗುತ್ತಿತ್ತು. ಮುಖ ಕೆಂಪೇರಿ ಉದ್ವಿಗ್ನವಾಗಿತ್ತು.

ಪ್ರಭಾವತಿಯನ್ನು ತನ್ನ ಕೋಣೆಯಲ್ಲಿ ಬಲವಂತವಾಗಿ ಕೂಡಿಸಿ, ಬಾಗಿಲೆಳೆದುಕೊಂಡು ಬಂದು, ಶಾಂತಾರಾಮನ ಇದಿರು ನಿಂತಳು ಲೀಲಾವತಿ. ಆವಳ ಶಾಂತ, ಗಂಭೀರ ಮುಖದ ಮೇಲೆ ಯಾವ ಭಾವ ವಿಕಾರದ ಕುರುಹೂ ಇರಲಿಲ್ಲ. ಅದಕ್ಕೆ ಪ್ರತಿಯಾಗಿ ಅವಳ ತುಟಿಗಳ ಮೇಲೆ ಮಮತೆಯ ಮಂದಹಾಸ ಮೃದುಲಾಸ್ಯವಾಡುತ್ತಿತ್ತು.

"ಸಿಟ್ಟು ಬಂದಿದೆಯೇ ಶಾಂತಣ್ಣ. ನನ್ನ ಮೇಲೆ ತೀರಿಸು, ಅಗೋ ಅಲ್ಲಿ ಅವರಿದಾರೆ ಅವರ ಮೇಲೆ ತೋರಿಸು. ನಿನ್ನಂತೆಯೇ, ನಿನ್ನ ಜೊತೆಗೇ ನೊಂದು ನರಳಿದವರ ಮೇಲೆ ಸಿಟ್ಟೇ? ಸಿಟ್ಟಿಗೆ ವಿವೇಚನೆಯನ್ನು ಮಾರಿ ಬಿಟ್ಟೆಯಾ? ಅಷ್ಟು ಸಿಟ್ಟಿದ್ದರೆ ನನಗೇ ಒಂದು ಏಟು ಹಾಕು."

ಬಹು ಮೃದುವಾಗಿ, ಪಕ್ಕದ ಕೋಣೆಯಲ್ಲಿದ್ದ ಪ್ರಭಾವತಿಯ ಕಿವಿಗೆ ಆ ಮಾತು ಬೀಳದಂತೆ ಹೇಳಿದಳು ಲೀಲಾವತಿ.

ಶಾಂತಾರಾಮನ ಸಿಟ್ಟು, ಸೆಡಕು, ಪ್ರತಿಭಟನೆಯನ್ನು ಎದುರಿಸಲು ಮಸೆದು ಕಾದಿತ್ತು. ಆದರೆ ಸರಳ ಸುಂದರ ಸಹೃದಯತೆಯ ಇದಿರು ಸೋತು ತಲೆಬಾಗಲೇಬೇಕಾಯಿತು. ಪ್ರತಿಭಟನೆಯೇ ಇಲ್ಲದಿದ್ದಲ್ಲಿ ಉದ್ರೇಕಕ್ಕೆ ಎಲ್ಲಿ ತಾವು? ಹೂ ನಗೆಯ ಇದಿರು ಉರಿಕ್ರೋಧ ಉಲ್ಬಣಿಸಲಾರದೆ ಕಾಲ ಸದ್ದು ಕೇಳಿ ಕಲ್ಲಡಿಯಲ್ಲಿ ಹುದುಗುವ ಹಾವಿನಂತೆ, ಎಲ್ಲೋ ಅವಿತುಕೊಂಡಿತು.

"ನನ್ನನ್ನು ಕ್ಷಮಿಸು ಲೀಲಕ್ಕ" ಎಂದವನೇ ಅಲ್ಲಿರಲಾರದೆ ಹೊರಗೆ ಹೊರಟುಹೋದ. ಸದಾನಂದ ಆ ದೃಶ್ಯವನ್ನು ನೋಡುತ್ತಾ ನಿಂತಿದ್ದವನು –

"ಇನ್ನವನು ದಾರಿಗೆ ಬರುತ್ತಾನೆ. ಆ ಹುಡುಗಿ ಏನು ಮಾಡುತ್ತಿದ್ದಾಳೋ ನೋಡು. ಇಬ್ಬರೂ ತಾವು ಬೆಳೆದು ದೊಡ್ಡವರಾದೆವೆಂದು ತಿಳಿದುಕೊಂಡಿದಾರೆ. ಆದರೆ ಇನ್ನೂ ಶುದ್ಧ ಎಳತು" ಎಂದ.

"ಪಾಪ! ನೀವೊಬ್ಬರೇ ಬೆಳೆದು ದೊಡ್ಡವರಾಗಿರೋರು."

ಎಂದು ಗಂಡನ ಕೆನ್ನೆಯನ್ನು ಮೃದುವಾಗಿ ತಟ್ಟಿ ಲೀಲಾವತಿ, ಪ್ರಭಾವತಿಯ ಬಳಿ ಸಾರಿದಳು. ಪ್ರಭಾವತಿ ಇನ್ನೂ ಸಿಟ್ಟಿನ ಪಂಜರದಲ್ಲೇ ಸುತ್ತಾಡುತ್ತಿದ್ದಳು. ಅವಳನ್ನು ನೋಡಿ ಲೀಲಾವತಿಗೆ ನಗು ಬಂತು.

"ಪ್ರಭಾ, ದಿನವೂ ನೀನು ಹೀಗೆ ಸಿಟ್ಟು ಮಾಡಿಕೊಳ್ಳುವುದಕ್ಕೆ ಏನು ಕೊಡಬೇಕು ಹೇಳು?"

"ಏಕೆ?" ಬಿಗಿದ ಧ್ವನಿಯಲ್ಲೇ ಕೇಳಿದಳು ಪ್ರಭಾವತಿ.

"ನಗುವಾಗಿರುವುದಕ್ಕಿಂತಲೂ ಈಗ ಹೆಚ್ಚು ಸುಂದರವಾಗಿ ಕಾಣುತ್ತಿ. ಕೆಂಪೇರಿದ ಕೆನ್ನೆ, ಹೊಳೆಯುವ ಕಣ್ಣು–ಇವು ಬೇಕೆಂದು ಬಯಸಿದ ಮಾತ್ರಕ್ಕೇ ಸಿಗುತ್ತವೆಯೇ? ಅದಕ್ಕೇ ಏನು ಕೊಡಬೇಕೆಂದು ಕೇಳಿದ್ದು. ಅಬ್ಬಾ, ಎಷ್ಟು ಸಿಟ್ಟು. ಸಿಟ್ಟಿನಲ್ಲಿ ಹೆಂಗಸರು ಹೀಗಿರುತ್ತಾರೆಂದೋ ಏನೋ ಗಂಡಸರು ಹೆಂಗಸರನ್ನು ಅಷ್ಟು ರೇಗಿಸುವುದು."

"ಲೀಲಾ, ಈ ಜಗತ್ತಿಗೆ ನೀನು ತುಂಬಾ ಒಳ್ಳೆಯವಳು. ಹಾಗೆಂದು ನಿಮಗೆ ಅಪಮಾನ ಮಾಡಬೇಕೇ?"

ಒಂದು ಗಳಿಗೆ ಏನೋ ಸಂದಿಗ್ಧ ಒದಗಿದವಳಂತೆ, ಅರ್ಥವನ್ನು ಬೆದಕುವ ನೋಟದಿಂದ ಪ್ರಭಾವತಿಯ ಮೋರೆಯನ್ನು ದಿಟ್ಟಿಸಿದಳು ಲೀಲಾವತಿ.

"ಏನು ಲೀಲಾ, ಹಾಗೆ ನೋಡುತ್ತಿದ್ದೀಯ. ನನ್ನ ಸೌಂದರ್ಯವನ್ನೇ?"

"ಅದೇನೋ ನೋಡಬೇಕಾದದ್ದೇ ಬಿಡು. ಆದರೆ ನಾನು ಅದನ್ನಲ್ಲ ನೋಡುತ್ತಿದ್ದುದು."

"ಮತ್ತೇನು?"

"ಅವರು ಹೇಳಿದರು–ನೀನು ಬೆಳೆದರೂ ಹುಡುಗಿಯೇ ಎಂದು. ಅದು ನಿಜವೋ ಸುಳ್ಳೋ ಎಂದು ನೋಡುತ್ತಿದ್ದೆ...."

"ನಿನಗೆ ಏನನಿಸಿತು."

"ಅವರ ಮಾತೇ ನಿಜವಾಯಿತಲ್ಲಾ ಎಂದು ವ್ಯಥೆಯಾಯಿತು."

"ಲೀಲಾ, ಇದು ನನ್ನನ್ನು ಶಾಂತಗೊಳಿಸುವ ಪ್ರಯತ್ನ–ನನ್ನಿಂದ ನಿಮಗೆಷ್ಟು ವ್ಯಥೆಯಾಗಿದೆಯೆಂದು ನಾನು ಬಲ್ಲೆ. ಬೇಕಾದರೆ ನನ್ನನ್ನೊಂದು ಮಾತು ಅಂದುಬಿಡು ಲೀಲಾ. ಈ ಶಾಂತ ನಗು ಅದಕ್ಕಿಂತಲೂ ಕಠೋರ."

"ಇಲ್ಲಿ ಬಾ ಪ್ರಭಾ–" ಲೀಲಾವತಿ ಪ್ರಭಾವತಿಯನ್ನು ತನ್ನ ಪಕ್ಕಕ್ಕೆ ಎಳೆದು ಕೂಡಿಸಿಕೊಂಡು ಹೇಳಿದಳು–

"ನೀನು ಶುದ್ಧ ಹುಚ್ಚು ಹುಡುಗಿ. ಏನೇನೋ ಕನವರಿಸುತ್ತಿದ್ದೀಯ. ಅಪಮಾನ, ವ್ಯಥೆ ಎಂತ ಏನೇನೋ ಹೇಳುತ್ತಿದೀಯ. ಯಾರು ಅಪಮಾನ ಮಾಡಿದರು, ಯಾರಿಗೆ ವ್ಯಥೆಯಾಯಿತು ?"

"ಅಪಮಾನ ಮಾಡಿದವರು ಅವರು, ವ್ಯಥೆಯಾದುದ್ದು ನಿನಗೆ! ಅವರು ನಿಮ್ಮನ್ನು ಕ್ಷಮೆ ಕೇಳಲೇಬೇಕು." ಮತ್ತೆ ಮರುಕಳಿಸಿದ ಕ್ರೋಧದಿಂದ ಹಲ್ಲು ಕಡಿಯುತ್ತಾ ಹೇಳಿದಳು ಪ್ರಭಾವತಿ.

"ಅದು ನಿನ್ನ ತಪ್ಪು ತಿಳುವಳಿಕೆ. ನಮಗೆ ಅಪಮಾನವೂ ಆಗಲಿಲ್ಲ. ವ್ಯಥೆಯೂ ಆಗಲಿಲ್ಲ. ನಿಮ್ಮಿಬ್ಬರನ್ನೂ ನೋಡಿ ನಗು ಬಂತು. ನಿಮ್ಮಿಬ್ಬರಿಗೂ ತಾಳ್ಮೆ ಕಡಿಮೆಯಾಗುತ್ತಿದೆ. ಈ ಜೀವನದಲ್ಲಿ ತಾಳ್ಮೆ ಕಳೆದುಕೊಂಡವನು ಏನೂ ಸಾಧಿಸಲಾರ. ಸಂಸಾರದಲ್ಲಂತೂ ತಾಳ್ಮೆ ಅಡಿಗಲ್ಲು. ಹುಚ್ಚಿ, ಎರಡಾದ ಜೀವ ಒಂದಾಗಿ ಬಾಳಬೇಕೆಂದಾಗ, ಬರೀ ಪ್ರೇಮವಿದ್ದರೇ ಸಾಲದು, ತಾಳ್ಮೆಯೂ ಬೇಕು. ಪ್ರೇಮವು ಒಣಗಿದ ಸಿಮೆಂಟಿನ ಪುಡಿ ಇದ್ದ ಹಾಗೆ. ಬರೀ ಅದನ್ನೇ ಹಾಕಿದರೆ ಅದು ಹಿಡಿಯುವುದಿಲ್ಲ. ತಾಳ್ಮೆಯ ನೀರು ಬೆರೆತಾಗ ಅದಕ್ಕೆ ಕಚ್ಚಿಕೊಳ್ಳುವ ಶಕ್ತಿ ಬರುತ್ತದೆ. ನೀರು ಬಿದ್ದಷ್ಟೂ ಸೀಮೆಂಟು ಬಲ ವಾಗುತ್ತದೆ. ತಾಳ್ಮೆ ಇದ್ದಷ್ಟೂ ಪ್ರೇಮ ಸ್ಥಿರವಾಗುತ್ತದೆ. ಈ ಸಣ್ಣ ಮಾತು ತಿಳಿಯದೇ ನಿನಗೆ?"

"ನಿನ್ನ ಮಾತು ಸುಳ್ಳೆನ್ನಲಾರೆ, ಲೀಲಾ. ಆದರೂ ಅವರು ಆ ರೀತಿ ಮಾತನಾಡಬಾರದಾಗಿತ್ತು."

"ಮತ್ತೆ ಅದೇ ಮಾತು."

"ಅವರಾಡಿದ ಮಾತು ನೆನಪಿಗೆ ಬಂದರೆ ನನ್ನ ಮೈ ಕುದಿಯುತ್ತದೆ ಲೀಲಾ. ನಾನು ಅನ್ನಬಾರದ್ದು ಅಂದೆನೇ, ಹೇಳಬಾರದ ಮಾತು ಹೇಳಿದೆನೇ? ತಪ್ಪು ಮಾತಾಡಿದಾಗ, 'ಈ ರೀತಿ ಮಾತಾಡಬಾರದು' ಎನ್ನುವುದೂ ತಪ್ಪೇ? ಅದಕ್ಕೇ 'ಹೇಳುವುದಕ್ಕೆ ನೀನಾರು' ಎನ್ನುವುದೇ? ಅಂಥ ಮಾತು ಸಹಿಸ ಬೇಕೇ ಲೀಲಾ?"

ಶಾಂತಾರಾಮನ ಮಾತು ನೆನಪಾಗಿ ಪ್ರಭಾವತಿ ಮತ್ತೆ ಪ್ರಕ್ಷುಬ್ಧ ಳಾದಳು.

"ಹೆಣ್ಣಿಗೆ ಇಷ್ಟು ದ್ವೇಷ ಇರಬಾರದು ಪ್ರಭಾ."

"ಏಕೆ?"

"ಹೆಣ್ಣಾದದ್ದಕ್ಕೆ."

"ಅಂದರೆ – ಗಂಡು, ಗಂಡಾದುದರಿಂದ ಏನೂ ಮಾಡಬಹುದೆಂದೇ? ಗಂಡಿಗೆ ಇರುವಷ್ಟು ಅಧಿಕಾರ ಹೆಣ್ಣಿಗೂ ಇಲ್ಲವೇ? ಗಂಡಿಗೆ ಆತ್ಮಾಭಿಮಾನ ವಿದ್ದರೆ, ಹೆಣ್ಣು ಕಾಲ ಕಸವೇ?"

"ದೂರ, ಬಹಳ ದೂರ ಯೋಚಿಸುತ್ತಿದ್ದಿ ಪ್ರಭಾ. ಸಣ್ಣ ವಿಷಯಕ್ಕೂ ನಮ್ಮ ಆಲೋಚನೆ ಅಷ್ಟು ದೂರ ಹೋದರೆ, ಸಂಸಾರ ಸಂಸಾರವಾಗಿ ಉಳಿ ದೀತೇ? ಗಂಡು ಹೆಣ್ಣು ಜತೆಗೂಡುವುದು, ಹೀಗೆ ಸಣ್ಣ ಮಾತಿಗೆ ಜಗಳವಾಡಿ ದೂರವಾಗಬೇಕೆಂದೇ? ಊಹೂ. ಗಂಡಿಗೆ ಕೋಡೇನೂ ಇಲ್ಲ. ಗಂಡಸಿಗಿರು ವಷ್ಟು ಆತ್ಮಾಭಿಮಾನ, ಗೌರವ ಹೆಂಗಸಿಗೂ ಇದೆ. ಆದರೆ ಸಂಸಾರ ಈ ಪರಸ್ಪರ ಆತ್ಮಾಭಿಮಾನದ ಬೆಲೆ ಕಟ್ಟುವ ಮಾರುಕಟ್ಟೆಯೇ? ದಿನ, ತಾರೀಖು ಹೊತ್ತು ಲೆಕ್ಕವಿಟ್ಟುಕೊಂಡು, ಕಾಸಿಗೆ ಕಾಸು ಬಡ್ಡಿ ಎಣಿಸುವ ಪಠಾಣನ ಸಾಲವಲ್ಲ, ಸಂಸಾರ. ಇಲ್ಲಿ ಸೋತು ಗೆಲ್ಲಬೇಕು, ಗೆದ್ದು ಸೋಲಬೇಕು. ಈ ಚಾತುರ್ಯ ಹೆಣ್ಣಿಗೆ ಸಾಧಿಸುವಷ್ಟು ಬೇಗ, ಗಂಡಿಗೆ ಸಾಧಿಸುವುದಿಲ್ಲ. ಆದ್ದರಿಂದ ಅವರನ್ನು ಪಳಗಿಸಬೇಕು. ಇಲ್ಲಿ ಸೋಲು – ಗೆಲವು, ಮಾನ – ಅಪಮಾನ, ನಗು – ಕ್ರೋಧ, ಯಾವುದಕ್ಕೂ ಬೆಲೆಯಿಲ್ಲ. ಇಲ್ಲಿ ಬೆಲೆ ಇರು ವುದೊಂದಕ್ಕೇ – ಸಂಸಾರ ಉಳಿಯುವುದಕ್ಕೆ. ಇದರಲ್ಲಿ ನೀನಂತೂ ತುಂಬಾ ಹೆಚ್ಚಿನ ಜವಾಬದಾರಿ ಹೊತ್ತಿದೀಯ. ಬಹಳ ಎಚ್ಚರವಾಗಿರಬೇಕು."

"ಏಕೆ?"

"ನಿನ್ನದು ನಮ್ಮ ಹಾಗೆ ಕೂಡಿದ ದಾಂಪತ್ಯವಲ್ಲ. ನಮ್ಮಿಬ್ಬರ ನಡುವೆ ಜಗಳವಾದರೆ, ನಮ್ಮಿಬ್ಬರನ್ನೂ ಕೂಡಿಸಿದ ತಂದೆತಾಯಿಗಳನ್ನಾದರೂ ಬೈಯ ಬಹುದು. ಆದರೆ ನಿಮ್ಮದು ಹಾಗಲ್ಲ. ಯಾರನ್ನೂ ಕೇಳದೆ, ನೀವೇ ಒಪ್ಪಿ ಹೂಡಿದ ಸಂಸಾರ...."

"ಅದು ತಪ್ಪೇ?"

"ಹಾಗೆಂದವರ ನಾಲಿಗೆ ಸುಡು. ಆ ಮಾತು ನಾನೆಂದೂ ಹೇಳುವು ದಿಲ್ಲ. ಆದರೆ ಇಷ್ಟು ಮಾತ್ರ ನಿಜ. ಇಂಥ ಸಂಸಾರಗಳನ್ನು ಸಂಶಯದಿಂದ ನೋಡುತ್ತಾರೆ, ಅಲ್ಲವೇ?"

"ಹೂ."

"ಇಂಥ ಸಂಸಾರಗಳು ಎಂದೂ ನಾಲ್ಕು ದಿನ ಬದುಕಿ ಬಾಳುವುದಿಲ್ಲ ಎಂದು ಅವರ ನಂಬಿಕೆ. ಅದಕ್ಕೇ ಅವರು ಇಂಥ ಕೂಡಿಕೆಯಾಗಬಾರದು ಎನ್ನುತ್ತಾರೆ. ಅವರ ಭಾವನೆ ತಪ್ಪು ಎಂದು ತೋರಿಸುವುದು ನಿಮ್ಮ ಜವಾಬ್ದಾರಿ. ಹೀಗಿರುವಾಗ ಸಣ್ಣ ಸಣ್ಣ ಮಾತಿಗೂ ಜಗಳವಾಡಿ, ವಿರಸ ಬೆಳಸಿಕೊಂಡರೆ ಸಂಸಾರದ ಗತಿ ಏನು? ಆಡಿಕೊಂಡು ನಗುವವರ ಮುಂದೆ ಎಡವಿ ಬಿದ್ದಂತಾಗದೇ? ಹಾಗಾದರೆ ಇಷ್ಟು ಕಷ್ಟ, ವ್ಯಥೆ, ಅಪಮಾನ, ನೋವು ಸಹಿಸಿ, ಏನು ಸಾರ್ಥಕವಾದಹಾಗಾಗುತ್ತದೆ? ಎಲ್ಲಾ ಹೋಳಿಯಲ್ಲಿ ಹುಣಸೆಹಣ್ಣು ತೊಳೆದಂತಾಗುವುದಿಲ್ಲವೇ?"

ಲೀಲಾವತಿಯ ಮಾತು ಕೇಳಿ, ಪ್ರಭಾವತಿಯ ಕ್ರೋಧದ ಕತ್ತಲು ತುಂಬಿದ ಕಣ್ಣೆ ನಿದಿರು ಚಕ್ಕನೆ ಪ್ರಕಾಶ ಬಿದ್ದಂತಾಯಿತು. ಅವಳ ಮಾತಿನ ಸತ್ಯದ ಕೋಟೆ ಅಭೇದ್ಯವಾಗಿತ್ತು.

"ನಿನ್ನ ಮಾತು ನೂರು ನೂರು ಬಾರಿಗೂ ನಿಜ, ಲೀಲಾ. ಆದರೆ ಈ ಪ್ರಜ್ಞೆ ಅವರಿಗೂ ಇರಬೇಡವೇ?"

"ಇರಬೇಕು, ಇಲ್ಲವಾದರೆ ಬರುತ್ತದೆ. ವಿವೇಚನೆಯೇನು, ಮಾಟಗಾರನ ಮಾವಿನ ಗಿಡವೇ, 'ಭೂ ಮಹಾಕಾಳಿ' ಎಂದ ಕೂಡಲೇ ಬೆಳೆದು ಹಣ್ಣು ಕೊಡಲಿಕ್ಕೆ. ವಿವೇಚನೆ ಬರುತ್ತದೆ. ಅದು ಬರುವವರೆಗೂ ಕಾಯಬೇಕು. ಇಲ್ಲವಾದರೆ ಕೋತಿ ಹಲಸಿನ ಗಿಡ ಹಾಕಿದ ಕಥೆಯ ಹಾಗಾಗುತ್ತದೆ. ಒಂದು ಸಲ ಕೋತಿಗೆ ಹಲಸಿನ ಹಣ್ಣಿನ ರುಚಿ ಕಂಡು, ಅದನ್ನು ಬೆಳೆದು ಬೇಕಾದಷ್ಟು ತಿನ್ನಬೇಕು ಎನಿಸಿತಂತೆ. ಯಾರನ್ನೋ ಹೋಗಿ ಕೇಳಿತು, 'ಅದಕ್ಕೆ ಏನು ಮಾಡಬೇಕು?' ಎಂತ. 'ಬೀಜ ನಟ್ಟು, ನೀರು ಹಾಕಿ ಬೆಳೆಸು' ಎಂದರು. ಕೋತಿ ಬೀಜ ನಾಟಿತು, ನೀರು ಸುರಿಯಿತು. ಬೀಜದಲ್ಲಿ ಮೊಳಕೆ ಬಂತು – ಹಣ್ಣು ಬರಲಿಲ್ಲ. ಕೋತಿಗೆ ರೇಗಿ, ಆ ಸಸಿಯನ್ನೇ ಕಿತ್ತೆಸೆದು, ಹಲಸಿನ ಹಣ್ಣು ಹುಡುಕಿಕೊಂಡು ಹೋಯಿತಂತೆ. ಕೋತಿಯ ಕಥೆಯಾದರೆ ಕೇಳಿ ನಗಬಹುದು. ಆದರೆ ಸಂಸಾರವೇ ಹಾಗಾದರೇನು ಗತಿ? ನಿಮ್ಮಿಬ್ಬರನ್ನು ಕಂಡರೆ ನನಗೆ ತುಂಬಾ ಪ್ರೀತಿ. ಅದಕ್ಕೇ ನಿಮ್ಮ ಸಂಸಾರ ಹಾಗಾಗಬಾರದು ಎಂತ ನನಗೆ ಆಶೆ. ನನ್ನ ಮೇಲೆ ನಿನಗೆ ಪ್ರೀತಿ ಇಲ್ಲವೇ ಪ್ರಭಾ?"

"ನಿನ್ನ ಮೇಲೆ ನನಗೆ ಪ್ರೀತಿ ಇಲ್ಲವೇ ಲೀಲಾ, ನಿನಗೂ ನನ್ನಲ್ಲಿ ಸಂಶಯವೇ ?"

"ಸಂಶಯವಿಲ್ಲ, ಆದರೂ ಕೇಳಿದೆ. ನನ್ನ ಮೇಲೆ ಪ್ರೀತಿ ಇದ್ದರೆ, ಇಂಥ ಮಾತಿಗೆ ಇನ್ನು ಮುಂದೆ ಸಿಟ್ಟುಮಾಡಿಕೊಳ್ಳಬೇಡ."

ಲೀಲಾವತಿ ಎಳೆಯ ಮಗುವಿನಂತೆ ಪ್ರಭಾವತಿಯನ್ನು ತಬ್ಬಿ, ಅವಳ ತಲೆಗೂದಲನ್ನು ನೇವರಿಸುತ್ತಾ ಹೇಳಿದಳು –

"ಕಷ್ಟಪಟ್ಟವರು ಸುಖಪಡಬೇಕು, ಪ್ರಭಾ. ಕಣ್ಣೀರಿಗೆ ಕಣ್ಣೀರೇ ಬೆಲೆಯಾಗಬಾರದು."

"ಲೀಲಾ, ನಿನ್ನನ್ನು ನೋಡಿದರೆ ಮತ್ತೆ ಮತ್ತೆ ಅದೇ ಮಾತು ಹೇಳಬೇಕೆನ್ನಿಸುತ್ತದೆ – ನೀನು ದೇವತೆ."

"ಊಹೂ. ಆ ಮಾತು ಹೇಳಬೇಡ."

"ಏಕೆ ?"

"ನಾನು ಮನುಷ್ಯಳು, ಮನುಷ್ಯಳಾಗಿಯೇ ಉಳಿಯಬೇಕೆಂದು ನನ್ನಿಚ್ಛೆ."

"ದೇವತೆಯಾದರೆ ನನ್ನಂಥ ಭಕ್ತರ ಕಾಟ ಹೆಚ್ಚೆಂದೇನು ?"

"ಅಲ್ಲ, ಮಹತ್ಸಾಧನೆಯಾಗಬೇಕಾದರೆ, ದೇವತೆಗಳೂ ಮನುಷ್ಯ ಜನ್ಮವೆತ್ತಬೇಕಂತೆ. ಹಾಗೆಂದು ಯಾವುದೋ ಪುರಾಣದಲ್ಲಿ ಓದಿದ ನೆನಪು. ಹಾಗಿರುವಾಗ, ಅನಾಯಾಸವಾಗಿ ಮನುಷ್ಯ ಜನ್ಮ ಬಂದಿರುವಾಗ ನಾನೇಕೆ ದೇವತೆಯ ಜನ್ಮ ಬಯಸಲಿ. ಏಳೇಳು ಜನ್ಮಕ್ಕೂ ಅದು ಬೇಡ."

"ನಿನಗೇನು ಮಹತ್ಸಾಧನೆಯ ಬಯಕೆ ಲೀಲಾ ?"

"ಮತ್ತೇನು – ಒಂದೇ ಒಂದು."

"ಯಾವುದು ?"

"ನನ್ನ ಗಂಡನನ್ನು ಒಲಿಸಿಕೊಳ್ಳುವುದು."

"ಅದು ಅಂಥ ಅಸಾಧ್ಯ ವ್ರತವೆ ?"

"ಅಲ್ಲವೇ, ನೂರು ಜನರ, ಅಲ್ಲ ಲಕ್ಷ ಜನರ ದ್ವೇಷ ಸಾಧಿಸಬಹುದು. ಒಬ್ಬರನ್ನು ಒಲಿಸಿಕೊಳ್ಳುವುದು ಅದಕ್ಕಿಂತ ಕಷ್ಟ."

"ಲೀಲಾ, ನೀನು ಬೇಕಾದರೆ ಜಗತ್ತನ್ನೇ ಒಲಿಸಿಕೊಳ್ಳಬಲ್ಲೆ."

" ನನಗೇಕೋ ನಂಬಿಕೆ ಸಾಲದು ಪ್ರಭಾ...."

" ಏಕೆ?"

" ನಿನ್ನೊಬ್ಬಳನ್ನು ಒಲಿಸಿಕೊಳ್ಳುವುದೇ ಇಷ್ಟು ಕಷ್ಟವಾಗುತ್ತಿದೆ. ಇನ್ನು ಜಗತ್ತಿನ ಆಸೆ ಏಕೆ?"

" ಲೀಲಾ – ನಾನು ನಿನ್ನ ಹೃದಯದ ಸೆರೆಯಾಳು, ಪ್ರೇಮದ ಬಂದಿ."

" ಹಾಗೆಂದರೆ ನಾನು ಹೇಳಿದ ಹಾಗೆ ಕೇಳಬೇಕಾಯಿತು."

" ಕೇಳುತ್ತೇನೆ, ಲೀಲಾ."

" ನಿಜವಾಗಿಯೂ."

" ಏನು ಆಣೆ ಇಟ್ಟು ಹೇಳಲಿ ಹೇಳು,"

" ಆಣೆಯೂ ಬೇಡ, ಪಾವಲಿಯೂ ಬೇಡ – ಕೇಳಿದರೆ ಸಾಕು."

" ಹೇಳು ಹಾಗಾದರೆ."

" ಹೇಳಲೇ?"

" ಹೂ."

" ಹಾಗಾದರೆ ಸಿಟ್ಟು ಮರೆತು ಒಂದು ಬಾರಿ ನಿರ್ಮಲವಾಗಿ ನಕ್ಕು ಬಿಡು."

ನಗುನಗುತ್ತಾ ಹೇಳಿದಳು ಲೀಲಾವತಿ. ಪ್ರಭಾವತಿಯ ಹೃದಯವನ್ನು ಕವಿದಿದ್ದ ಕ್ರೋಧದ ಕಾರ್ಮೋಡವೂ, ಆ ಪವಿತ್ರ ನಗೆ ಗಾಳಿಗೆ ಚೆದರಿ, ಅವಳ ಮುಖದ ಮೇಲೆ ನಗೆಯ ಬೆಳದಿಂಗಳು ಹರಡಿತು.

" ಹೀಗೇ ನೀನು ನಗುತ್ತಾ ಇರು – ನಿನ್ನ ಗಂಡ ದಾರಿಗೆ ಬರುತ್ತಾನೋ ಇಲ್ಲವೋ ನೋಡು."

ಲೀಲಾವತಿ ಹೇಳಿದ ಮಾತು, ಪ್ರವಾದಿಯ ಮಾತಿನಂತೆ ಸತ್ಯವಾಯಿತು.

ಆ ಇರುಳು ಮಲಗುವಾಗ, ಶಾಂತಾರಾಮು, ಪಶ್ಚಾತ್ತಾಪದಗ್ಧವಾದ ಧ್ವನಿಯಲ್ಲಿ ಕೇಳಿದ –

" ಪ್ರಭಾ, ಸಿಟ್ಟಿನಲ್ಲಿ ವೈಯರಿಯದೆ ಮಾತಾಡಿಬಿಟ್ಟೆ. ನನ್ನ ಮೇಲೆ ಸಿಟ್ಟು ಬಂತೇ?"

" ಬಂದಿತ್ತು, ಆದರೆ ಈಗ ಇಲ್ಲ."

" ಈಗ?"

" ಎಷ್ಟಾದರೂ ನೀವು ನನ್ನವರೇ!"

ಅವಳ ಮಾತು ಕೇಳಿ ಶಾಂತಾರಾಮನ ಎದೆಯಲ್ಲೂ ಪ್ರೀತಿ ತೆರೆ ಹೊಯ್ದು ತುಳುಕಿತು. ಆ ಅಭಿಮಾನ ತುಂಬಿದ ಧ್ವನಿಯಲ್ಲೇ ಹೇಳಿದ.

"ನೀನು ನನ್ನ ಬಾಳಿನ ಧೃವತಾರೆ ಪ್ರಭಾ."

"ಊ ಹೂ, ನಾನಲ್ಲ."

"ಮತ್ತಾರು?"

"ಲೀಲಾ ನಮ್ಮಿಬ್ಬರ ಬಾಳಿನ ಧೃವತಾರೆ."

ಪ್ರಭಾವತಿಯ ತುಟಿಗೆ ಮುತ್ತಿಟ್ಟು, ಅವಳ ಮಾತಿಗೆ ಸಮ್ಮತಿಯನ್ನೂ, ಮೆಚ್ಚುಗೆಯನ್ನೂ ಸೂಚಿಸಿದ.

## ೧೬

ಆ ದಿನದ ಘಟನೆ ಹೇಗಾದರೂ, ಆದಷ್ಟು ಬೇಗ ಶಾಂತಾರಾಮನಿಗೊಂದು ಒಳ್ಳೆಯ ಕೆಲಸ ಕೊಡಿಸಬೇಕೆಂಬ ಸದಾನಂದನ ಪ್ರಯತ್ನಕ್ಕೆ ಪುಟ ಕೊಟ್ಟಿತು. ಅವನ ಮಾತಿನಂತೆ ಶಾಂತಾರಾಂ ದಾಮೋದರ ಹೆಗ್ಗಡೆ ತೋರಿಸಿದ ಕೆಲಸಕ್ಕೆ ಬೇಡವೆಂದು ಉತ್ತರ ಕೊಟ್ಟ. 'ಆ ಕೆಲಸ ನಿನಗೆ ಬೇಡ' ಎಂದು ಹೇಳಿದ ದಿನವೇ ಸದಾನಂದ, ಶಾಂತಾರಾಮನಿಗೆ ಮತ್ತೊಂದು ಮಾತು ಹೇಳಿದ–

"ಶಾಂತಾರಾಂ, ನಿನ್ನ ಖಾಸಗಿ ವಿಷಯವೊಂದರಲ್ಲಿ ನಾನು ಪ್ರವೇಶಿಸುತ್ತೇನೆಂದು ನೀನು ಸಿಟ್ಟು ಮಾಡಿಕೊಳ್ಳುವುದಿಲ್ಲವಾದರೆ, ನಿನಗೊಂದು ಮಾತು ಹೇಳಬೇಕು ಎನಿಸುತ್ತಿದೆ."

"ಹೇಳು ಸದಾನಂದ. ಇನ್ನು ಮೇಲೆ ನನ್ನ ವಿಷಯದಲ್ಲಿ ಅಂಥ ಅಪನಂಬಿಕೆ ಇಟ್ಟುಕೊಳ್ಳಬೇಡ."

"ಅದಕ್ಕಲ್ಲ. ಪ್ರತಿಯೊಬ್ಬರೂ ಅವರವರ ಸ್ನೇಹ, ಸಂಸಾರ ವಿಷಯಗಳಲ್ಲಿ ಪರಪ್ರವೇಶವನ್ನು ಸಹಿಸದಿರಬೇಕಾದುದೇ ಯೋಗ್ಯ. ಆದರೂ ಇಲ್ಲಿನ ಜೀವನಕ್ಕೆ ಹೊಸಬನೆಂಬುದರಿಂದ ಸ್ವಾತಂತ್ರ್ಯ ವಹಿಸಿ ಹೇಳಬೇಕೆಂದಿದೇನೆ."

"ಏನು ಹೇಳು."

"ಖಂಡಿತ ತಪ್ಪು ತಿಳಿದುಕೊಳ್ಳಕೂಡದು."

"ಇಲ್ಲ."

"ದಾಮೋದರ ಹೆಗ್ಗಡೆಗೂ ನಿನಗೂ ಎಷ್ಟುಮಟ್ಟಿನ ಸ್ನೇಹ?"

"ಹೀಗೇ ಪರಿಚಯ."

"ಅಷ್ಟೇನೇ ?"

"ಹೂ."

"ಹಾಗಾದರೆ ಅದು ಅಷ್ಟಕ್ಕೇ ನಿಲ್ಲಬೇಕೆಂದು ನನ್ನ ಇಚ್ಛೆ. ನೀನು ಆ ಕೆಲಸಕ್ಕೆ ಹೋಗಬೇಡ ಎಂದುದಕ್ಕೆ ಅದೂ ಒಂದು ಕಾರಣ. ಆತ ಸ್ನೇಹಕ್ಕೆ ಅರ್ಹನಾದ ವ್ಯಕ್ತಿಯಲ್ಲ. ನಮ್ಮ ಆಫೀಸಿನಲ್ಲೇ, ನನ್ನ ಕೈ ಕೆಳಗೇ ಇದ್ದ. ನನಗೂ ಅವನು ನಮ್ಮೂರ ಕಡೆಯವನು ಎಂಬ ಅಭಿಮಾನವಿತ್ತು. ಆದಗೂ ಆತನನ್ನು ಅಲ್ಲಿಂದ ತೆಗೆಯಬೇಕಾಯಿತು."

"ಏನು ನೂಡಿದ?"

"ಅದೆಲ್ಲಾ ಆತನ ಬೆನ್ನ ಹಿಂದೆ ನಾನು ಆಡಬಾರದು. ಆದರೆ ಅವನಿಂದ ನಿನಗೆ ತೊಂದರೆಯಾಗಬಾರದೆಂದು ಇಷ್ಟಾದರೂ ಹೇಳುತ್ತಿದ್ದೇನೆ. ನಿನ್ನ ಹುಷಾರಿ ನಿನ್ನ ಕೈಲಿರಲಿ. ಕೆಲಸದ ಚಿಂತೆ ಮಾಡಬೇಡ, ಶತಾಯ ಗತಾಯ ಇನ್ನೊಂದು ವಾರದೊಳಗೆ ನಿನಗೆ ಕೆಲಸ ಸಿಕ್ಕುವ ಹಾಗೆ ಮಾಡುತ್ತೇನೆ."

ಸದಾನಂದನ ಆ ಮಾತು ಬರೀ ಮಾತಾಗಿ ಉಳಿಯಲಿಲ್ಲ. ಅವನು ಹೇಳಿದ ಅವಧಿ ಮುಗಿಯುವುದರೊಳಗಾಗೇ ಪಾರಸ್‌ಮಲ್ ಕಪೂರ್‌ಜಿಯವರ ಯಂತ್ರಸಾಮಗ್ರಿಗಳ ಆಮದು – ರಫ್ತಿನ ಆಫೀಸಿನಲ್ಲಿ, ತಿಂಗಳಿಗೆ ೧೨೦ ರೂಪಾಯಿ ಸಂಬಳದ ಕೆಲಸ ಗೊತ್ತುಮಾಡಿಕೊಟ್ಟ.

ಕೆಲಸ ಸಿಕ್ಕಿದುದು ಶಾಂತಾರಾಂ ಪ್ರಭಾವತಿಯರ ಹೃದಯದ ಮೇಲಿನ ಬಹು ದೊಡ್ಡ ಭಾರವನ್ನು ಇಳಿಸಿತು. ಮುಂದಿನದು ಮನೆಯ ಚಿಂತೆ. ಅದೂ ಕೆಲಸ ಸಿಕ್ಕಷ್ಟೇ ಕಷ್ಟವಾಯಿತು.

ಲೀಲಾವತಿ – ಸದಾನಂದರಿಗೆ ಅವರು ಅಷ್ಟು ಬೇಗ ಬೇರೆ ಮನೆ ಮಾಡಿಕೊಳ್ಳುವುದು ಇಷ್ಟವಿರಲಿಲ್ಲ. ಆದರೂ ಅವರಿಬ್ಬರೂ ನಿರಾತಂಕವಾಗಿದ್ದು ಸುಖಪಡಬೇಕೆನ್ನುವ ಬಯಕೆಗೆ ಅಡ್ಡಿ ಬರಲು, ಅವರಿಗೆ ,ಮನಸ್ಸಾಗಿರಲಿಲ್ಲ. ಅವರೂ ಇವರಿಗೆ ಮನೆ ಹುಡುಕುವ ಪ್ರಯತ್ನದಲ್ಲಿ ನೆರವಾದರು. ಮನೆ ಬಾಡಿಗೆ ಹತ್ತಾದರೆ, ಅದಕ್ಕೆ ನೂರರಷ್ಟು ಪಗಡಿ ತೆತ್ತರೇ ಮನೆ ಬಾಡಿಗೆಗೆ ಸಿಗುತ್ತಿತ್ತು. ಹಾಗೆ ತೆರುವ ಸ್ಥಿತಿಯಲ್ಲಿರಲಿಲ್ಲ ಶಾಂತಾರಾಂ.

ಆದ್ದರಿಂದ ತಮಗೆ ಅನುಕೂಲವಾದ ಮನೆ ಸಿಗುವವರೆಗೂ ಅನಿವಾರ್ಯವಾಗಿ ಕಾಯಲೇಬೇಕಾಯಿತು.

ತಿಂಗಳುಗಟ್ಟಲೆ ಅಲೆದು, ಬೇಸತ್ತ ಮೇಲೆ, ದಾದರಿನಲ್ಲಿ, ರೈಲ್ವೆ ನಿಲ್ದಾಣಕ್ಕೆ ಹತ್ತಿರವಾಗಿಯೇ ಇದ್ದ ಮನೆಯೊಂದರಲ್ಲಿ, ಮೂರು ಕೋಣೆಗಳ ಫ್ಲಾಟ್ ಒಂದು ನಲವತ್ತು ರೂಪಾಯಿಗಳ ಬಾಡಿಗೆಗೆ ದೊರಕಿತು. ಅದಕ್ಕೂ ಮೂರು ತಿಂಗಳ ಬಾಡಿಗೆ ಮುಂಗಡವಾಗಿ ಕೊಡಬೇಕಾಗಿತ್ತು. ಜೊತೆಗೆ ಸಂಸಾರಕ್ಕೆ ಬೇಕಾದ ಪಾತ್ರೆ ಪಡಗ–' ಅ ' ನಿಂದ ' ಕ್ಷ 'ವರೆಗೆ–ಎಲ್ಲವನ್ನೂ ಕೊಳ್ಳಬೇಕಾಗಿತ್ತು. ಅದೆಲ್ಲದಕ್ಕೂ ಮುನ್ನೂರು–ನಾನ್ನೂರು ರೂಪಾಯಿ ಇಲ್ಲದೆ ನಡೆಯುವಂತಿರಲಿಲ್ಲ. ಪ್ರಭಾವತಿ ಆ ಹಣಕ್ಕಾಗಿ ತನ್ನ ಚಿನ್ನದ ಸರ ಮಾರಲು ಸಿದ್ಧವಾದಳು. ಶಾಂತಾರಾಂ ಅದಕ್ಕೆ ಸಿದ್ಧವಾಗಿರಲಿಲ್ಲವಾದರೂ, ಅದು ಬಿಟ್ಟರೆ ಮತ್ತೆ ಸದಾನಂದನ ಮೇಲೆ ಭಾರ ಹೊರೆಸಬೇಕಾಗಿ ಬರುತ್ತಿತ್ತು.

" ಮತ್ತೆ ಅವರಿಗೆ ಈ ಭಾರವೂ ಏಕೆ? ಈಗಾಗಿರುವುದು ಸಾಲದೇ? ನನ್ನ ಚಿನ್ನದ ಸರ ಏಕೆ ಮಾರಬಾರದು?"

" ಸದಾನಂದನ ಬಳಿ ಕೇಳಿದರೆ, ಸಾಲ ಕೇಳುತ್ತೇನೆ. ಪ್ರತಿ ತಿಂಗಳೂ ಅಷ್ಟಷ್ಟು ಕೊಟ್ಟು ಸಾಲ ಬಗೆಹರಿಸಬಹುದು. ಆದರೆ ನಿನ್ನ ಸರ ಮಾರಿದರೆ ಮತ್ತೆ ಅಂಥದನ್ನು ಮಾಡಿಸಿಕೊಡುವ ನಂಬಿಕೆ ನನಗಿಲ್ಲ. ಬೆಂಗಳೂರಿನ ಬಳೆಯಂತೆ ಇದನ್ನೂ ಮರೆಯಬೇಕಾಗುತ್ತದೆ."

" ಹೋದರೆ ಹೋಗಲೇಳಿ. ಇದು ಇಲ್ಲ ಅಂತ ಅಳುವವರು ಯಾರು?"

" ಅದು ನಿಜವಿರಬಹುದು ಪ್ರಭಾ. ಆದರೆ ನಿನ್ನ ಒಡವೆಗಳನ್ನೆಲ್ಲಾ ಮಾರಲು ನನಗೇನು ಅಧಿಕಾರ?"

" ಸಂಸಾರಕ್ಕೆಂದೇ ಅಲ್ಲವೇ ಮಾರುವುದು. ಅದರಲ್ಲಿ ನನ್ನದು, ನಿಮ್ಮದು ಅನ್ನುವುದೇನು ಬಂತು. ಆ ದಿನ ಬೆಂಗಳೂರಿನಲ್ಲಿಯೂ ಹೀಗೇ ಮಾತಾಡಿದಿರಿ. ಈಗಲೂ ಅದೇ ಮಾತು. ಅಂದರೆ ಈ ಸಂಸಾರದಲ್ಲಿ ನನ್ನದು ಎನ್ನುವುದು ಏನೂ ಇಲ್ಲವೇ?"

" ಹಾಗಲ್ಲ ಪ್ರಭಾ, ನೀನು ನನ್ನ ಮನೆಯ, ಮನದ ರತ್ನದೀಪ. ಆ ಜ್ಯೋತಿ ಚಿರಂತನವಾಗಿ ಉರಿಯುವಂತೆ ರಕ್ಷಿಸುವ ಭಾರ ನನ್ನದು. ದೀಪವೇ ಎಣ್ಣೆಯನ್ನು ತಂದುಕೊಂಡು ಉರಿಯಬೇಕೆಂದು ಯಾರಾದರೂ ಚಿಂತಿಸುತ್ತಾರೆಯೇ?"

ಶಾಂತಾರಾಂ ತುಂಬು ಪ್ರೀತಿಯಿಂದಲೇ ಆ ಮಾತು ಹೇಳಿದ. ಆದರೂ ಆ ಮಾತು ಪ್ರಭಾವತಿಯ ಮನದಲ್ಲಿ ಮುಳ್ಳಿನಂತೆ ಮುರಿಯಿತು. ಅವಳೊಳಗಿನ

ಯಾವುದೋ ಭಾವನೆ ಹೆಡೆ ಕೊಡವಿ, ಪ್ರತಿಭಟಿಸಲೆಳಸಿತು. ಮಾತು ನಾಲಿಗೆಯ ತುದಿಯವರೆಗೂ ಬಂತು --

"ಹಾಗಾದರಿದು ನಿಮ್ಮ ಸಂಸಾರ, ನನ್ನದಲ್ಲ" ಎಂದು ಹೇಳಬೇಕೆನಿಸಿತು. ಆ ಹೊತ್ತಿನಲ್ಲಿ ಲೀಲಾವತಿಯು ಹೇಳಿದ ಮಾತುಗಳು ನೆನಪು ಬಂದು ಸುಮ್ಮನಾಗಿ --

"ಸರಿ. ನಿಮ್ಮಿಷ್ಟ. ಹೇಗೆ ಸರಿದೋರುತ್ತದೋ ಹಾಗೆ ಮಾಡಿ." ಎಂದಳು, ಯಾವ ಸತ್ವವೂ, ಉತ್ಸಾಹವೂ ಇಲ್ಲದ ಸಪ್ಪೆ ಧ್ವನಿಯಲ್ಲಿ. ತನ್ನ ಹಟದಿಂದ ಪ್ರಭಾವತಿಗೆ ಬೇಸರವಾಯಿತೆಂದು ಅರಿವಾದರೂ ಶಾಂತಾರಾಮನೂ ಆ ಮಾತು ಮುಂದೆ ಬೆಳೆಸಲಿಲ್ಲ.

ಸದಾನಂದ ಶಾಂತಾರಾಮನಿಗೆ ಅಗತ್ಯವಾದಷ್ಟು ಹಣ ಸಹಾಯ ಮಾಡಲು ಹಿಂದೆಗೆಯಲಿಲ್ಲ. ಮನೆಗೆ ಏನು ಕೊಳ್ಳಬೇಕು, ಎಲ್ಲಿ ಕೊಳ್ಳಬೇಕೆಂದು ತಿಳಿದ ಲೀಲಾವತಿ, ಅವರ ಮನೆಯೂ ತನ್ನ ಮನೆಯೇ ಎಂಬಷ್ಟು ಉತ್ಸಾಹದಿಂದ ಅವರಿಗೆ ನೆರವಾದಳು. ಅವರಿಬ್ಬರೂ ತಮ್ಮ ಮನೆಗೆ ಹೋಗುವ ದಿನವೂ ಬಂತು.

ಅದಕ್ಕೆ ಇನ್ನೆರಡು ದಿನ ಇದೆ ಎನ್ನುವಾಗ ಒಂದು ದಿನ ಪ್ರಭಾವತಿ ಲೀಲಾವತಿಯನ್ನು ಕೇಳಿದಳು --

"ಲೀಲಾ, ನಿನಗಿಲ್ಲಿ ಯಾವುದಾದರೂ ಚಿನಿವಾರರ ಅಂಗಡಿ ಗೊತ್ತಿದೆಯೇ ?"

"ಗೊತ್ತಿದೆ, ಒಂದೇಕೆ, ನಾಲ್ಕಾರು ಗೊತ್ತಿದೆ. ಏಕೆ ?"

"ನನ್ನದೊಂದು ಹಳೆಯ ಒಂಟಿ ಎಳೆಯ ಚಿನ್ನದ ಸರವಿದೆ. ಅದನ್ನು ಮಾರಿಬಿಡೋಣ ಎನಿಸಿತು, ಅದಕ್ಕೆ."

"ಈಗ ಸರ ಮಾರಲು ಏನು ಅವಸರ? ದುಡ್ಡೇನಾದರೂ ಕಡಿಮೆ ಬಿತ್ತೇನು ?"

"ಊಹೂ. ಹೊಸದಾಗಿ ಮನೆಗೆ ಹೋಗುತ್ತಿದ್ದೇನೆ. ನನ್ನದಾಗಿ ಕೈಯಲ್ಲಿ ಅಷ್ಟು ಹಣ ಇರಲಿ ಎಂದು. ಹಾಗೇ ಒಂದೆರಡು ಬಟ್ಟೆಗಳನ್ನೂ ಕೊಳ್ಳಬೇಕು. ಹಳೆಯ ಸೀರೆಗಳನ್ನೇ ಉಟ್ಟು ಸಾಕಾಗಿವೆ. ಅದಕ್ಕೋಸ್ಕರ...."

"ಅದಕ್ಕೆ ಬೇಕಾದರೆ ನಾನು ಹಣ ಕೊಟ್ಟಿರುತ್ತೇನೆ. ಚಿನ್ನ ಮಾರಬೇಡ. ಸಮಯಕ್ಕೆ ಒದಗುತ್ತದೆ."

"ಸಮಯ ಬಂದಾಗ ನೀನಿರುತ್ತೀಯಲ್ಲ, ನಿನಗಿಂತಲೂ ಇನ್ನೂ ಚಿನ್ನದ ಆಸ್ತಿ ಬೇಕೇ ನನಗೆ."

"ಸರಿ. ಇವತ್ತು ನಿನಗೇಕೋ ಅದನ್ನು ಮಾರಬೇಕೆಂಬ ಮನಸ್ಸು ಬಂದಿದೆ – ಹಾಗೇ ಮಾಡು," ಎಂದು ಲೀಲಾವತಿ ಆ ವಿಷಯದಲ್ಲಿ ಹೆಚ್ಚು ಚರ್ಚೆ ಬೆಳಸದೆ ಸುಮ್ಮನಾದಳು.

ಇಬ್ಬರ ಗಂಡಂದಿರೂ ಆಫೀಸಿಗೆ ಹೋಗಿದ್ದುದರಿಂದ, ಆ ಮಧ್ಯಾಹ್ನವೇ ಇಬ್ಬರೂ ಹತ್ತಿರದಲ್ಲೇ ಇದ್ದ ಪರಿಚಯದ ಜ್ಯೂಯಲರ್ಸ್ ಅಂಗಡಿಗೆ ಹೋದರು. ಸರದ ವ್ಯಾಪಾರವಾಗಿ ಮುನ್ನೂರು ರೂಪಾಯಿ ಬಂತು. ಸರ ಮಾರಿದ್ದಕ್ಕೆ ರಸೀದಿಗೆ ರುಜು ಹಾಕುವಾಗ, ತಟಕ್ಕನೆ ಲೀಲಾವತಿಗೆ ಏನೋ ನೆನಪಾಯಿತು. ಸೇಠನ್ನು ಪ್ರಭಾವತಿಗೆ ಅರ್ಥವಾಗದ ಗುಜರಾತಿ ಭಾಷೆಯಲ್ಲಿ ಏನನ್ನೋ ಕೇಳಿದಳು. ಸೇಠ್ ಅದಕ್ಕೆ ಏನೋ ಉತ್ತರವಿತ್ತ. ಲೀಲಾವತಿ, 'ಮನೆಯಲ್ಲಿ ಕೊಡುತ್ತೇನೆ' ಎಂದು ಹೇಳಿ ಪ್ರಭಾವತಿಯಿಂದ ಇಪ್ಪತ್ತೈದು ರೂಪಾಯಿ ತೆಗೆದುಕೊಂಡು, ಸೇಠಿನ ಕೈಗೆ ಕೊಟ್ಟಳು. ಲೀಲಾವತಿ ಪ್ರಭಾವತಿಗೆ ಏನೇನೋ ಒಡವೆ ತೋರಿಸುತ್ತಿದ್ದಾಗ, ಸೇಠ್ ಲೀಲಾವತಿಯ ಕೈಗೆ ಕಾಗದದ ಸಣ್ಣ ಪೊಟ್ಟಣ, ರಸೀದಿ ಕೊಟ್ಟ. ರಸೀದಿಯನ್ನು ಕೂಡಲೇ ಹರಿದುಹಾಕಿದಳು ಲೀಲಾವತಿ. ಅಲ್ಲಿಂದ ಹೊರಗೆ ಹೊರಟರು.

"ಅದೇನು ಲೀಲಾ, ನೀನು ತೆಗೆದುಕೊಂಡದ್ದು ?"

"ಏನೋ ಒಂದು. ನಾಳೆ ಹೇಳುತ್ತೇನೆ. ಈಗ ಸೀರೆ ಕೊಳ್ಳಬೇಕೆಂದೆಯಲ್ಲ, ಅಲ್ಲಿಗೆ ಹೋಗೋಣ. ಎಂಥ ಸೀರೆಗಳು ಬೇಕು ಪ್ರಭಾ ?"

"ದಿನಾ ಉಡಲು ಸಾದಾ ಸೀರೆಗಳು ಬೇಕು. ಹಾಗೇ ಒಂದು ಒಳ್ಳೆಯ ಸೀರೆಯನ್ನು ತೆಗೆದುಕೊಳ್ಳಬೇಕು."

"ದೊಡ್ಡ ಸೀರೆಗಳು ಈಗಲೇ ಹತ್ತಿಪ್ಪತ್ತು ಇವೆಯಲ್ಲ ನಿನ್ನ ಬಳಿ, ಮತ್ತೇಕೆ ?"

"ಅವನ್ನೇ ಉಟ್ಟು ಬೇಸರಾಗಿದೆ, ಹೊಸದೂ ಒಂದು ಇರಲಿ."

ಗೆಳತಿಯರಿಬ್ಬರೂ ನಾಲ್ಕಾರು ಬಟ್ಟೆಯ ಅಂಗಡಿ ತಿರುಗಿ, ನೂರಾರು ಸೀರೆಗಳನ್ನು ತೆಗೆಸಿ ನೋಡಿದ ಮೇಲೆ, ಪ್ರಭಾ ತನಗೆ ಒಪ್ಪಿಗೆಯಾದ ನಾಲ್ಕು ಸಾದಾ ಸೀರೆಗಳನ್ನು ತೆಗೆದುಕೊಂಡಳು. ದೊಡ್ಡ ಸೀರೆಯನ್ನು ಆರಿಸುವುದನ್ನು ಮಾತ್ರ ಲೀಲಾವತಿಗೇ ಬಿಟ್ಟಳು. ಬಟ್ಟೆಯ ಖರೀದಿ ಮುಗಿದ ಮೇಲೆ ಪ್ರಭಾ

ವತಿಯ ಕೈಯಲ್ಲಿ ಐನತ್ತು ರೂಪಾಯಿ ಉಳಿಯಿತು. ಇಬ್ಬರೂ ಮನೆಗೆ ಹಿಂದಿರುಗಿದರು.

ಮಾರನೆಯ ದಿನ ಭಾನುವಾರ. ಆ ದಿನ ಅಲ್ಲಿ ಔತಣ ಮಾಡಿ ಉಂಡು, ಆ ಸಂಜೆ ಇವರಿಬ್ಬರೂ ಹೊಸ ಮನೆಗೆ ಹೋಗುವುದೆಂದು ನಿರ್ಧಾರವಾಗಿತ್ತು.

ಸವಿಯಾದ ಔತಣದ ಊಟ, ಅದರ ಬಳಿಕ ಹರಟೆ ಎಲ್ಲವೂ ಮುಗಿದು, ಹೊರಡುವ ಹೊತ್ತು ಸಮೀಪವಾಯಿತು. ಸದಾನಂದ ಶಾಂತಾರಾಂ ಇಬ್ಬರೂ ಟ್ಯಾಕ್ಸಿ ಮಾಡಿಕೊಂಡು ಬರಲು ಹೋದರು.

ಲೀಲಾವತಿ ಪ್ರಭಾವತಿಯ ಹಣೆಗೆ ಕುಂಕುಮವಿಟ್ಟು ಬೆಳ್ಳಿಯ ತಟ್ಟೆಯಲ್ಲಿ ವೀಳ್ಯ ಕೊಟ್ಟಳು. ಪ್ರಭಾವತಿ ಅದನ್ನು ತೆಗೆದುಕೊಳ್ಳಲು ಕೈ ಚಾಚಿದಾಗ, ತಟ್ಟೆಯಲ್ಲಿದ್ದ ಮಂಗಳಸೂತ್ರ ಕಾಣಿಸಿತು.

"ಇದೇನು ಕಾಣಿಕೆ ಲೀಲಾ?"

"ಇದಕ್ಕಿಂತ ಹೆಚ್ಚಿನ ಕಾಣಿಕೆ ಬೇರೇನೂ ನನಗೆ ತೋಚಲಿಲ್ಲ."

"ನನಗೆ ಇದರಲ್ಲಿ ನಂಬಿಕೆ ಇಲ್ಲ. ನಿಜ ಹೇಳಲೇ ಲೀಲಾ?"

"ಹೇಳು ನನ್ನಲ್ಲಿ ಸಂಕೋಚವೇಕೆ?"

"ನನ್ನ ದೃಷ್ಟಿಯಲ್ಲಿದು ಹೆಣ್ಣು ಗಂಡಿನ ಗುಲಾಮಳು ಎನ್ನುವುದಕ್ಕೆ ಇದು ಚಿಹ್ನೆ. ಗಂಡು ಹೆಣ್ಣಿನ ಕತ್ತಿಗೆ ಹಾಕಿದ ತನ್ನ ಗೆಲುವಿನ ವಿಜಯ ಮಾಲೆ."

"ಎಂದಿನಿಂದ ನಿನಗೆ ಹಾಗನ್ನಿಸಿತು ಪ್ರಭಾ?" ತನಗಾದ ನೋವನ್ನು ಮುಚ್ಚಿಕೊಳ್ಳುತ್ತಾ ಕೇಳಿದಳು ಲೀಲಾವತಿ.

"ಮೊದಲಿನಿಂದಲೂ ಹಾಗನ್ನಿಸಿತ್ತು. ನಡುವೆ ಅಷ್ಟು ದಿನ ನನ್ನ ಭಾವನೆ ತಪ್ಪೇನೋ ಎನ್ನಿಸಿತ್ತು. ಈಗ ನಾನಾವುದನ್ನೂ ಹೇಳಲಾರೆ."

"ಈ ದಿನ ಇದನ್ನು ಶಾಂತಾರಾಮನ ಕೈಯಲ್ಲೇ ನಿನ್ನ ಕತ್ತಿಗೆ ಕಟ್ಟಿಸಿ ಕಣ್ಣಾರೆ ನೋಡಬೇಕೆಂದಿದ್ದೆ. ಆದರೆ ಈಗೆರಡು ದಿನದಿಂದ ನಿನ್ನ ಮನಸ್ಸೇಕೋ ವ್ಯಗ್ರವಾಗಿದೆ. ಅದಕ್ಕೇ ಆ ಸಾಹಸ ಮಾಡಲಿಲ್ಲ. ಏನಾಯಿತು ಪ್ರಭಾ? ಶಾಂತಾರಾಂ ಮತ್ತೇನಾದರೂ ಆಡಿದನೆ?"

"ಅವರ ಕೈಲಿ ಇದನ್ನು ನನಗೆ ಕಟ್ಟಿಸದೆ ಒಳ್ಳೆಯದನ್ನೇ ಮಾಡಿದೆ ಲೀಲಾ. ಖಂಡಿತವಾಗಿಯೂ ನಾನದಕ್ಕೆ ಒಪ್ಪುತ್ತಿರಲಿಲ್ಲ. ಅವರ ದೃಷ್ಟಿ

ಯಲ್ಲಿ ನಾನಿನ್ನೂ ಅವರ ಪತ್ನಿಯಾಗಿಲ್ಲ." ಮನೋವ್ಯಥೆಯ ಕಿಚ್ಚನ್ನು ನುಡಿಯಲ್ಲಿ ಹೊರಗೆಡಹುತ್ತಾ ಹೇಳಿದಳು ಪ್ರಭಾವತಿ.

"ಏಕೆ, ಏನಾಯಿತು ? ನನ್ನ ಮುಂದೆ ಏನೂ ಬಚ್ಚಿಡಬೇಡ ಪ್ರಭಾ, ಹಾಗಾದರೆ ನನ್ನೆದೆಗೆ ಕಿಚ್ಚಿಟ್ಟಂತಾಗುತ್ತದೆ. ಹೊಸಮನೆಗೆ ಹೋಗುವಾಗ ನಗುನಗುತ್ತಾ ಹೋಗುತ್ತೀರೆಂದಿದ್ದೆ. ಅಷ್ಟರಲ್ಲೇ ಏನಾಯಿತು ?"

ಚಿನ್ನದ ಸರದ ವಿಷಯದಲ್ಲಿ ತವ್ಮಿಬ್ಬರಿಗೂ ನಡೆದ ಮಾತುಕತೆಯನ್ನು ಹೇಳಿ, ಪ್ರಭಾವತಿ,

"ಅವರ ದೃಷ್ಟಿಯಲ್ಲಿ ಇನ್ನೂ ನಾನು ಅವರ ಸಹಚರಿ ಎನಿಸಿಲ್ಲ, ಆಶ್ರಯಜೀವಿ ಎನ್ನುವ ಭಾವನೆಯೇ ಇದೆ. ಎಂತಲೇ ಇದು ದಾಸ್ಯಲಾಂಛನ, ಬೇಡ ಎಂದದ್ದು. ನನ್ನನ್ನು ತಪ್ಪು ತಿಳಿದುಕೊಳ್ಳಬೇಡ ಲೀಲಾ" ಎಂದಳು.

"ಪ್ರಭಾ....ಪ್ರಭಾ....ಶಾಂತಾರಾಂ ಇನ್ನೂ ನಿನ್ನನ್ನು ಅರಿತುಕೊಂಡಿಲ್ಲ ತಂಗಿ,....ನಿನ್ನನ್ನವನು ಅರಿತುಕೊಳ್ಳಲು ಅವಕಾಶ ಕೊಡು. ಅಂದು ನಾನು ಹೇಳಿದುದು ನೆನಪಿದೆಯೇ ಪ್ರಭಾ....ತಾಳ್ಮೆ....ತಾಳ್ಮೆ ಕೆಡಬೇಡ. ನೀವಿಬ್ಬರೂ ಸುಖವಾಗಿರುವುದನ್ನು ನೋಡಬೇಕೆಂಬುದೇ ನನ್ನ ಹಂಬಲು." ಕಣ್ಣೀರಿಟ್ಟು ಅಂಗಲಾಚಿದಳು ಲೀಲಾವತಿ.

"ನೀನಾಡಿದುದು ನನಗೆ ನೆನಪಿದೆ ಲೀಲಾ. ನೀನು ನನ್ನ ಬಾಳ ಬೆಳಕು. ನಿನ್ನ ಮಾತು ನೆನಪಿದೆಯೆಂದೇ ಅವರನ್ನು ಹಿಂಬಾಲಿಸಿ ಹೋಗುತ್ತಿದೇನೆ. ಆದಕ್ಕೇ ಅಂದೂ ಏನೂ ಮಾತಾಡಲಿಲ್ಲ."

"ಹಾಗಾದರೆ ಈ ಮಂಗಲಸೂತ್ರ ಕಟ್ಟಿಸಿಕೋ. ಇದು ದಾಸ್ಯಲಾಂಛನ ವಲ್ಲ, ಹಿಂದೂ ಹೆಣ್ಣಿನ ರಕ್ಷಾದೇವತೆ. ಪರಪುರುಷನ ಕಾಮದೃಷ್ಟಿ ಕಾಡದಂತೆ ಕಾಪಾಡುವ ತಾಯಿ. ಹೊಸ ಮನೆಗೆ ಹೋದವಳೇ ಮೊದಲು ಕಟ್ಟಿಸಿಕೊ. ಇದೊಂದು ಮಾತು ನಡೆಸಿಕೊಡು. ಇಲ್ಲವೆನ್ನಬೇಡ. ಅವನಿಗೂ ಹೇಳುತ್ತೇನೆ."

"ಅವರಿಗೆ ಏನೂ ಹೇಳಬೇಡ ಲೀಲಾ. ನಿನ್ನ ಮಾತು ನಡೆಸುತ್ತೇನೆ." ಎಂದು ಪ್ರಭಾ ಮಂಗಲಸೂತ್ರವನ್ನು ತೆಗೆದಿಟ್ಟುಕೊಂಡಳು.

ಆ ವೇಳೆಗೆ ಟ್ಯಾಕ್ಸಿ ಬಂದಿತು. ಮರುದಿನ ಅವರಿಬ್ಬರೂ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಪ್ರಭಾವತಿ ಬಲವಂತ ಮಾಡಿದಳು. ಅವಳ ಒತ್ತಾಯಕ್ಕೆ ಸದಾನಂದನೂ ರಜಾ ತೆಗೆದುಕ್ಕೊಂಡು ಬರುವುದಾಗಿ ಹೇಳಿದ.

" ಲೀಲಾ, ನೀನು ಕಾಫಿ ಕುಡಿದವಳೇ ಅಲ್ಲಿಗೆ ಬಂದುಬಿಡು."

ಎಂದು ಪ್ರಭಾವತಿ ಲೀಲಾವತಿಯನ್ನು ಆಲಂಗಿಸಿ ಹೇಳಿದಳು –

" ಲೀಲಾ, ನಿಮ್ಮಿಬ್ಬರ ಉಪಕಾರವನ್ನು ಈ ಜನ್ಮದಲ್ಲಿ ಮರೆಯಲಾರೆ."

ಶಾಂತಾರಾಂ ಸಾಮಾನೆಲ್ಲವನ್ನೂ ಟ್ಯಾಕ್ಸಿಗಿಟ್ಟ. ಶಾಂತಾರಾಂ ಪ್ರಭಾವತಿ ಹೋಗಿ ಟ್ಯಾಕ್ಸಿಯಲ್ಲಿ ಕುಳಿತರು. ಗೆಳತಿಯರಿಬ್ಬರೂ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಇಬ್ಬರ ಕಣ್ಣಿನಲ್ಲೂ ನೀರಾಡಿತು.

" ಬೈ ಬೈ, ನಾಳೆ ಬರುತ್ತೀಯಲ್ಲ" ಎಂದ ಶಾಂತಾರಾಂ.

" ಬೈ ಬೈ" ಎಂದ ಸದಾನಂದ.

ಟ್ಯಾಕ್ಸಿ ವೇಗವಾಗಿ ಹೊರಟು ಕಣ್ಣುಮರೆಯಾಯಿತು.

ಲೀಲಾ ಮಾತ್ರ ನಿಂತಲ್ಲೇ ನಿಂತಿದ್ದಳು. ಕಂಬನಿ ತುಂಬಿದ ಕಣ್ಣುಗಳಿಂದ, ಟ್ಯಾಕ್ಸಿ ಹೋದ ರಸ್ತೆಯನ್ನೇ ನೋಡುತ್ತಾ.

" ನಡಿ ಲೀಲಾ ಒಳಗೆ ಹೋಗೋಣ, ಇನ್ನೆಷ್ಟು ಹೊತ್ತು ನಿಲ್ಲುತ್ತಿ. ಮತ್ತೆ ಹೇಗೂ ನಾಳೆ ನೋಡುತ್ತೀಯಲ್ಲ" – ಎಂದ ಸದಾನಂದ.

ಸೆರಗಿನ ಕುಡಿಯಿಂದ ಕಂಬನಿಯನ್ನು ಒರೆಸಿಕೊಳ್ಳುತ್ತಾ, ತನಗೆ ತಾನೇ ಹೇಳಿಕೊಳ್ಳುವಂತೆ ಹೇಳಿದಳು ಲೀಲಾವತಿ –

" ಇಲ್ಲಿಂದ ಅವರನ್ನು ಕಳಿಸಲೇಬಾರದಾಗಿತ್ತೋ ಏನೋ."

## ೧೭

ಹೊಸಮನೆಯಲ್ಲಿ, ಬಾಡಿಗೆಯದಾದರೂ ತಮ್ಮದೇ ಮನೆಯಲ್ಲಿ ಉತ್ಸಾಹದಿಂದ ಆರಂಭವಾಯಿತು ಪ್ರಭಾವತಿಯ ಸಂಸಾರ.

ಅಡಿಗೆಗೆ ನೆರವಾಗಲು ಲೀಲಾವತಿ ಬಂದುದರಿಂದ, ಪ್ರಭಾವತಿಗೆ ಅಡಿಗೆ ಕೆಲಸದ ತೊಂದರೆಯಾಗಲಿಲ್ಲ. ರುಚಿಕಟ್ಟಾದ ಊಟವೇ ಆಯಿತು. ಮಧ್ಯಾಹ್ನವೆಲ್ಲಾ ಹರಟೆ ಹೊಡೆದು ಮನೆಯಲ್ಲಿ ನಗು ತುಂಬಿ, ಸಂಜೆಗೆ ಮಾತುಂಗಾದಲ್ಲಿದ್ದ 'ಅರೋರಾ' ಟಾಕೀಸಿನಲ್ಲಿ ಸಿನಿಮಾ ನೋಡಿಕೊಂಡು ಬಂದು, ರಾತ್ರಿಯ ಊಟವನ್ನು ಅಲ್ಲೇ ಮುಗಿಸಿ, ಹನ್ನೊಂದು ಗಂಟೆಯ ವೇಳೆಗೆ ಸದಾನಂದ ಲೀಲಾವತಿ ತಮ್ಮ ಮನೆಗೆ ಹಿಂದಿರುಗಲು ಸಿದ್ಧವಾದರು. ಇನ್ನೇನು ಹೊರಡಬೇಕು ಎನ್ನುವ ಹೊತ್ತಿನಲ್ಲಿ ಪ್ರಭಾವತಿ –

" ಲೀಲಾ, ಒಂದು ನಿಮಿಷ ತಡಿ. ಕುಂಕುಮ ಕೊಡುತ್ತೇನೆ."

ಎಂದು ಹೇಳಿ, ಒಳಗೆ ಹೋಗಿ ಪ್ಲಾಸ್ಟಿಕ್ ತಟ್ಟೆಯಲ್ಲಿ ತಾನು ಅವಳಿಗಾಗಿ ಕೊಂಡ ಸೀರೆ, ಕಣವನ್ನು ಇಟ್ಟುಕೊಂಡು ವೀಳ್ಯ ತಂದಳು. ಅದನ್ನು ಕಂಡು ಲೀಲಾವತಿಗೆ ಆಶ್ಚರ್ಯವಾಯಿತು.

"ಇದೆಲ್ಲಾ ಏನು ಹುಚ್ಚುಚ್ಚಾರ, ಪ್ರಭಾ. ಇದೊಂದೂ ಬೇಡ, ತೆಗೆದಿಡು. ಕುಂಕುಮ ಕೊಡು. ಅಷ್ಟಕ್ಕಿಂತ ಹೆಚ್ಚೇನು ಬೇಕು" – ಎಂದಳು.

"ಲೀಲಾ – ಇದನ್ನು ನಿನಗಾಗಿಯೇ ತಂದದ್ದು. ನಿರಾಕರಿಸಬೇಡ. ನಿನ್ನ ವಿಶ್ವಾಸಕ್ಕೆ ಹೆಚ್ಚಿನದೇನನ್ನೂ ಕೊಡುವ ಶಕ್ತಿ ನನಗಿಲ್ಲ. ನಿನ್ನಿಂದ ಸದಾನಂದರಿಂದ ನಮ್ಮದೂ ಒಂದು ಮನೆಯಾಯಿತು. ನಿಮ್ಮ ಹೆಸರು ಹೇಳಿ ದೀಪ ಹಚ್ಚುತ್ತೇನೆ. ನೀವು ಹೊತ್ತಿಸಿದ ದೀಪಕ್ಕದು ಕಾಣಿಕೆ, ನಿಮಗಲ್ಲ" ಎಂದಳು ಪ್ರಭಾವತಿ. ಅದನ್ನು ತೆಗೆದುಕೊಳ್ಳದೆ ಬೇರೆ ದಾರಿಯೇ ಉಳಿಯ ಲಿಲ್ಲ ಲೀಲಾವತಿಗೆ.

"ಲೀಲಾ, ಆಗಾಗ ಬರುತ್ತಿರು."

"ನೀನೂ ಅಷ್ಟೆ. ಎರಡು ಮೂರು ದಿನಕ್ಕೊಮ್ಮೆಯಾದರೂ ಬರದಿದ್ದರೆ, ನಾನು ಸುಮ್ಮನಿರುವುದಿಲ್ಲ" – ಎಂದಳು.

"ನಿನಗೂ ಆ ಮಾತು ಅನ್ವಯಿಸುತ್ತದೆ ಶಾಂತಾರಾಂ" ಎಂದ ಸದಾನಂದ.

"ಖಂಡಿತ ನಿನ್ನನ್ನು ಬಿಟ್ಟರೆ ನನಗೆ ಇನ್ನಾರು ಆಪ್ತರನ್ನು ತರಲಿ ಇಲ್ಲಿ" ಎಂದ ಶಾಂತಾರಾಂ. ಅವನು ಆ ಮಾತನ್ನು ಹೃತ್ಪೂರ್ವಕವಾಗಿಯೇ ಹೇಳಿದ. ಆದರೂ ಬೆಳಗಿನಿಂದ ಅವನ ಮಾತಿನಲ್ಲಿದ್ದ ಉತ್ಸಾಹ ಆಗ ಇದ್ದಂತಿರಲಿಲ್ಲ.

ಹೊರಡುವಾಗ ಲೀಲಾ ಪ್ರಭಾವತಿಗೆ –

"ನಿನ್ನೆ ನಾನು ಕೊಟ್ಟುದನ್ನು ಕಟ್ಟಿಸಿಕೋ, ಮರೆಯಬೇಡ" – ಎಂದಳು.

"ಏನದು?" ಎಂದು ಕೇಳಿದ ಶಾಂತಾರಾಂ.

"ಮನೆಯಲ್ಲಿ ಒಬ್ಬಳೇ ಇರಬೇಕು. ಅಭ್ಯಾಸವಿಲ್ಲ, ಭಯವಾಗುತ್ತದೆ ಎಂದಳು. ಯಂತ್ರ ಮಾಡಿಸಿ ತಂದುಕೊಟ್ಟದ್ದೆ. ಅದನ್ನು ಜ್ಞಾಪಿಸಿದೆ. ಅದನ್ನು ಕಟ್ಟಿಸಿಕೋ ಪ್ರಭಾ. ಏನೂ ಯೋಚನೆ ಮಾಡಬೇಡ."

"ಖಂಡಿತ ಲೀಲಾ, ನಿನ್ನ ಮಾತು ಮರೆಯುವುದಿಲ್ಲ" ಎಂದಳು ಪ್ರಭಾವತಿ.

ಇಬ್ಬರೂ ರಸ್ತೆಯವರೆಗೂ ಹೋಗಿ, ಅವರನ್ನು ಬೀಳ್ಕೊಟ್ಟು ಬಂದರು.

"ಅವರಿಬ್ಬರೂ ಇದ್ದಾಗ ಮನೆ ಎಷ್ಟೋ ತುಂಬಿದಂತೆ ಕಾಣುತ್ತಿತ್ತು. ಈಗ ಏನೋ ಬರಿದಾದ ಹಾಗೆ ಕಾಣುತ್ತದೆಯಲ್ಲಾ?" ಎಂದು ಶಾಂತಾ ರಾಮನನ್ನು ಪ್ರಶ್ನೆ ಮಾಡಿದಳು ಪ್ರಭಾವತಿ. ಶಾಂತಾರಾಂ ಅವಳ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಅವನು ಬೇರೇನೋ ಯೋಚಿಸುತ್ತಿದ್ದಂತಿತ್ತು.

"ಏನು ಯೋಚನೆ ಮಾಡುತ್ತಿದೀರ?"

"ಆಂ...."

"ನಾನು ಹೇಳಿದುದು ಕೇಳಲಿಲ್ಲವೇ?"

"ಕೇಳಿಸಿತು."

"ಮತ್ತೆ...."

"ಹೂ. ಏನು?...."

"ಅದೇನು ಯೋಚನೆ ಮಾಡುತ್ತಿರುವುದು ಹೇಳಬಾರದೇ?"

"ಲೀಲಕ್ಕನಿಗೆ ಆ ಸೀರೆ ಕೊಟ್ಟೆಯಲ್ಲಾ...."

"ಹೂ. ಕೊಡಬಾರದಾಗಿತ್ತೆ?"

"ಕೊಟ್ಟದ್ದು ಸರಿ. ಆದರೆ ಎಲ್ಲಿತ್ತು? ಹೊಸದಾಗಿ ಕೊಂಡುಕೊಂಡೆಯೇನು?"

"ಹೂ."

"ಯಾವಾಗ?"

"ಮೊನ್ನೆ. ನನಗೂ ದಿನಾ ಉಡುವ ಸೀರೆ ಬೇಕಾಗಿತ್ತು. ತರಲು ಹೋಗಿದ್ದಾಗ ಅದನ್ನೂ ತಂದೆ. ಸೀರೆ ಚೆನ್ನಾಗಿರಲಿಲ್ಲವೇ?"

"ತುಂಬಾ ಚೆನ್ನಾಗಿತ್ತು. ಆದರೆ ಅಷ್ಟಕ್ಕೂ ದುಡ್ಡೆಲ್ಲಿತ್ತು?"

"ನನ್ನ ಹತ್ತಿರವೇ."

"ನಿನ್ನ ಹತ್ತಿರ ಇರಲಿಲ್ಲ. ನನಗೆ ಗೊತ್ತು. ಲೀಲಾವತಿ ಹತ್ತಿರ ತೆಗೆದುಕೊಂಡೆಯೇನು?"

"ಊಹೂ."

"ಮತ್ತೆಲ್ಲಿತ್ತು?"

"ಒಂದೆಳೆಯ ಸರ ಇತ್ತು. ಹಾಕಿಕೊಳ್ಳುತ್ತಲೇ ಇರಲಿಲ್ಲ. ಅದನ್ನು ಮಾರಿಬಿಟ್ಟೆ."

"ನನಗೆ ಹೇಳಲೇ ಇಲ್ಲ...."

"ಏನು ದೊಡ್ಡ ವಿಷಯ ?"

"ಆದರೂ...."

"ಏನು ?"

"ಆದರೂ ನನಗೊಂದು ಮಾತು ಹೇಳಬಾರದಾಗಿತ್ತೇ? ಹೇಳಿದ್ದರೆ ನಾನು ಬೇಡ ಅನ್ನುತ್ತಿದ್ದೆನೇ ?"

"ಅನ್ನುತ್ತಿರಲಿಲ್ಲ. ಅದಕ್ಕೇ ಆ ಕೆಲಸ ಮಾಡಿದ್ದು. ಹೋಗಲಿ ಬಿಡಿ. ಅದೆಲ್ಲಿಯ ಮಾತು – ಎಲ್ಲಾ ಬಿಟ್ಟು ಈ ದಿನ. ಇನ್ನಷ್ಟು ಎಲೆಯಡಿಕೆ ಕೊಡಲೇ ?"

"ಅದಿರಲಿ – ಆ ಸರ ಮಾರುವುದು ಬೇಡ ಎಂತ ನಾನು ಹೇಳಲಿಲ್ಲವೇ ಪ್ರಭಾ ?"

ಆ ಚರ್ಚೆಯ ಸುಳಿಯಿಂದ ಮಾತನ್ನು ಎಷ್ಟು ತಿರುಗಿಸಬೇಕೆಂದು ಯತ್ನಿಸಿದರೂ ಮಾತು ಮತ್ತೆ ಅಲ್ಲಿಗೇ ಬರುತ್ತಿತ್ತು. ಆ ವಿಷಯ ಸುಖಮಯ ವಾಗದೆಂದು ಅವಳಿಗೆ ಗೊತ್ತು; ಹಾಗೇ ಅದರ ಚರ್ಚೆ ಇಂದಲ್ಲ ನಾಳೆ ಯಾದರೂ ನಡೆಯುವುದೆಂದು ಬಲ್ಲಳು. ಆದರೆ ಇಂದೇಕೆ? ಹೊಸ ಮನೆಯಲ್ಲಿ ಅವರ ಸಂಸಾರ ಆರಂಭವಾಗುವ ಮೊದಲ ರಾತ್ರಿ ವಿರಸಕ್ಕೆ ಕಾರಣವಾಗಬಹು ದಾದುದನ್ನು ಚರ್ಚಿಸಲು ಅವಳಿಗೆ ಉತ್ಸಾಹವಿರಲಿಲ್ಲ. ಮತ್ತೆ ಮಾತು ಹೊರಳಿ ಸಲು ಯತ್ನಿಸಿದಳು –

"ಇಂದು ಲೀಲಾ, ನಿಮಗೊಂದು ದೊಡ್ಡ ಕೆಲಸ ಒಪ್ಪಿಸಿದ್ದಾಳೆ."

"ಅದು ಆಮೇಲಾಗಲಿ. ಮಾತು ತಿರುಗಿಸಬೇಡ. ಈಗ ನಾನು ಕೇಳಿದುದಕ್ಕೆ ಉತ್ತರ ಹೇಳು."

ಶಾಂತಾರಾಂ ಗಡುಸಾಗಿಯೇ ಹೇಳಿದ. ಆ ಧ್ವನಿಯ ಕಾಠಿಣ್ಯವನ್ನು ಕಂಡು ಪ್ರಭಾವತಿಗೆ ಇರಿಸು – ಮುರಿಸಾಯಿತು. ಅದೇನು ನಡೆಯಬೇಕಾ ಗಿದೆಯೋ ನಡೆದು ಹೋಗಲಿ, ಹಿಂಜರಿದು ಆಗುವುದೇನು ಎಂದುಕೊಂಡು, ಹೇಳಿದಳು –

"ಯಾವುದಕ್ಕೆ ಉತ್ತರ ಬೇಕು ನಿಮಗೆ ?"

"ಆ ಚಿನ್ನದ ಸರ ಏಕೆ ಮಾರಿದೆ ?"

" ಮಾರಬೇಕು ಎನಿಸಿದ್ದರಿಂದ. ಅದು ನನ್ನದು, ಆದ್ದರಿಂದ ಮಾರಿದೆ. ಅದರಿಂದ ಬಂದ ಹಣ ನನ್ನದು – ಅದರಿಂದ ಬೇಕಾದದ್ದನ್ನು ತೆಗೆದುಕೊಂಡೆ."

" ನನ್ನನ್ನೂ ಒಂದು ಮಾತು ಕೇಳಬೇಕಾದ ಅಗತ್ಯವೂ ಇರಲಿಲ್ಲವೇ ?"

" ಇರಲಿಲ್ಲ. ಅಂದು ಅದನ್ನು ನಮ್ಮಿಬ್ಬರಿಗಾಗಿಯೂ ಮಾರೋಣ ಎಂದಾಗ, ಅದು ನಿನ್ನದು, ಅದನ್ನು ಮಾರಲು ನನಗೆ ಅಧಿಕಾರವಿಲ್ಲ ಎಂದಿರಿ. ಈಗ ಏಕೆ ಮಾರಿದೆ ಎಂದು ಕೇಳಲು ಮಾತ್ರ ಅಧಿಕಾರ ಬಂತೇ ?"

" ಇದು ಬೇಕೆಂದು ಮನನೋಯಿಸುವ ಮಾತು ಪ್ರಭಾ."

" ಮನಸ್ಸು ನೋಯಿಸುವ ಅಧಿಕಾರವಿರುವುದು ನಿಮ್ಮೊಬ್ಬರಿಗೇನೇ ? ನೀವು ನನ್ನ ಮನ ನೋಯಿಸಿದಾಗ ನಾನೂ ನಿಮ್ಮನ್ನು ಹೀಗೆ ಪ್ರಶ್ನಿಸಲಿಲ್ಲ. ಈಗಲೂ ಮನಸ್ಸು ನೋಯಿಸುತ್ತಿದ್ದೀರಿ. ಈ ವಿರಸದ ಮಾತು. ಸಂಸಾರ ಸುಖದ ಮೊದಲ ರಾತ್ರಿ ಏಕೆಂದು ಬೇಡ ಬೇಡವೆಂದರೂ ಪಟ್ಟು ಹಿಡಿದು, ಅದನ್ನೇ ಕೇಳಿ ಕರುಳು ಕಿವುಚುತ್ತಿದ್ದೀರಿ. ಈ ಸುಖಕ್ಕಾಗಿಯೇ ನಾನು ಮನೆ ಮನೆ ಎಂದು ಒದ್ದುಕೊಂಡದ್ದು ? ಹೀಗೆ ರಾತ್ರಿ ಕಳೆಯಬೇಕೆಂದೇ – ಅವರನ್ನು ಔತಣಕ್ಕೆ ಕರೆದು ಮೆರೆದದ್ದು ? ಈ ರಾತ್ರಿಗಾಗಿ ನಾನೆಷ್ಟು ಹಂಬಲಿಸಿದೆ, ಈ ರಾತ್ರಿಯ ಎಷ್ಟು ಕನಸು ಕಂಡೆ, ಈ ರಾತ್ರಿಯ ಸುಖದ ವಿಷಯ ಏನೇನು ಸವಿಗನಸಿನ ಸೌಧ ಕಟ್ಟಿದೆ – ಅದನ್ನು ವಿಚಾರಿಸುವ ಇಚ್ಛೆ ಇತ್ತೆ ನಿಮಗೆ ? ಊಹೂ....ಊಹೂ....ಅದಾವುದೂ ಬೇಕಾಗಲಿಲ್ಲ. ನಿಮಗೆ ಬೇಕಾಗಿರುವುದು ನಾನಲ್ಲ, ನನ್ನ ಮೈಯ ಮೇಲೆ, ಮನಸಿನ ಮೇಲೆ ಅಧಿಕಾರ ಮಾತ್ರ. ಈ ರಾತ್ರಿ ನಾನು ನಿಮ್ಮ ಪತ್ನಿಯಾಗಬೇಕೆಂದು ಲೀಲಾ ಕನಸು ಕಂಡಿದ್ದಳು. ಅದಕ್ಕಾಗೇ ನಿಮ್ಮ ಕೈಯಲ್ಲೇ ಕಟ್ಟಿಸಿಕೊಳ್ಳಬೇಕೆಂದು ಬಯಸಿ ಬಯಸಿ ಈ ಮಂಗಲಸೂತ್ರ ತಂದು ಕೊಟ್ಟಿದ್ದಳು. ನಾನೂ ಆ ಕನಸು ಕಂಡಿದ್ದೆ. ಹೋಗಿ, ನಾಳೆ ಇದನ್ನು ತೆಗೆದುಕೊಂಡು ಹೋಗಿ, ಅವಳ ಮುಖದ ಮೇಲೆ ಹಾಕಿ, 'ನನಗೆ ಬೇಕಾದದ್ದು ಪತ್ನಿಯಲ್ಲ, ದಾಸಿ. ದಾಸಿಗೆ ಈ ಮಾಂಗಲ್ಯದ ಅಲಂಕಾರ ಬೇಕಿಲ್ಲ' ಎಂದು ಹೇಳಿ ಬನ್ನಿ. ಆಗಲಾದರೂ ನಿಮಗೆ ತೃಪ್ತಿಯಾಗಲಿ" ಎಂದು ಪ್ರಭಾವತಿ ಅವನ ಕೈಗೆ ಕೊಡಬೇಕೆಂದು ಉಡಿಯಲ್ಲಿ ಮುಚ್ಚಿಟ್ಟುಕೊಂಡಿದ್ದ ಮಂಗಳಸೂತ್ರವನ್ನು ತೆಗೆದು ಶಾಂತಾರಾಮನೆದುರಿಗೆ ನೆಲಕ್ಕೆ ರಾಚಿದಳು. ಆ ಏಟಿನ ವೇಗಕ್ಕೆ ಮಾಂಗಲ್ಯದ ದಾರ ಕತ್ತರಿಸಿ, ಕರಿಯ ಮಣಿ, ಬಂಗಾರದ ಗುಂಡುಗಳು, ಕೊಳವಿ, ತಾಳಿಯ ಬಟ್ಟು ನೆಲದಲ್ಲಿ

ಸೂರಾಡಿದವು. ಬಳಿಕ ಅಲ್ಲಿ ನಿಲ್ಲಲಾರದೆ, ಕತ್ತಲು ಕವಿದ ವರಾಂಡದಲ್ಲಿ ಹೋಗಿ ನಿಂತಳು. ಹೆಣ್ಣಿನಲ್ಲಿ ಕ್ರೋಧದ ಸಹಚರಿಯಾದ ಅಳು ಅವಳ ಗಂಟಲಲ್ಲಿ ಉಕ್ಕೇರುತ್ತಿತ್ತು. ಬಾಯುಲ್ಲಿ ಸೆರಗನ್ನು ತುರುಕಿಕೊಂಡು ಅದನ್ನು ತಡೆದಳು. ನೆಟ್ಟಗೆ ನಿಲ್ಲಲಾಗಲಿಲ್ಲ ಅವಳಿಗೆ. ಗೋಡೆಗೆ ಬೆನ್ನು ಚಾಚಿ ನಿಂತಳು.

ಅವಳ ಕಣ್ಣಲ್ಲಿ ಕಂಬನಿ ಹರಿಯುತ್ತಿತ್ತು, ಎದೆಯಲ್ಲಿ ಜ್ವಾಲೆ ದಹದಹಿಸುತ್ತಿತ್ತು. ಮಿದುಳು ಒಂದೇ ಸಮನೆ ಅವಳ ಹೃದಯವನ್ನು ಕಾಡಿಸಿ, ಛೇಡಿಸಿ ಕೇಳುತ್ತಿತ್ತು–

"ಎಲ್ಲರನ್ನೂ ತೊರೆದು ಬಂದುದು ಈ ಸುಖಕ್ಕಾಗಿಯೇ? ಮಾತು ಮಾತಿಗೆ ವಿವರಣೆ ಕೊಡಬೇಕಾದ ಗುಲಾಮಗಿರಿಗಾಗಿಯೇ?"

ಶಾಂತಾರಾಮನಿಗೂ ಹಾಗೇ ಆಗಿತ್ತು. ಇದ್ದಕ್ಕಿದ್ದಂತೆಯೇ ರಪರಪನೆ ಮಳೆ ಹೊಯ್ದು ಬಿಟ್ಟಂತಾಗಿತ್ತು. ಅವನು ತನ್ನ ಮಾತಿನ ಪರಿಣಾಮ ಹೀಗಾಗುವುದೆಂದು ಊಹಿಸಿರಲಿಲ್ಲ. ತನ್ನನ್ನು ಕೇಳದೆ ಹೀಗೆ ಮಾಡಿದಳಲ್ಲಾ ಎಂದು ಅವನಿಗೆ ಅಸಮಾಧಾನವಾಗಿತ್ತು. ಅವಳು ಮಾತಿನಲ್ಲಿ 'ತಪ್ಪಾಯಿತು' ಎಂದಿದ್ದರೆ ಎಲ್ಲವನ್ನೂ ಮರೆಯಲು ಸಿದ್ಧನಾಗಿದ್ದ. ಗಂಡನಾದವನಿಗೆ ಅಷ್ಟು ಕೇಳಲೂ ಅಧಿಕಾರವಿಲ್ಲವೇ? ಅವಳಿಗಾಗಿ, ಅವಳ ಪ್ರೀತಿಗಾಗಿ ಎಲ್ಲವನ್ನೂ ಬಿಟ್ಟು ಬಂದವನಿಗೂ ಅಷ್ಟು ಅಧಿಕಾರವಿಲ್ಲವೇ?....

ಅವಳ ಮಾತುಗಳು ಅವನ ಮಿದುಳಿನಲ್ಲಿ ಸುತ್ತುತ್ತಿದ್ದುವು. ಅವಳ ಭಗ್ನಸ್ವಪ್ನದಂತೆ, ಹರಿದ ಮಂಗಲಸೂತ್ರ ಅವನ ಕಾಲ ಬಳಿ ಚೆಲ್ಲಾಡಿತ್ತು.

ಪ್ರಭಾವತಿಗೆ ತನ್ನಲ್ಲಿ ಎಷ್ಟು ಪ್ರೀತಿಯಿದೆಯೆಂದು ಅವನಿಗೆ ಗೊತ್ತಿತ್ತು. ತನಗಾಗಿ ಅವಳು ಏನು ಮಾಡಲಿಲ್ಲ?

ಇಷ್ಟು ಸಣ್ಣ ಮಾತಿಗೆ ಅವಳನ್ನು ಛೇಡಿಸುವುದೇ?

ತಾನು ಮಾಡಿದುದು ತಪ್ಪೆಂದು ತೋರಿತು ಅವನಿಗೆ. ಪಶ್ಚಾತ್ತಾಪದ ಜ್ವಾಲೆ ಅವನ ಅಂಗಾಂಗವನ್ನು ವ್ಯಾಪಿಸಿತು. ಬಗ್ಗಿ ಕುಳಿತು ಮಾಂಗಲ್ಯದ ಮಣಿಗಳನ್ನು ಆರಿಸತೊಡಗಿದ. ಎಲ್ಲವನ್ನೂ ಆರಿಸಿದ ಬಳಿಕ, ಅದನ್ನು ಅವಳ ಕತ್ತಿಗೆ ಕಟ್ಟಬೇಕೆನಿಸಿ, ತಾನೇ ಅದೆಲ್ಲವನ್ನೂ ಮತ್ತೆ ಪೋಣಿಸಿದ. ದಾರವಾಗಲಿ, ಮಣಿಯಾಗಲಿ, ಕಾಣಿಸದಂತೆ ಅವನ ಕಣ್ಣಲ್ಲಿ ಪಶ್ಚಾತ್ತಾಪದ ನೀರು ತುಂಬಿತ್ತು....

ಮಾಂಗಲ್ಯವನ್ನು ಕಟ್ಟಿ, ಅದನ್ನು ಹಿಡಿದು ಪ್ರಭಾವತಿಯ ಬಳಿ ಹೋದ.

ಪ್ರಭಾವತಿ ಕಲ್ಲಿನಲ್ಲಿ ಕೊರೆದು, ಗೋಡೆಗೆ ನಿಲ್ಲಿಸಿದ ವಿಗ್ರಹದಂತೆ ನಿಂತಿದ್ದಳು. ಬೀದಿಯ ದೀಪದಿಂದ ಬೀಳುತ್ತಿದ್ದ ಮಂಕು ಬೆಳಕಿನಲ್ಲಿ ಅವಳ ದುಃಖದಗ್ಧವಾದ ಮುಖವನ್ನು ನೋಡಿದ. ತನ್ನನ್ನೇ ತಾನು ಥಳಿಸಿಕೊಳ್ಳಬೇಕು ಎನಿಸಿತು....

ಗೋಡೆಗೆ ಒರಗಿದ ಅವಳನ್ನು ಎತ್ತಿ, ಮೃದುವಾಗಿ ಎದೆಗೊರಗಿಸಿಕೊಂಡ. ಅಲ್ಲಾಡಿಸಿದುದರಿಂದ ಅವಳಿಗೂ ಮೈಮೇಲೆ ಎಚ್ಚರವಾಗಿ, ಕಣ್ಣನ್ನು ತೆರೆದು ನೋಡಿದಳು. ಕಣ್ಣು ಮುಚ್ಚಿದಾಗ, ರೆಪ್ಪೆಯಲ್ಲಿ ಸೆರೆಯಾಗಿದ್ದ ಕಂಬನಿಯ ಹನಿಯೊಂದು, ಜಾರಿ ಕೆಳಗೆ ಧುಮುಕಿತು. ತೇವವಾದ ಅವಳ ಕಣ್ಣುಗಳನ್ನು ತುಟಿಯಿಂದ ಒರಸಿ, ಅವಳ ಮೈಯನ್ನು ತನ್ನ ತೋಳಲ್ಲಿ ಹುದುಗಿಸಿಕೊಂಡ. ಅವಳ ಮೇಲಿನ ಪ್ರೀತಿ, ಅವನ ತೋಳುಗಳಲ್ಲಿ ನುಗ್ಗಿ, ಅವಳ ಮೈಯನ್ನು ಬಲವಾಗಿ ಬಿಗಿಯಿತು.

" ನಿಮಗೆ ನಾನು ಬೇಕಾದೆನೇ ?"

ದುಃಖಭಾರ ತೂಗಿ ತೊನೆವ ಧ್ವನಿಯಲ್ಲಿ ಕೇಳಿದಳು ಪ್ರಭಾವತಿ.

" ನನಗೆ ನೀನು ಬೇಕು ಪ್ರಭಾ, ಎಂದೆಂದಿಗೂ ಬೇಕು. ನನ್ನ ಆ ಮೈ ಮರೆವನ್ನು ಮರೆತುಬಿಡು ಪ್ರಭಾ."

" ನಿಮ್ಮವಳಾಗಬೇಕೆಂದಲ್ಲವೇ ನಾನು ಬಂದದ್ದು. ಹೀಗೇಕೆ ನನ್ನನ್ನು ದೂರಮಾಡುವಿರಿ ?"

" ಪ್ರಭಾ, ಯಾವುದೋ ಮರೆವು ನನ್ನಿಂದ ಆ ಮಾತಾಡಿಸಿತು. ನನಗೀಗ ಅರಿವಾಗುತ್ತಿದೆ."

" ನಾನೂ ನಿಮ್ಮನ್ನು ರೇಗಿಸುವ ಹಾಗೇ ಮಾತಾಡಿದೆ. ನನಗೂ ಯಾವುದೋ ಗ್ರಹ ಹಿಡಿದಿತ್ತು."

" ಅದನ್ನು ಬಿಡಿಸಲೆಂದು ಲೀಲಕ್ಕ ಕೊಟ್ಟ ರಕ್ಷೆಯನ್ನು ತಂದಿದ್ದೇನೆ ಪ್ರಭಾ."

ಶಾಂತಾರಾಮ ಮಾಂಗಲ್ಯವನ್ನು ತೋರಿದ.

" ಹರಿದುಹೋದುದನ್ನು ನೀವೇ ಕಟ್ಟಿದಿರಾ ?"

" ಹೂ. ನಾನಲ್ಲದೆ ಮತ್ತಾರು ಕಟ್ಟಬೇಕು ಪ್ರಭಾ....ಇದು ನಮ್ಮ ಬಾಳ ಮೌಕ್ತಿಕ ಮಾಲೆ. ಎಲ್ಲಿ, ಕತ್ತು ಕೊಡು."

ತನ್ನ ಕತ್ತನ್ನು ಅವನ ಕೈಯ ಬಳಿ ಚಾಚಿ ಹೇಳಿದಳು ಪ್ರಭಾವತಿ –

"ನಿಮ್ಮವಳನ್ನಾಗಿ, ನಿಮ್ಮ ಸಹಚಾರಿಣಿಯನ್ನಾಗಿ, ನಿಮ್ಮ ಸಹ ಧರ್ಮಿಣಿಯನ್ನಾಗಿ ಮಾಡಿಕೊಳ್ಳಿ."

ಅವಳ ಕತ್ತಿಗೆ ಮಾಂಗಲ್ಯವನ್ನು ಕಟ್ಟಿ, ತನಗೆ ನೆನಪಿದ್ದ ವಿವಾಹ ಮಂತ್ರವನ್ನು –

"ಧರ್ಮೇಚ, ಅರ್ಥೇಚ, ಕಾಮೇಚ ನಾತಿ ಚರಾಮಿ" ಎಂದು ಹೇಳಿ, ಪ್ರಭಾವತಿಯನ್ನು ಎದೆಗೊತ್ತಿಕೊಂಡು ಮನೆಯೊಳಗೆ ನಡೆಸಿದ. ಧರ್ಮಕ್ಕಿಂತ ಮುಂದಾಗಿ ಕಾಮ ಹೆಜ್ಜೆ ಇಟ್ಟಿತು.

## ೧೮

ಪ್ರಭಾವತಿಯ ಸಂಸಾರ ನಡೆಯಲಾರಂಭಿಸಿತು – ಗಂಟೆಗಳು, ದಿನಗಳು, ವಾರಗಳು, ತಿಂಗಳುಗಳು ಕುದುರೆಗಳು ಕಟ್ಟಿದ ಕಾಲದ ರಥದಲ್ಲಿ ಕುಳಿತು ಓಡಲಾರಂಭಿಸಿತು.

ಆ ರಥಯಾತ್ರೆ ಹಳತಾದಂತೆ, ರಥದಲ್ಲಿ ಕುಳಿತೆರಡು ಜೀವಿಗಳಲ್ಲಿ, ದೇಹದ ಐಕ್ಯತೆಯಾದಂತೆ, ಮನಸ್ಸಿನ ಐಕ್ಯತೆ ಮೂಡಿ ಬರಲಿಲ್ಲ. ಸ್ನೇಹ ಭರವಸೆಗಳಿಗಿಂತ, ವಿರಸ ನಿರಸನಗಳೇ ಹೆಚ್ಚಿತು. ಪ್ರಭಾವತಿಗನಿಸಿತು – ಇದು ತಾನು ಕನಸು ಕಂಡ ದಾಂಪತ್ಯವಲ್ಲ, ಎಂದು.

ಶಾಂತಾರಾಂ ತರುತ್ತಿದ್ದ ನೂರಿಪ್ಪತ್ತು ರೂಪಾಯಿಗಳ ಸಂಬಳ ಆ ಇಬ್ಬರ ಸಂಸಾರಕ್ಕೂ ಸಾಲದೇ ಬರುತ್ತಿತ್ತು. ಪ್ರಭಾವತಿಗಂತೂ ಸಂಸಾರ ನಡೆಸುವ ಜಾಣ್ಮೆ ತಿಳಿಯದು. ಹಣ ಕೊಡಬೇಕು – ಸಾಮಾನು ತರಬೇಕು, ಇಷ್ಟು ವಿನಾ, ವ್ಯಾಪಾರದಲ್ಲಿ ಅನಕ್ಕೂ ಹೆಚ್ಚಿನ ಕೌಶಲ್ಯವಿದೆ ಎಂಬುದು ಅವಳು ತಿಳಿಯದ ಮಾತು. ಒಂದು ವೇಳೆ ತಿಳಿದಿದ್ದರೂ ಅದರಿಂದ ಹೆಚ್ಚಿನ ವ್ಯತ್ಯಾಸ ವೇನೂ ಆಗುತ್ತಿರಲಿಲ್ಲ. ನೂರಿಪ್ಪತ್ತು ರೂಪಾಯಿಗಳ ಜೀವನ ಎಷ್ಟು ಜಾಣ್ಮೆ ಮಾಡಿದರೂ ಕಾರ್ಪಣ್ಯದ ಜೀವನವೇ? ಬೊಂಬಾಯಿನಲ್ಲಿ ನೂರಿಪ್ಪತ್ತಕ್ಕೆ ಹೆಚ್ಚಿನ ಬೆಲೆಯಿಲ್ಲ. ತಾನು ತಂದ ನೂರಿಪ್ಪತ್ತರ ಬೆಲೆ ಎಷ್ಟಾದರೂ ಶಾಂತಾರಾಂ ನೂರಿಪ್ಪತ್ತು ರೂಪಾಯಿ ಸಂಬಳ ತರುವ 'ಗಂಡ'ನಂತೆ ನಡೆಯುತ್ತಿದ್ದ.

ತಾನು ದುಡಿಯುವ ಗಂಡಸು ಎಂಬುದು ಗೊತ್ತಾಗುವಂತೆ ನಡೆದುಕೊಳ್ಳುತ್ತಿದ್ದ. ಹೀಗಿದ್ದಾಗ ಸ್ನೇಹಕ್ಕಿಂತ ವಿರಸವೇ ಬೆಳೆಯಲು ಹೆಚ್ಚು ಅವಕಾಶವಿತ್ತು.

ಅಲ್ಲದೆ ಅಲ್ಲಿಯ ಜೀವನವೂ ಅವರಿಬ್ಬರಲ್ಲಿ ಹೆಚ್ಚಿನ ಸ್ನೇಹ ಬೆಳೆಯಲು ಅನುಕೂಲವಾಗಿರಲಿಲ್ಲ. ಬೆಳಗ್ಗೆ ಏಳು ಗಂಟೆಗೆ ಎದ್ದ ಶಾಂತಾರಾಂ ಪೇಟೆಯಿಂದ ಅಷ್ಟು ತರಕಾರಿ ತಂದುಕೊಟ್ಟು, ಅವಸರವಸರವಾಗಿ ಸ್ನಾನ, ಊಟ ಮುಗಿಸಿ ಒಂಭತ್ತೂವರೆಯ ರೈಲಿನಲ್ಲಿ ಆಫೀಸಿಗೆ ಹೊರಟರೆ, ಮತ್ತೆ ಮನೆಗೆ ಬರುವುದು ರಾತ್ರಿ ಎಂಟಕ್ಕೇ. ಅವನು ಮತ್ತೆ ಮನೆಗೆ ಬರುವವರೆಗೂ ಅವಳು ಏಕಾಕಿ. ಬಂದಾಗಲೂ ಹೆಚ್ಚಿನ ಮಾತುಕತೆಗಾಗಲಿ, ಸರಸಕ್ಕಾಗಲಿ ಅವಕಾಶವಿಲ್ಲ. ಊಟದ ಶಾಸ್ತ್ರ ಮುಗಿಸಿ, ಆದಷ್ಟು ಬೇಗ ಮಲಗಬೇಕು. ಇಲ್ಲವಾದರೆ ಮತ್ತೆ ಬೇಗ ಏಳಬೇಕಲ್ಲ. ಇದರಿಂದಾಗಿ ಅವರ ಜೀವನ ಯಂತ್ರದಂತಾಗಿ ಹೋಗಿತ್ತು.

ಹೋಗಲಿ ವಾರಕ್ಕೊಂದು ಬಾರಿ ಬರುವ ಭಾನುವಾರದ ದಿನವಾದರೂ, ವಾರದ ಬೇಸರದ ಜಡತೆಯನ್ನೆಲ್ಲಾ ಕಳೆದುಕೊಳ್ಳುವಂತೆ ಹಾಯಾಗಿರಲು ಸಾಧ್ಯವೇ? ಪ್ರಕೃತಿಸಿದ್ಧವಾದ ದೈಹಿಕ ವ್ಯಾಪಾರಗಳಲ್ಲದೆ, ಉಳಿದುದೆಲ್ಲಕ್ಕೂ ಬೊಂಬಾಯಿನಲ್ಲಿ ಹಣ ಹಿಡಿದೇ ಮಾತನಾಡಬೇಕು. ಆದರೆ ಇವರ ಸಂಸಾರಕ್ಕೆ ಬರುವ ಆದಾಯದಲ್ಲಿ, ಸಂಸಾರ ನಡೆಸುವುದೇ ಕತ್ತಿಯಲುಗಿನ ಸಾಮು. ಇನ್ನು ವಿಹಾರಕ್ಕೆಲ್ಲಿ ಹಣ ತರುವುದು?

ಹಣದ ಕೊರತೆ – ಬೇಸರ. ಇವೆರಡರ ನಡುವೆ, ಪ್ರಭಾವತಿಯ ಬಾಳಿನ ಹಾಲುಹೊಳೆ ಹುಳಿಯಾಗಲಾರಂಭಿಸಿತು.

ಈ ಎಲ್ಲ ಕತ್ತಲ ನಡುವೆ ಅವಳಿಗಿದ್ದ ಒಂದೇ ಬೆಳಕಿನ ಕಿರಣ – ಲೀಲಾವತಿಯ ಸ್ನೇಹ. ಬೇಸರವಾದಾಗ ಯಾವಾಗಲೊಮ್ಮೆ ಲೀಲಾವತಿಯ ಮನೆಗೆ ಹೋಗಿ ಹರಟೆ ಹೊಡೆದು ಬರುವಳು. ಅಲ್ಲಿಂದ ಹಿಂದಿರುಗಿ ಬಂದಾಗ, ಅವಳ ಬಾಳಿನಲ್ಲಷ್ಟು ಹೊಸತನ ಬಂದಂತಾಗುವುದು. ಆದರೆ ಅದೂ ಬಹು ಕಾಲ ಉಳಿಯುವುದಿಲ್ಲ. ಅಲ್ಲದೆ ದೂರದ ಗಿರಗಾಂವ್‌ನಲ್ಲಿದ್ದ ಅವಳ ಮನೆಗೆ ದಿನವೂ ಹೋಗಿಬರುವುದೂ ಸಾಧ್ಯವಿರಲಿಲ್ಲ. ಹತ್ತಿರದಲ್ಲಾರೂ ಅವಳ ಗೆಳತಿಯರೂ ಇರಲಿಲ್ಲ.

ಅವಳಿದ್ದ ಮನೆಯ, ಆ ಅಂತಸ್ತಿನಲ್ಲೇ ಮತ್ತೆ ಮೂರು ಬೇರೆ ಸಂಸಾರ

ವಿದ್ದವು. ಆದರೆ ಅವರಲ್ಲಿ ಯಾರೂ ಕನ್ನಡಿಗರಲ್ಲ, ಎಲ್ಲರಿಗೂ ಅವರವರ ಜೀವನದ ತಾಪತ್ರಯ.

ಈ ಬೇಸಗದ ಭಾರ ತಡೆಯಲಾರದೆ ಒಮ್ಮೊಮ್ಮೆ ಪ್ರಭಾವತಿ, ಶಾಂತಾ ರಾಮನಿಗೆ –

" ದಿನವೂ ಎಂಟು ಗಂಟೆಗೆ ಬರುತ್ತೀರಲ್ಲಾ. ಐದು ಗಂಟೆಗೆ ಆಫೀಸು ಮುಗಿದರೆ, ಆರಕ್ಕಾದರೂ ಮನೆಗೆ ಬರಬಾರದೇ ?" ಎನ್ನುವಳು.

" ಹೆಸರಿಗೆ ಆಫೀಸು ಮುಗಿಯುವುದು ಐದಕ್ಕೆ. ಆದರೆ ಅದು ಮುಗಿಯು ವುದು ಆರಕ್ಕೇ. ಅಲ್ಲಿಗೇ ಕೆಲಸ, ಮಾಡಿ ತಲೆ ರೋಸಿಟ್ಟಿರುತ್ತದೆ. ಒಂದು ಗಳಿಗೆ ಯಾರಾದರೂ ಸ್ನೇಹಿತರೊಂದಿಗೆ ಹರಟೆ ಹೊಡೆದು ಬರುವುದರಲ್ಲಿ ಎಂಟಾಗುತ್ತದೆ."

" ದಿನವೂ ಸ್ನೇಹಿತರೇ? ಒಂದೊಂದು ದಿನ ಇಲ್ಲೂ ಹರಟೆ ಹೊಡೆದ ರಾಗದೇ ?"

" ಇಲ್ಲೂ ಬಂಡ ಮೇಲೆ ಅದು ಇದ್ದೇ ಇರುತ್ತದಲ್ಲ! ಅದು ತಪ್ಪಿದ್ದೆಂದು ? ಹೋಗಲಿ ಎಲ್ಲಿ ಮಾತು. ಎಲೆ ಹಾಕುತ್ತೀಯಾ ?"

ನೀರಸವಾದ ಧ್ವನಿಯಲ್ಲಿ, ಅವಸರವಸರವಾಗಿ ಆ ಮಾತು ಹೇಳಿ ಮುಗಿಸುವನು ಶಾಂತಾರಾಂ.

ಮೊದಮೊದಲು ಕೆಲವು ದಿನ ಅವನಿಂದ ಈ ಬಗೆಯ ಉತ್ತರ ಬಂದಾಗ, ಅವಳ ಮನಸ್ಸು ಮುಳ್ಳಾಗುತ್ತಿತ್ತು. ಮುನಿಸಿನಿಂದ –

" ನನ್ನೊಡನೆ ಮಾತನಾಡುವುದಕ್ಕಿಂತ ಊಟಕ್ಕೇ ಅವಸರವೇ ?" ಎನ್ನುವಳು. ಆ ಮಾತಾಡುವಾಗ ಅವಳ ಕರುಳು ಕಿವುಚಿದಂತಾಗುವುದು.

" ಹಾಗೆಂದು ತಾನು ಹೇಳಲಿಲ್ಲ. ಆದರೆ ಏನು ಮಾತಾಡಬೇಕು ಹೇಳು ? ಸಂಸಾರದ ತಾಪತ್ರಯ ಇದ್ದೇ ಇದೆ."

" ಅದು ಬಿಟ್ಟು ನನ್ನೊಂದಿಗೆ ಮಾತನಾಡುವುದು ಬೇರೇನೂ ಇಲ್ಲವೇ ?" – ಆ ಮಾತು ಕೇಳಿ ಚಾಟಿಯ ಏಟು ತಿಂದಂತೆ ವಿಹ್ವಲಳಾಗಿ ಕೇಳುವಳು ಪ್ರಭಾವತಿ. ದಿನವೂ ಅವಳೊಂದಿಗೆ ಏನು ಮಾತನಾಡಬೇಕು ? ಆ ಪ್ರಶ್ನೆಯೇ

ತನಗೆ ಅರ್ಥವಾಗದಂತೆ ಉತ್ತರ ಕೊಡದೆ ಅವಳ ಮುಖ ನೋಡುವನು ಶಾಂತಾರಾಂ. ತನ್ನ ಕೊರಗನ್ನು ಹೃದಯದಲ್ಲೇ ಹುಗಿದುಕೊಂಡು ಪ್ರಭಾವತಿ ಸುಮ್ಮನಾಗುವಳು.

ಒಮ್ಮೊಮ್ಮೆ ನಗುತ್ತಾ ತನ್ನ ಒಂಟಿ ಬಾಳಿನ ಬೇಸರವನ್ನು ತೋಡಿ ಕೊಳ್ಳುವಳು.

" ನೀವೇ ಜೊತೆಯೆಂದು ನೆಚ್ಚಿ ಬಂದ ನನಗೆ, ನಿಮ್ಮ ದರ್ಶನವೂ, ದಿನವೂ ಮಳೆಗಾಲದ ಸೂರ್ಯನಂತಾಗಿ ಹೋದರೆ, ನಾನು ಯಾರ ಜೊತೆ ಇರಬೇಕು ಹೇಳಿ. ಉಳಿದದ್ದೆಲ್ಲಕ್ಕೂ ಹಣದ ತೊಂದರೆಯಿದೆ ನಮಗೆ. ಆದರೆ ಹಾಯಾಗಿ ಮಾತಾಡುವುದೂ ಅಭಾವವಾಗಬೇಕೇ?"

" ದುಡಿಯುವ ಗಂಡಸು, ಹೆಂಡತಿಯೊಡನೆ ಸಲ್ಲಾಪ ಮಾಡುತ್ತಾ ಕುಳಿತರೆ, ಸಂಸಾರ ನಡೆಯಬೇಕೋ ಬೇಡವೋ. ಸುತ್ತಮುತ್ತ ಹೆಂಗಸ ರಿಲ್ಲವೇ? ಅವರ ಸ್ನೇಹ ಮಾಡಿಕೋ. ಹೇಗೂ ಬೇಕಾದಾಗ ಲೀಲಾವತಿಯ ಮನೆಗೆ ಹೋಗಿ ಬರುತ್ತೀಯಲ್ಲ. ಹರಟೆಯಲ್ಲಿ ಹೊತ್ತು ಕಳೆಯಲು ಹೆಂಗಸರಿಗೆ ಹೇಳಿಕೊಡಬೇಕೇ?"

" ಎಲ್ಲಾ ನಾನರಿಯದ ಭಾಷೆಯ ಜನ. ಅವರೆಲ್ಲರಿಗೂ ಅವರ ಸಂಸಾರ ಮಕ್ಕಳು. ನನ್ನೊಡನೆ ಹರಟೆ ಹೊಡೆಯುವುದಕ್ಕೆಲ್ಲಿ ಅವರಿಗೆ ಹೊತ್ತು. ಒಂದು ವೇಳೆ ಯಾರೊಂದಿಗೆ ಹರಟೆ ಹೊಡೆದರೂ ನಿಮ್ಮೊಂದಿಗೆ ಮಾತನಾಡಿದ ಹಾಗಾಗುತ್ತದೆಯೇ?"

" ನನ್ನೊಂದಿಗಾದರೂ ಹರಟೆ ಹೊಡೆಯುವಂಥದು ಏನಿರುತ್ತದೆ?"

" ಏನೂ ಇಲ್ಲವೇ?" – ಹರಿತವಾಗಿ ಕೇಳುವಳು ಪ್ರಭಾವತಿ, ನಗೆ ಉಡುಗಿ.

" ಏನಿದೆ?"

ಹೆಂಡತಿಯೊಂದಿಗೆ ಹೊತ್ತು ಹೇಗೆ ಕಳೆಯುವುದೆಂಬುದನ್ನು ಅವನಿಗೆ ಹೇಳಿ ಕೊಡಬೇಕೇ? ಆ ಮಾತು ಕೇಳಿದಾಗ ಅವಳಲ್ಲಿ ಸಿಟ್ಟು ಕೆರಳುವುದು. ಆದರೆ ಸಿಟ್ಟಾಗಿ ಏನು ಉಪಯೋಗ?

ಅಂಥ ಹೊತ್ತಿನಲ್ಲಿ ಅವಳಿಗೆ ಲೀಲಾವತಿಯ ಮಾತು ನೆನಪಾಗುವುದು. " ತಾಳ್ಮೆ, ಪ್ರಭಾವತಿ, ತಾಳ್ಮೆ. ತಾಳ್ಮೆಯೇ ಸಂಸಾರದ ತಾರಕ ಮಂತ್ರ. ನಿಮ್ಮಂಥ ಸಂಸಾರಕ್ಕಂತೂ ಅದೇ ಅಡಿಗಲ್ಲು."

ನಿಟ್ಟುಸಿರು ಬಿಟ್ಟು ಸುಮ್ಮನಾಗುವಳು. ಬಲಿದು ಬಂದ ಬೇಸರದಲ್ಲಿ, ಅವಳ ಮೈಯ ರಕ್ತವೂ ಕಾವೇರಿ ತಣ್ಣಗಾಗುವುದು. ಹಿಮಗಾಳಿಗೆ ಸಿಲುಕಿ ದಂತೆ ಅವಳ ಮೈ ನಡುಗುವುದು.

"ಪ್ರೇಮದ ಸಿಮೆಂಟು ಗಟ್ಟಿಯಾಗಿ ಕೂಡಲು ತಾಳ್ಮೆಯ ನೀರು ಬೇಕು" – ಹಾಗೆಂದು ಲೀಲಾವತಿ ಹೇಳಿದ್ದಳು.

ಆದರೆ ಈ ಜೀವನದಲ್ಲಿ ಪ್ರೇಮವೆಲ್ಲಿದೆ?

ನಿಜ. ದಿನವೂ ಅವರಿಬ್ಬರೂ ಜೊತೆಗೆ ಮಲಗುತ್ತಾರೆ. ಮೈಗಳು ಒಂದಾಗುತ್ತವೆ, ಬೇರಾಗುತ್ತವೆ. ಆದರೆ ಅದರಲ್ಲೂ ಮೊದಮೊದಲಿನ ಬಯಕೆಯ ಕಾವಿಲ್ಲ. ಬರಬರುತ್ತಾ ತಮ್ಮ ಯಾಂತ್ರಿಕ ಜೀವನದಂತೆ, ಅದೂ ಒಂದು ಯಾಂತ್ರಿಕ ಕ್ರಿಯೆಯಾಗಿದೆ. ಹಿಂದಿನ ದಿನಗಳ ಪ್ರಣಯದ ಉಗ್ರತೆಯನ್ನು ನೆನೆದಾಗ ಹಿಮಗಿರಿಯ ಮಂಜಿನ ತಪ್ಪಲಲ್ಲಿ ಕುಳಿತು ಚಳಿಯಿಂದ ನಡುಗುತ್ತಿರುವವನು, ಬೆಂಕಿಯ ನೆನಪು ಮಾಡಿಕೊಂಡಂತಾಗುತ್ತದೆ, ಅಷ್ಟೆ.

ಇದು ಜೀವನವೇ, ಇದೇ ಪ್ರೇಮವೇ ?

ಇದನ್ನು ಯೋಚಿಸುತ್ತಾ ಯೋಚಿಸುತ್ತಾ ಅವಳಿಗೆ ತನ್ನ ಇಡೀ ಬಾಳು ಅರ್ಥಶೂನ್ಯವಾದಂತೆ ತೋರುತ್ತದೆ.

ಇಷ್ಟಕ್ಕಾಗಿ ತಾನು ಮನೆ ಮಠ, ತಂದೆ ತಾಯಿ, ತನ್ನ ಬಳಕೆಯ ಜೀವನ, ಅದರ ರಂಗು – ವಿಲಾಸ – ವೈಭವ ಎಲ್ಲವನ್ನೂ ತೊರೆದು ಬರಬೇಕಾಗಿತ್ತೆ ?

ಹಿಂದೊಂದು ದಿನ ಅದೆಲ್ಲವೂ ಪ್ರೇಮದಿದುರು ಕ್ಷುಲ್ಲಕವೆನಿಸಿದ್ದವು. ಅವುಗಳನ್ನು ಕಿತ್ತೊಗೆದು ಬಂದಿದ್ದಳು.

ಆದರೆ ಈ ಪ್ರೇಮಕ್ಕೆ, ಇಷ್ಟೇ ಪ್ರೇಮಕ್ಕೆ ಅಷ್ಟೆಲ್ಲವನ್ನೂ ಬಿಡಬೇಕಾಗಿತ್ತೆ? ಹಬ್ಬದೂಟ ಸಿಗುವುದೆಂದು, ದಿನದ ಸರಿಯಾದ ಊಟ ಬಿಟ್ಟು ಬಂದವನು, ಬರೀ ಸಪ್ಪೆ ಕೂಳು ಪಡೆದು ಮರುಗುವಂತಾಗುತ್ತಿತ್ತು.

ಇದು ಪ್ರೇಮವೇ–'ಕನಸಿನಲ್ಲಿ ಕಂಡುದೇನು, ಹೊರಗಿಲ್ಲಿ ಪಡೆದುದೇನು?'

ತನ್ನ ಜೀವನ, ಪ್ರೇಮ, ಹೋರಾಟ, ಬಲಿದಾನ ಎಲ್ಲವೂ ಅರ್ಥಶೂನ್ಯವಾದಂತೆ ತೋರುವುದು, ಬೇಸರದ ಮಂಜು ಕವಿದ ಪ್ರಭಾವತಿಯ ಕಣ್ಣುಗಳಿಗೆ. ಯಾವುದೋ ಬೆಂಕಿಯ ಜೋನಿನಲ್ಲಿ ತನ್ನನ್ನು ಸೆರೆ ಹಿಡಿದಿಟ್ಟಂತೆ ತೋರುವುದು....

ತನ್ನ ವಿಚಾರವನ್ನು ಚಿಂತಿಸಿದಂತೆಯೇ ಒಮ್ಮೊಮ್ಮೆ ಶಾಂತಾರಾಮನ ವಿಚಾರವನ್ನೂ ಚಿಂತಿಸುವಳು – ಅವನಿಗಾದರೂ ಏನು ಸುಖವಿದೆ?

ಅವನ ಬಾಳೂ ತನ್ನದರಷ್ಟೇ ಬೇಸರದ ಬೋಳು ಬಯಲು. ದುಡಿತ–ಅಲೆದಾಟ, ಊಟ, ನಿದ್ರೆ....

ಆಹಾರ, ನಿದ್ರೆ, ಮೈಥುನ,– ಎಲ್ಲ ಜೀವನದ ಅಗತ್ಯಗಳು. ಪಶುಜೀವನದ ಅಗತ್ಯಗಳು. ತಮ್ಮ ದುಡಿಮೆಯಿಂದ ಅಷ್ಟು ದೊರಕುತ್ತದೆ. ಆದರೆ ಅಷ್ಟೇನೇ ?

"ಬಾಳೊಂದು ಸುಂದರ ಕವನ" ಎಂದವಳು ಕೇಳಿದ್ದಳು. ಎಲ್ಲಿದೆ ಕವನ ಈ ಕುರುಡು ಬಾಳಿನಲ್ಲಿ ?

ಒಬ್ಬರ ತೋಳತೆಕ್ಕೆಯಲ್ಲೊಬ್ಬರು ಮೈ ಮರೆತಾಗ 'ಅದರಾಚೆ ಸ್ವರ್ಗವಿಲ್ಲ' ಎಂದುಕೊಂಡಿದ್ದಳು. ತಾವಿಬ್ಬರೇ ಏಕಾಂತವಾಗಿ ಕುಳಿತು ನಲ್ಮೆಯ ಮಾತಾಡುವಾಗ ಅದಕ್ಕಿಂತ ಹೆಚ್ಚಿನ ಸುಖವಿರಬಹುದು ಎನಿಸಿರಲಿಲ್ಲ.

ಈಗ ?– ಈಗ ಅದೂ ಸಪ್ಪೆ. ತೋಳತೆಕ್ಕೆಯ ಸ್ವರ್ಗವೂ ಇಲ್ಲ, ಏಕಾಂತ ಪ್ರಣಯಕೇಳೀ ವಿನೋದದ ಸುಖವೂ ಇಲ್ಲ. ಇಂದ್ರಧನುವೆಂದು ಬಾಳಿನ ಬೆಲೆಗೊಟ್ಟು ಕೊಂಡುದು ಸೋಪಿನ ಗುಳ್ಳೆಯಾಗಿ ಕಣ್ಣೆದಿರೇ ಸಿಡಿದು ಹೋಗುತ್ತಿದೆ–

ಬುದ್ಬುದ, ಬಾಳ ಬುದ್ಬುದ– ಹೂ ಸ್ಪರ್ಶಕ್ಕೂ ಸಿಡಿದೊಡೆವ ಸಪ್ತ ವರ್ಣದ ಸೋಪಿನ ಗುಳ್ಳೆ.

ಊಹೂ– ಈಗಾ ಗುಳ್ಳೆಗೆ ಸಪ್ತವರ್ಣವೂ ಇಲ್ಲ– ಒಂದೇ ಬಣ್ಣ. ಧೂಳು ಕಟ್ಟಿದ ಮುಗಿಲು, ಮಂಕಾದ ಹೊಲಸು ಹಳದಿಯ ಮಂಜಿನ ಮಳೆ.

ಅವಳ ಸುತ್ತ ಮುತ್ತ ಬೊಂಬಾಯಿನ ಜೀವನ ವೇಗವಾಗಿ ಓಡುತ್ತಿತ್ತು – ಬಸ್ಸು, ಟ್ರಾಂ, ಎಲೆಕ್ಟ್ರಿಕ್ ರೈಲು, ಕಾರು, ಸೈಕಲ್, ನೂರಾರು ವಾಹನಗಳಲ್ಲಿ ಕುಳಿತು ಹೋಟಲು, ಸಿನಿಮಾ, ಪಾರ್ಕ್, ಬೀಚ್, ಮಲಬಾರ್ ಹಿಲ್ಸ್, ಮ್ಯಾರೀನ್ ಡ್ರೈವ್‌ಗಳಲ್ಲಿ ನಗುನಗುತ್ತಾ, ವಿಲಾಸದಿಂದ ರಂಗು ರಂಗಾಗಿ ಓಡುತ್ತಿದೆ ಜೀವನ, ನೂರಾರು ಮಾನವ ರೂಪು ತಾಳಿ.

ಆದರೆ ಇವಳೊಬ್ಬಳೇ ಅದಕ್ಕೆ ಹೊರತು ; ಇವಳೊಬ್ಬಳ ಕುತ್ತಿಗೆಯನ್ನೇ ಹಿಸುಕುತ್ತಿದೆ ಸಾವು ಬೇಸರ, ಒಂಟಿತನದ ಗಂಟಲುಮಾರಿ.

ಇದೇನೇ ತಾನು ಬಯಸಿ ಬಂದ ಬಾಳು ?

ತನ್ನ ಬಾಳ ನಿರಸನವನ್ನೇ ಇನ್ನೊಬ್ಬರಲ್ಲಿ ತೋಡಿಕೊಂಡಿದ್ದರೂ, ಅವಳ

ಎದೆಯ ಭಾರ ಕಡಿಮೆಯಾಗಬಹುದಿತ್ತು. ಆದರೆ ಯಾರಲ್ಲಿ ತೋಡಿಕೊಳ್ಳಬೇಕು?

ಶಾಂತಾರಾಮನಿಗೆ ಇದಕ್ಕೆ ಬಿಡುವಿಲ್ಲ, ಬಿಡುವಿದ್ದಾಗಲೂ ಈ ಮಾತಾಡುವ ಮನಸಿಲ್ಲ.

"ಹೀಗೇಕೆ ದೂರವಾಗುತ್ತಿದ್ದೀರಿ?" ಹೃದಯದ ಹಿಂಸೆ ತಡೆಯಲಾರದೆ ಕೇಳುವಳು ಪ್ರಭಾವತಿ.

"ನಾನೆಲ್ಲಿ ದೂರ ಹೋಗಿದೇನೆ, ಪ್ರಭಾ, ನಿನ್ನ ಬಳಿಯೇ ಇದೇನಲ್ಲ."

"ನಿಮ್ಮ ಮೈ ಇದೆ, ನೀವಿಲ್ಲ. ನಿಮಗೆ ಮೂರು ಹೊತ್ತೂ ಬೇರೇನೋ ಚಿಂತೆ."

"ನಿಜ. ನಿನಗೂ ಚಿಂತೆಯಿಲ್ಲವೇ?"

"ಏನು ಚಿಂತೆ?"

"ಗಂಡಸಿಗೆ ದುಡಿಯುವ ಚಿಂತೆ, ಹೆಂಗಸಿಗೆ ಸಂಸಾರದ ಚಿಂತೆ. ನಿನ್ನ ಚಿಂತೆ ನಿನಗೆ, ನನ್ನದು ನನಗೆ. ನನ್ನ ಚಿಂತೆ ನಾನು ಮಾಡದಿದ್ದರೆ ನೀನು ಮಾಡಲು ಸಾಧ್ಯವೇ?"

ಗಂಡಸು – ಹೆಂಗಸು ; ಆಫೀಸು – ಅಡಿಗೆ ಮನೆ; ಪ್ರತ್ಯೇಕ ಗೋಲಗಳು.

ಗಂಡಸು – ಹೆಂಗಸು ; ಎರಡು ಪ್ರತ್ಯೇಕ ಗೋಲಗಳಲ್ಲಿ ಪ್ರತ್ಯೇಕವಾಗಿ ಸುತ್ತುವ ಪಶುಗಳು.

ಒಬ್ಬರೊಬ್ಬರಿಗೂ ಏನೂ ಸಂಬಂಧವಿಲ್ಲವೇ? ಅವರಿಬ್ಬರನ್ನು ಒಟ್ಟಾಗಿ ಬೆಸೆವ ಕನಸು, ಬಯಕೆಗಳಿಲ್ಲವೇ?

ತನ್ನ ಚಿಂತೆ ಅವರದಾಗಿ, ಅವರ ಚಿಂತೆ ತನ್ನದಾಗಿ, ಎರಡು ಬಾಳು ಒಂದಾಗಿ ಬೆರೆಯಬಾರದೇಕೆ?

"ಏಕೆ, ನಿಮ್ಮ ಚಿಂತೆಯನ್ನು ನನಗೆ ಹೇಳಿ. ನಿಮ್ಮ ಚಿಂತೆಯಲ್ಲಿ ನನಗೆ ಪಾಲಿಲ್ಲವೇ?"

"ಸರಿ. ಆ ಆಫೀಸು, ನೌಕರಿ ಚಾಕರಿಯ ಚಿಂತೆ ಕಟ್ಟಿಕೊಂಡು ನಿನಗೇನು ಹೇಳು. ದುಡಿದು ತಂದದ್ದು ಮಾಡಿ ಹಾಕಿ, ಹಾಯಾಗಿ ನಗುತ್ತಾ ಇರಬಾರದೇ? ಅಷ್ಟಕ್ಕಿಂತ ಹೆಚ್ಚಾಗಿ ಹೆಂಗಸಿಗೇನು ಬೇಕು?"

ಹೆಂಗಸು – ಹಾಯಾಗಿ, ನಗುತ್ತಾ....ಇರಬಾರದೇಕೆ?

ಹೆಂಗಸಿಗೇನು ಬೇಕು ?

ಇದೇ ಮನೋಭಾವ, ಇದೇ ರಕ್ಷಕತನದ ಭಾವನೆ, ಇದೇ ಮಾಲಕತ್ವದ ಧೋರಣೆಯನ್ನೇ ಅವಳು ಪ್ರತಿಭಟಿಸಿದ್ದು. ಈ ಗುಲಾಮಗಿರಿಯೇ ಹೆಣ್ಣಿಗೆ ಬೇಡವೆಂದದ್ದು....

ಈಗ – ಬೇಡವೆಂದದ್ದನ್ನೇ ಬಯಸಿ ಅಪ್ಪಿದಂತಾಗಿದೆ.

ಅಷ್ಟೇನೇ, ಅಷ್ಟೇನೇ ತಾನು ಪಡೆದದ್ದು....

ಅವಳ ಹೃದಯ ಬಿರುಗಾಳಿ ಬೀಸುವ ಕಡಲಲೆಗಳ ಪ್ರಚಂಡ ಘಟ್ಟಣೆಯಲ್ಲಿ ಹೊಯ್ದಾಡಿತು. ಅವಳ ಸುತ್ತ ಮುತ್ತ ಘೋರ್ಗರೆತ, ಕೋಪೋದ್ರಿತ ವೀಚಿ ಮಾಲೆಯ ಉನ್ಮತ್ತ ಹೂಂಕಾರ ನಾದ....

'ಸಹನೆ, ಅನಂತ ಸಹನೆ, ಪ್ರಭಾ, ಸಹನೆಯೊಂದೇ ತಾರಣ ಶಕ್ತಿ'

ಆ ಪ್ರಚಂಡ ಆಘಾತ, ಆಸ್ಫೋಟನಗಳ ಭಯಂಕರ ನಿನಾದದಲ್ಲಿ ಮೃದುವಾಗಿ, ಆದರೆ ಖಚಿತವಾಗಿ ಕೇಳಿಬರುತ್ತಿದೆ ಲೀಲಾವತಿಯ ಮಾತು.

'ಇಲ್ಲ, ಇಲ್ಲ, ನನಗೆ ನಂಬಿಕೆಯಿಲ್ಲ ಲೀಲಾ....ಇದು ನಾನು ಕನಸು ಕಂಡ ಬಾಳಲ್ಲ.'

ಬೇಸರದ ಸಿಡಿಲಾಘಾತಕ್ಕೆ ಬಾಳು ಬಿರುಕು ಬಿಟ್ಟಿತು. ಲೀಲಾವತಿಯ ಮಮತೆಯ ಕೈ ಅದನ್ನು ಮತ್ತೆ ಮತ್ತೆ ಬೆಸೆಯುತ್ತಿದೆ, ಎಳತಕ್ಕೆ ಸಿಲುಕಿ ಹಿಂಜುವ ದಾರವನ್ನು ಹೊಸೆಯುತ್ತಿದೆ.

ಪ್ರಭಾವತಿಯ ಈ ಚಿತ್ತ ತುಫಾನಿನ ತರಂಗದ ಉಯ್ಯಾಲೆಯಲ್ಲಿ ತೂಗಾಡುತ್ತಿರುವಾಗಲೇ, ಒಂದು ರಾತ್ರಿ ಅನಿರೀಕ್ಷಿತವಾಗಿ ಫ್ಲೋರಾಳ ಭೇಟಿಯಾಯಿತು.

## ೧೯

ರಾತ್ರಿ ಹನ್ನೊಂದು ಗಂಟೆಯಾಗಿರಬೇಕು. ನಿದ್ರೆ ಬರದೆ ನಗರದ ಹಲಬಗೆಯ ಇರುಳು ಸದ್ದುಗಳನ್ನಾಲಿಸುತ್ತಾ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದಳು ಪ್ರಭಾವತಿ. ಯಾರೋ ಮಹಡಿಯ ಮೆಟ್ಟಿಲನ್ನು ಹತ್ತಿ ಬರುವ ಸದ್ದು ಕೇಳಿತು. ಹಾಗೇ ಆ ಹೆಜ್ಜೆ ಸದ್ದಿನ ಮೇಲೆ ಮೆಟ್ಟಲುಗಳನ್ನೆಣಿಸಬಹುದೇನೋ ಎಂದು ಲೆಕ್ಕ ಹಾಕತೊಡಗಿದಳು.

ಆದರೆ ಆ ಸದ್ದಿನಲ್ಲಿ ಕ್ರಮಬದ್ಧತೆ ಇರಲಿಲ್ಲ. ಇದೇನು ವಿಚಿತ್ರ ರೀತಿಯ ನಡಿಗೆ, ಯಾರಿರಬಹುದು ಎಂದು ಯೋಚಿಸಿದಳು. ನಾಲ್ಕಾರು ನಿಮಿಷ ಕಳೆದವು –

ಇದ್ದಕ್ಕಿದ್ದಂತೆ ಅವರ ಬಾಗಿಲ ಇದುರೇ ಯಾರೋ ಬಿದ್ದಂತಾಗಿ, ನೋವಿನಿಂದ ನರಳಿದ ಧ್ವನಿ ಕೇಳಿಸಿತು – ಹೆಣ್ಣುಧ್ವನಿ !

ತಟಕ್ಕನೆ ಎದ್ದು ಕುಳಿತು, ಮಗ್ಗುಲಲ್ಲಿ ಮಲಗಿದ್ದ ಗಂಡನನ್ನು ಎಬ್ಬಿಸಲು ಅಲುಗಾಡಿಸಿದಳು. ಅವನು ಗಾಢನಿದ್ದೆಯಲ್ಲಿ ಮಲಗಿದ್ದ. ಬೇರೇನೂ ಮಾಡಲು ತೋಚದೆ, ತಾನೇ ಮೇಲೆದ್ದು ದೀಪ ಹಾಕಿ, ಬಾಗಿಲು ತೆರೆದು ನೋಡಿದಳು.

ಅವರ ಬಾಗಿಲಿನಿಂದ ಎರಡು ಗಜ ಆಚೆಗೆ, ಮೇಲಿನ ಅಂತಸ್ತಿಗೆ ಹತ್ತುವ ಮೆಟ್ಟಲಿದ್ದ ಕಡೆ, ಸುಮಾರು ೨೦–೨೨ ವಯಸ್ಸಿನ ಯುವತಿಯೊಬ್ಬಳು, ಬಿದ್ದ ಕಡೆಯಿಂದ ಎದ್ದು ನಿಲ್ಲಲು ಮಾತಾಡುತ್ತಾ ಪ್ರಯತ್ನಿಸುತ್ತಿದ್ದಳು. ಆವಳು ಬಿದ್ದಾಗ ಅವಳ ಹೆಗಲಿನಿಂದ ಜಾರಿಬಿದ್ದ ಕೈಚೀಲದ ಬಾಯಿ ತೆರೆದು, ಪೌಡರು, ರೂಚ್, ಲಿಪ್‌ಸ್ಟಿಕ್, ಕರವಸ್ತ್ರ, ಬೀಗದ ಕೈಗೊಂಚಲು, ಅಷ್ಟು ಚಿಲ್ಲರೆ ಹಣ ನೆಲದ ಮೇಲೆ ಚೆಲ್ಲಾಡಿತ್ತು.

ಪ್ರಭಾವತಿ ಬಾಗಿಲಲ್ಲೇ ನಿಂತು ನೋಡಿದಳು.

ಆಕೆ ನೆಲದ ಮೇಲೆ ಬಿದ್ದುದನ್ನೆಲ್ಲಾ ಆಯ್ದು ಹ್ಯಾಂಡ್‌ಬ್ಯಾಗಿಗೆ ಹಾಕಲು ಯತ್ನಿಸುತ್ತಿದ್ದಳು. ಆದರೆ ಕೈ ಅವು ಇರುವ ಕಡೆ ಹೋಗದೆ ಬೇರೆಲ್ಲೋ ಹೋಗುತ್ತಿತ್ತು. ಇಂಗ್ಲೀಷಿನಲ್ಲಿ ತನ್ನ ಕಣ್ಣು, ಕೈ, ಸಾಮಾನನ್ನು ಶಪಿಸಿ, ಮತ್ತೆ ಆದಕ್ಕೆ ಕೈ ಹಾಕುವ ಪ್ರಯತ್ನ ಮಾಡುತ್ತಿದ್ದಳು. ಅದನ್ನು ನೋಡುತ್ತಿದ್ದ ಹಾಗೇ ಪ್ರಭಾವತಿಗೆ ಈಕೆ ಕುಡಿದಿರಬೇಕೆಂದು ಗೊತ್ತಾಯಿತು. ಅವಳ ಕತ್ತರಿಸಿದ ತಲೆಗೂದಲು, ತೊಟ್ಟ ಫ್ರಾಕು ಆಕೆ ಕ್ರಿಶ್ಚಿಯನ್ನೋ ಅಥವಾ ಬೇರಾವುದೋ ಜಾತಿ ಇರಬೇಕೆಂದು ಹೇಳುತ್ತಿತ್ತು.

ಪ್ರಭಾವತಿಯು ತೆರೆದ ಮನೆಯ ಬಾಗಿಲಿನಿಂದ ಹೊರಬಂದ ದೀಪದ ಬೆಳಕು ಆಕೆಯ ಮುಖದ ಮೇಲೆ ಬಿತ್ತು. ಆಕೆ ತಲೆಯೆತ್ತಿ ಪ್ರಭಾವತಿಯ ಕಡೆ ನೋಡಿ –

"ವಿಲ್ ಯು ಪ್ಲೀಸ್ ಹೆಲ್ಪ್ ಮಿ? ಐ ಹ್ಯಾಡ್ ಎ ಡ್ರಾಪ್ ಟೂಮಚ್ ಪರ್‌ಹ್ಯಾಪ್ಸ್...." (ದಯವಿಟ್ಟು ಸಹಾಯ ಮಾಡುತ್ತೀರಾ? ಕುಡಿದುದು

ಕೊಂಚ ಹೆಚ್ಚಾಯಿತು ಎಂತ ಕಾಣಿಸುತ್ತೆ ?) ಎಂದಳು. ಆಕೆಯ ಮಾತೂ ಹೊರಳುತ್ತಿತ್ತು.

ಏನು ಮಾಡಬೇಕೆಂದು ಒಂದು ಗಳಿಗೆ ಪ್ರಭಾವತಿ ಯೋಚಿಸಿದಳು. ಪ್ರಭಾವತಿ ಕೂಡಲೇ ತನ್ನ ನೆರವಿಗೆ ಬಂದುದನ್ನು ಕಂಡು –

"ಸಾರಿ....ಐ ನೊ ಯುವರ್ ಟೈಪ್" (ಕ್ಷಮಿಸಿ – ನಿಮ್ಮಂಥವರನ್ನು ಬಲ್ಲೆ)

ಎಂದು ಪ್ರಭಾವತಿಯತ್ತ ಕಟುವಾಗಿ ನೋಡಿ, ಕೈಗೆ ಸಿಕ್ಕುದನ್ನು ಹ್ಯಾಂಡ್‌ಬ್ಯಾಗಿಗೆ ತುರುಕಿ, ಮಹಡಿಯ ಮೆಟ್ಟಲು ಹತ್ತಲು ಯತ್ನಿಸಿದಳು. ಎತ್ತರದ ಹಿಮ್ಮಡಿಯ ಷೂಗಳನ್ನು ಧರಿಸಿದ್ದುದರಿಂದ, ಕಾಲು ತೊಡರುತ್ತಿತ್ತು. ಹಾಗೇ ಬಿಟ್ಟರೆ ಆಕೆ ಮತ್ತೊಮ್ಮೆ ಬೀಳುವುದು ಖಂಡಿತ ಎಂದು ತೋರಿತು. ಬೇರೆ ದಾರಿ ಕಾಣದೆ, ಪ್ರಭಾವತಿ, ಅವಳ ಸಹಾಯಕ್ಕೆ ಹೋದಳು.

ಅವಳು ತೆಗೆದುಕೊಳ್ಳದೆ ಹಾಗೇ ಬಿಟ್ಟಿದ್ದ ಚಿಲ್ಲರೆ ಹಣ, ಕರ್ಚೀಫು ಗಳನ್ನು ತೆಗೆದು ಅವಳ ಕೈಚೀಲಕ್ಕೆ ಹಾಕಿ, ಅವಳ ತೋಳು ಹಿಡಿದು –

"ಪ್ಲೀಸ್ ಲೀನ್ ಆನ್ ಮಿ" (ದಯವಿಟ್ಟು ನನಗೆ ಒರಗಿಕೊಳ್ಳಿ) ಎಂದಳು.

ಅವಳ ಬಾಯಿಂದ ಮದ್ಯದ ವಾಸನೆ ಬಂದಂತೆ, ಅವಳ ಮೈಯಿಂದಲೋ, ಅಥವಾ ಹ್ಯಾಂಡ್‌ಬ್ಯಾಗ್‌ನಲ್ಲಿದ್ದ ಕರವಸ್ತ್ರದಿಂದಲೋ ಪರಿಮಳದ ನವಿರಾದ ಮಧುರ ವಾಸನೆ ಬರುತ್ತಿತ್ತು.

"ನಿಮ್ಮ ಫ್ಲಾಟ್ ಯಾವುದು?" ಎಂದು ಇಂಗ್ಲೀಷಿನಲ್ಲೇ ಕೇಳಿದಳು ಪ್ರಭಾವತಿ.

"ನಂ. ೧೯. ಮೇಲಿನ ಫ್ಲೋರ್"

ಅವಳನ್ನು ತನ್ನ ಎದೆಗೊತ್ತಿಕೊಂಡು, ಮೆಟ್ಟಲು ಮೇಲೆ ಜಾರದಂತೆ ಹತ್ತಿಸಿ, ಅವಳ 'ಫ್ಲಾಟ'ನ ಬಾಗಿಲನ್ನು ತಾನೇ ತೆಗೆದು, ದೀಪ ಹಾಕಿ, ಅವಳನ್ನು ಅಲ್ಲಿದ್ದ ಸೋಫಾದ ಮೇಲೆ ಕೂಡಿಸಿದಳು. ಆಕೆ ಸೋಫಾದ ಬದಿಯಲ್ಲಿದ್ದ ದುಂಡುಮೇಜಿನ ಮೇಲಿದ್ದ ಸಿಗರೇಟ್ ಟಿನ್‌ನಿಂದ ಸಿಗರೇಟ್ ತೆಗೆದು ಹೊತ್ತಿಸಿಕೊಂಡು, ಟಿನ್ನನ್ನು ಪ್ರಭಾವತಿಯ ಮುಂದೆ ಹಿಡಿದಳು. ಪ್ರಭಾವತಿ ಅದನ್ನು ಕಂಡು ನಗುತ್ತಾ –

"ಕ್ಷಮಿಸಿ, ನಾನು ಸಿಗರೇಟು ಸೇದುವುದಿಲ್ಲ," ಎಂದಳು.

" ನೊ ಅಫೆನ್ಸ್ ಮೆಂಟ್....ಎಕ್ಸ್ ಕ್ಯೂಸ್ ಮಿ....ಆದರೂ....ಆದರೂ ....ನೀವೇಕೆ ಸಿಗರೇಟ್ ಸೇದುವುದಿಲ್ಲ....ಇದರಿಂದ ಉದ್ರಿಕ್ತ ನರಗಳಿಗೆ ಶಾಂತಿ ಯುಂಟಾಗುತ್ತದೆ....ಹೋಗಲಿ ಬಿಡಿ.... ಥ್ಯಾಂಕ್ಸ್ ಎ ಲಾಟ್ ಫಾರ್ ದಿ ಹೆಲ್ಪ್...." ಎಂದು ಪ್ರಭಾವತಿಯ ಕೈ ಕುಲುಕಿ " ನಿಮ್ಮ ಹೆಸರೇನು ?" ಎಂದು ಕೇಳಿದಳು.

" ಪ್ರಭಾವತಿ ಶಾಂತಾರಾಂ."

" ನನ್ನ ಹೆಸರು ಫ್ಲೋರಾ ಫರ್ನಾಂಡೆಜ್. ಈ ಅಪರಾತ್ರಿಯಲ್ಲಿ ನಿಮಗೆ ತೊಂದರೆ ಕೊಟ್ಟೆ. ಏನೂ ತಿಳಿದುಕೊಳ್ಳಬೇಡಿ....ಆದರೂ ನೀವೇಕೆ ಸಿಗರೇಟ್ ಸೇದುವುದಿಲ್ಲ...."

ಜ್ಞಾನ – ಅಜ್ಞಾನದ ನಡುವೆ ಅವಳ ಮತಿ ತೂಗುತ್ತಿತ್ತು.

ಅವಳ ಕೋಣೆಯನ್ನೆಲ್ಲಾ ನೋಡಿದಳು ಪ್ರಭಾವತಿ. ಸೋಫಾ ಸೆಟ್, ಸೊಳ್ಳೆಪರದೆ ಹಾಕಿದ ಕರಿಮರದ ಮಂಚ, ಬಿಳಿಯ ಡ್ರೆಸಿಂಗ್ ಟೇಬಲ್, ಗೋಡೆಯ ಮೇಲಿನ ಚಿತ್ರಗಳು, ನೆಲಕ್ಕೆ ಹಾಕಿದ್ದ ರಗ್, ರೇಡಿಯೊ.. ಎಲ್ಲ ಸಾಮಾನನ್ನೂ ಜೋಡಿಸಿದ ಅಚ್ಚುಕಟ್ಟು. ವಿತರಣೆ ಅಭಿರುಚಿಯನ್ನು ಕಂಡು ಸಂತೋಷವಾಯಿತು.

ನೋಡುವುದಕ್ಕೂ, ಅಷ್ಟೇ ಸುಂದರವಾಗಿದ್ದಳು ಫ್ಲೋರಾ. ಅವಳ ಮಟ್ಟಸವಾದ ಎತ್ತರ, ಧೃಡವಾದ, ಪ್ರಮಾಣಬದ್ಧವಾದ ಕೈ ಕಾಲು, ಸುಂದರ ವಾದ ಮುಖ, ತೆಳುವಾದ ಕೆಂಪಿನಲ್ಲಿ ಬಂಗಾರದ ಹೊಳಪು ಬೆರೆತ ಬಣ್ಣದ, ಅಂದವಾಗಿ ಕತ್ತರಿಸಿದ ಕೂದಲು. ಒಂದು ಸಲ ನೋಡಿದರೆ ಸಾಲದೆ ಮತ್ತೊಮ್ಮೆ ನೋಡಬೇಕು ಎನ್ನಿಸುವಂಥ, ನೋಡಿದ ಕಣ್ಣು ಮತ್ತಷ್ಟು ಬಯಸಿ ಅತೃಪ್ತ ವಾಗುವಂಥ ರೂಪ.

ಇಂಥವಳು ಈ ಹಾಳು ಕುಡಿತದ ಚಾಳಿಗೇಕೆ ಬಿದ್ದಳೋ ಎಂದು ಪ್ರಭಾ ವತಿಗೆ ವ್ಯಸನವಾಯಿತು.

" ನಾನಿನ್ನು ಬರಲೇ ?" ಎಂದಳು ನಿಟ್ಟುಸಿರು ಬಿಟ್ಟು.

" ತೊಂದರೆಯನ್ನು ಕ್ಷಮಿಸಿ" ಎಂದು ಕೇಳಿ ಫ್ಲೋರಾ " ನಿಮ್ಮ ಫ್ಲಾಟು ನಂಬರು ಎಷ್ಟು ?"

" ನಂ. ೨೩. ಮೆಟ್ಟಲಿಳಿದ ಕೂಡಲೇ ಮೂಲೆಯದು."

"ದಯವಿಟ್ಟು ಪ್ಯಾಡ್ ಮೇಲೆ ನಂಬರು ಬರೆಯುತ್ತೀರಾ? ಬೆಳಗಿನ ಹೊತ್ತಿಗೆ ಅದು ನೆನಪಿನಲ್ಲುಳಿಯುವುದೋ ಉಳಿಯದೋ ಹೇಳಲಾರೆ."

ಅವಳ ಬೇಡಿಕೆಯಲ್ಲಿ ಕುಡಿತದ ಸೊಂಕು ಇದ್ದರೂ ಕ್ಷಮಾಯಾಚನೆಯ ಧ್ವನಿ ಇತ್ತು.

ಪ್ರಭಾವತಿ ದುಂಡು ಮೇಜಿನ ಮೇಲಿದ್ದ ಪ್ಯಾಡ್‌ನ ಮೇಲೆ ತನ್ನ ಫ್ಲಾಟ್‌ನ ನಂಬರು, ತನ್ನ ಹೆಸರು ಬರೆದು –

"ನಾನಿನ್ನು ಬರಲೆ ? ಮತ್ತೇನಾದರೂ ಬೇಕಾದರೆ ಹೇಳಿ. ಸಂಕೋಚ ಪಟ್ಟುಕೊಳ್ಳಬೇಡಿ" ಎಂದಳು.

"ಊಹೂ, ಇನ್ನೇನೂ ಬೇಡ. ಥ್ಯಾಂಕ್ಸ್."

"ಗುಡ್ ನೈಟ್."

"ಗುಡ್ ನೈಟ್ ಅಂಡ್ ವಿಷ್ ಯು ಹ್ಯಾಪಿ ಡ್ರೀಮ್ಸ್"

ಮೆಟ್ಟಲಿಳಿದು ಬಂದು, ತನ್ನ ಮನೆಯನ್ನು ಸೇರಿದಳು ಪ್ರಭಾವತಿ. ಅವಳು ಹೋಗುವಾಗ ಮಲಗಿದ್ದ ಶಾಂತಾರಾಂ, ದೀಪದ ಬೆಳಕಿಗೊ ಏನೋ ಎದ್ದಿದ್ದ. ಅವಳು ಬಂದುದನ್ನು ಕಂಡು –

"ಎಲ್ಲಿ ಹೋಗಿದ್ದೆ ಪ್ರಭಾ?" ಎಂದ.

ಪ್ರಭಾವತಿ ನಡೆದುದನ್ನು ವಿವರಿಸಿದಳು.

"ಎಲ್ಲೋ ಶುದ್ಧ ಕುಡುಕ ಮುಂಡೆ ಇರಬೇಕು. ಈ ಹೊತ್ತಿನಲ್ಲಿ ಎಲ್ಲಿ ಹೋಗಿದ್ದಳೋ ಕುಡಿದು. ಹಾಳಾಗಲಿ" ಎಂದು ಮುಸುಕು ಎಳೆದು ಕೊಂಡ.

ಅವನಾಡಿದುದನ್ನು ಕೇಳಿ ಪ್ರಭಾವತಿಗೆ ಖೇದವಾಯಿತು. ಖೇದ ಏಕೆಂದು ಅರಿವಾಗಲಿಲ್ಲ. ಆದರೂ ಅವಳನ್ನು ಅವನು ಅಷ್ಟು ತಾತ್ಸಾರವಾಗಿ ಆಡಿಕೊಂಡುದು ಸಹನವಾಗಲಿಲ್ಲ.

ನಿಟ್ಟುಸಿರು ಬಿಟ್ಟು, ದೀಪ ಆರಿಸಿ ತಾನೂ ಮಲಗಿಕೊಂಡಳು. ಅವಳ ಕನಸಿನಲ್ಲೂ ಫ್ಲೋರಾ ಅವಳನ್ನು ಕೆಣಕುತ್ತಿದ್ದಳು.

× × × ×

ಗಂಡ ಆಫೀಸಿಗೆ ಹೋದ ಮೇಲೆ ಪ್ರಭಾವತಿ, ಬೊಂಬಾಯಿನ ಕುಚ್ಚಲು ಸೆಕೆ ತಡೆಯಲಾರದೆ ಮತ್ತೊಮ್ಮೆ ತಣ್ಣೀರಿನಲ್ಲಿ ಮಿಂದು ಹೆರಳು ಹಾಕಿಕೊಳ್ಳು ತ್ತಿರುವಾಗ, ಬಾಗಿಲು ತಟ್ಟಿದ ಸದ್ದು ಕೇಳಿಸಿತು. ಯಾರೋ ಎಂದುಕೊಂಡು

ಕೂದಲನ್ನು ಹಾಗೇ ಗಂಟು ಹಾಕಿಕೊಂಡು ಹೋಗಿ, ಬಾಗಿಲು ತೆಗೆದಳು. ಬಂದಿದ್ದವರನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು.

ಬಾಗಿಲೆದುರು ಫ್ಲೋರಾ ದೊಡ್ಡದೊಂದು ನಾಲ್ಕಾಗು ಬಣ್ಣದ ಗುಲಾಬಿ ಹೂಗಳ ಗುಚ್ಛವನ್ನು ಹಿಡಿದು ನಿಂತಿದ್ದಳು.

" ಒಳಗೆ ಬನ್ನಿ" ಪ್ರಭಾವತಿ ಫ್ಲೋರಾಳನ್ನು ಕರೆದಳು.

" ಬರಬಹುದೇ ? ನಿಮ್ಮ ಕೆಲಸಕ್ಕೆ ತೊಂದರೆಯಾಗುವುದೋ ಏನೋ?"

" ಕೆಲಸವೇನೂ ಇಲ್ಲ, ಬನ್ನಿ."

ಆದರೂ ಬಾಗಿಲ ಬಳಿ ನಿಂತ ಫ್ಲೋರಾ ಒಳಗೆ ಬರಲು ಹಿಂಜರಿದರು.

" ಆಕೆ ಕೆಲಸವಿದೆಯೇನು ?"

" ಇಲ್ಲ. ನಿಮ್ಮ ಯಜಮಾನರಿರಬಹುದು...."

" ಅವರು ಆಫೀಸಿಗೆ ಹೋಗಿಯಾಯಿತು. ಒಳಗೆ ಬನ್ನಿ, ಮತ್ತಾರೂ ಇಲ್ಲ."

ಫ್ಲೋರಾ ಒಳಗೆ ಬಂದಳು. ಆದರೆ ಅವಳು ಕೂಡಲಿಕ್ಕೆ ಎಲ್ಲೂ ಕುರ್ಚಿ ಇರಲಿಲ್ಲ. ಹಾಗೇ ನಿಂತುಕೊಂಡಳು. ಪ್ರಭಾವತಿಗೆ ಫ್ಲೋರ್‌ನ ಕೋಣೆಯಲ್ಲಿದ್ದ ಸೋಫಾ ಸೆಟ್ ನೆನಪಿಗೆ ಬಂದು ತನ್ನ ಬಡತನದ ಅರಿವಿನ ಅಲಗು ಅವಳೆದೆಯನ್ನು ಇರಿಯಿತು. ಹಾಸಿಗೆಯ ಸುರುಳಿಯನ್ನೇ ತೋರಿಸಿ " ಕುಳಿತುಕೊಳ್ಳಿ " ಎಂದಳು.

ಹಾಗನ್ನುವಾಗ ಅವಳಿಗೆ ಫ್ಲೋರಾನ ಮುಖ ನೋಡುವುದಾಗಲಿಲ್ಲ. ಫ್ಲೋರಾಗೂ ಅವಳ ಮನಸ್ಸಿನ ಆತಂಕ ಅರಿವಾಯಿತು.

" ಬಹಳ ಸುಂದರವಾದ ಸರಳವಾದ ಶುಭ್ರ ಮನೆ ನಿಮ್ಮದು," ಎಂದು ಮೆಚ್ಚುಗೆ ಸೂಚಿಸಿದಳು. ಆ ಹೊಗಳಿಕೆ ಪ್ರಭಾವತಿಯನ್ನು ಮತ್ತಷ್ಟು ನಾಚಿಸಿತು.

" ಹೂದಾನಿ ಇದ್ದರೆ ಕೊಡಿ," ಎಂದು ಕೇಳಿದಳು ಫ್ಲೋರಾ.

ಹೂದಾನಿ! ಈ ಮನೆಯಲ್ಲಿ ಅದಕ್ಕೆಲ್ಲಿ ಸ್ಥಾನ! ಪ್ರಭಾವತಿ ಒಳಗೆ ಹೋಗಿ ನೀರಿಡುವ ಗಾಜಿನ ಕೂಜಾ ತಂದುಕೊಟ್ಟಳು. ಅದನ್ನು ಫ್ಲೋರಾನ ಕೈಗೆ ಕೊಡುವಾಗ ಕರುಳು ಹಿಸುಕಿದಂತಾಗಿ, ಕಣ್ಣ ಕುಡಿಯಲ್ಲಿ ಹನಿ ಮೂಡಿತು. ಫ್ಲೋರಾ ಅದನ್ನು ನೋಡಿಯೂ ನೋಡದಂತಿದ್ದು ತಾನು ತಂದಿದ್ದ ಗುಲಾಬಿ

ಹೂವುಗಳನ್ನೆಲ್ಲಾ ಕೂಜಾದಲ್ಲಿಟ್ಟು, ಉದ್ದವಾದ ತೊಟ್ಟಿದ್ದ ಹೂವನ್ನು ತೆಗೆದು, ತಾನೇ ಪ್ರಭಾವತಿಯ ಸಡಿಲವಾದ ಮುಡಿಯಲ್ಲಿಟ್ಟು, ನೋಡಿ ಹೇಳಿದಳು :

"ನೀವು ಒಳ್ಳೆಯವರು ಮಾತ್ರ ಎಂದು ತಿಳಿದುಕೊಂಡಿದ್ದೆ, ರೂಪವತಿಯೂ ಅಹುದು."

ಆ ಸ್ತುತಿ ಪ್ರಭಾವತಿಯನ್ನು ಮೆಚ್ಚಿಸಿ ಅವಳ ಹೃದಯದ ಬಿಗಿತವನ್ನು ಕೊಂಚ ಕಡಿಮೆ ಮಾಡಿತು. ಪ್ರಸನ್ನಚಿತ್ತದಿಂದ ಹೇಳಿದಳು :

"ನಿಮ್ಮ ಮುಂದೆ ನನ್ನ ರೂಪ, ಸೂರ್ಯನ ಮುಂದೆ ಸೊಡರು."

"ಮಾತೂ ಅಷ್ಟೇ ಸುಂದರ!....ನಿಮಗೆ ಅಭ್ಯಂತರವಿಲ್ಲವಾದರೆ ನನ್ನ ಕೋಣೆಗೆ ಬಂದು ಒಂದು ಕಪ್ ಟೀ ತೆಗೆದುಕೊಂಡು ಹೋಗಬೇಕು. ಅದನ್ನು ಹೇಳಲಿಕ್ಕೆಂದೇ ಬಂದೆ."

"ಅಭ್ಯಂತರವೇನೂ ಇಲ್ಲ, ಆದರೆ ಇದೆಲ್ಲಾ ಏಕೆ?"

"ಇದೆಲ್ಲಾ ಎಂದರೆ ಯಾವುದು?"

"ಹೂವು...."

"ಒಂದು ಸುಂದರ ಕೃತ್ಯಕ್ಕೆ ಸುಂದರ ಪ್ರತಿಫಲ ದೊರೆಯಬೇಡವೇ? 'ಸೇ ಇಟ್ ವಿತ್ ಫ್ಲವರ್ಸ್' (ಹೂ ಕೊಟ್ಟು ಹೇಳು) ಎನ್ನುವುದು ಬರೀ ಪ್ರಣಯಕ್ಕೇ ಅಲ್ಲ, ಕೃತಜ್ಞತೆಗೂ ಅನ್ವಯಿಸುತ್ತದೆ. ನಿನ್ನೆ ರಾತ್ರಿ ನೀವು ತೋರಿದ ವಿಶ್ವಾಸ ದೊಡ್ಡದು."

"ಅದೇನು ಮಹಾ...."

"ದೊಡ್ಡ ಕೆಲಸ ಮಾಡಿಯೇ ಅಭ್ಯಾಸವಾದವರಿಗೆ ತಾವು ಮಾಡಿದುದು ದೊಡ್ಡ ಕೆಲಸ ಎಂದು ಅರಿವಾಗುವುದಿಲ್ಲ."

"ಅಂತೂ ನನ್ನನ್ನು ದೊಡ್ಡವಳನ್ನಾಗಿ ಮಾಡಿಬಿಟ್ಟಿರಿ."

"ನಾನು ಮಾಡುವುದೇನು – ಅದು ಇರುವುದೇ ಹಾಗೆ. ನಿನ್ನೆ ನೀವು ಕಂಡ ಸ್ಥಿತಿಯಲ್ಲಿ ಇತರರು ನನ್ನನ್ನು ಕಂಡಿದ್ದರೆ ಏನು ಮಾಡುತ್ತಿದ್ದರು ಬಲ್ಲಿರಾ? ಅಪಹಾಸ್ಯ ಮಾಡುತ್ತಿದ್ದರು. ಇಲ್ಲವೇ 'ಕುಡುಕ ಲನಡಿ' ಎಂದು ಸಿಟ್ಟಾಗಿ ದೂರ ಸರಿಯುತ್ತಿದ್ದರು. ಗಂಡಸಾಗಿದ್ದರೆ, ಇದೇ ಸುಸಮಯವೆಂದು ಹೆಗಲ ಮೇಲೆ ಕೈ ಹಾಕಲು ಯತ್ನಿಸುತ್ತಿದ್ದರು. ಈ ಜಗತ್ತನ್ನು ನಾನು ಬಲ್ಲೆ. ಅದರ ಬಗ್ಗೆ ನನಗಾವುದೂ ಭ್ರಮೆಯಿಲ್ಲ, ಎಂತಲೇ ನಿಮ್ಮ ಆತ್ಮೀಯತೆಯನ್ನು ಕಂಡು ಆಶ್ಚರ್ಯವಾಯಿತು."

ಆ ಮಾತಾಡುವಾಗ ಫ್ಲೋರಾಳ ಕಣ್ಣುಗಳು ಕುಂಚಿತವಾಗಿ, ತುಟಿಯ ಬಳಿ ಕಾಠಿಣ್ಯದ ಗೆರೆಗಳು ಕಂಡವು....ಈಕೆಯೂ ಜಗತ್ತಿನ ಕಹಿಯನ್ನು ಸಾಕಷ್ಟು ಉಂಡಿದ್ದಾಳೆ ಎನಿಸಿತು ಪ್ರಭಾವತಿಗೆ.

"ನಾನು ಮಾಡಿದುದು ಹೆಚ್ಚೇನೂ ಅಲ್ಲ, ಬರೀ ಮನುಷ್ಯತ್ವ."

"ಈ ಜಗತ್ತಿನಲ್ಲಿ ಅಪರೂಪವಾಗಿರುವುದೇ ಅದು. ಅದು ಉಳಿದದ್ದು ಎಷ್ಟು ಬೇಕಾದರೂ ಸಿಗುತ್ತದೆ – ಹೋಗಲಿ, ಟೀಗೆ ಬರುತ್ತೀರಾ?"

"ಇಲ್ಲೇ ಇಬ್ಬರೂ ಅಷ್ಟು ಕುಡಿದರಾಗದೇ?"

"ಅದು ಇನ್ನೊಂದು ಬಾರಿ. ಈಗಿನದು ನನ್ನ ಸರದಿ."

"ಸರಿ, ಹಾಗಾದರೆ ,ಹೋಗೋಣ," ಎಂದು, ಪ್ರಭಾವತಿ, ಮನೆಯ ಬಾಗಿಲು ಹಾಕಿಕೊಂಡು, ಫ್ಲೋರಾ ಜೊತೆಗೆ ಆವಳ ಫ್ಲಾಟ್‌ಗೆ ಹೋದಳು.

ತನ್ನ ಕೋಣೆಯೊಳಗೆ ಕಾಲಿಡುತ್ತಿದ್ದ ಹಾಗೇ ಫ್ಲೋರಾ ಸಿಗರೇಟ್ ಹೊತ್ತಿಸಿಕೊಂಡಳು. ಹಿಂದಿನ ರಾತ್ರಿ ಅವಳು ಪ್ರಭಾವತಿಗೆ ಸಿಗರೇಟು ಕುಡಿಸ ಲೆತ್ನಿಸಿದುದು ಇಬ್ಬರಿಗೂ ನೆನಪಾಗಿ ನಕ್ಕರು.

"ನಿನ್ನೆ ರಾತ್ರಿ ನಿಮ್ಮೊಂದಿಗೆ ಬಹಳ ಹೊಲಸಾಗಿ ನಡೆದುಕೊಂಡಿರ ಬೇಕು, ಅಲ್ಲವೇ?" – ಎಂದು ಕೇಳಿದಳು ಫ್ಲೋರಾ.

"ಊಹು. ಹಾಗೇನೂ ಇಲ್ಲ."

ಫ್ಲೋರಾ ಪ್ರಭಾವತಿಯ ಇದಿರು ನಾಲ್ಕಾರು ಇಂಗ್ಲಿಷ್ ಸಚಿತ್ರ ಪತ್ರಿಕೆ ಗಳನ್ನು ಇಟ್ಟು --

"ಇವನ್ನು ನೋಡುತ್ತಾ ಕುಳಿತುಕೊಂಡಿರಿ. ಬೇಕಾದರೆ ರೇಡಿಯೋ ಹಾಕಿ, ಎರಡು ನಿಮಿಷದಲ್ಲಿ ಟೀ ತೆಗೆದುಕೊಂಡು ಬಂದುಬಿಡುತ್ತೇನೆ," ಎಂದಳು.

"ನಿಮ್ಮ ಅಡಿಗೆ ಮನೆ ನಾನೂ ನೋಡಬಹುದೇ?"

"ಅದು ಹೆಂಗಸಿನ ಲಕ್ಷಣ." ಎಂದು ನಕ್ಕು ಫ್ಲೋರಾ, "ಅಲ್ಲಿ ಅಡಿಗೆ ಮನೆ ಎಂತ ಹೇಳಿಕೊಳ್ಳುವುದೇನೂ ಇಲ್ಲ. ದಿನವೂ ಆಫೀಸಿನ ಬಳಿಯ ಹೋಟಲಿನಲ್ಲೇ ನನ್ನ ಊಟ ಮುಗಿಯುತ್ತದೆ. ಬೇಕಾದಾಗ ಟೀ, ಬಿಸಿ ನೀರು ಕಾಯಿಸಿಕೊಳ್ಳಲು ಎಲೆಕ್ಟ್ರಿಕ್ ಸ್ಟವ್ ಇಟ್ಟುಕೊಂಡಿದೇನೆ. ಬೇಕಾದರೆ ಬಂದು ನೋಡಿ," ಎಂದಳು ಫ್ಲೋರಾ.

ತಮ್ಮ ಮನೆಯ ಅಡಿಗೆಯ ಮನೆಯ ಹಾಗೇ ಇತ್ತು ಅದು. ಆದರೆ ಹೆಚ್ಚಿನ ಪಾತ್ರೆ ಪಡಗಗಳಿರಲಿಲ್ಲ. ಅಡಿಗೆಗಲ್ಲದೆ ಬರೀ ಟೀ ಮಾಡಲು ಮಾತ್ರ ಉಪಯೋಗಿಸುತ್ತಿದ್ದರಿಂದ, ಹೆಚ್ಚಾಗಿ ಬಳಸಲ್ಪಡದ ಅದೂ ನಿರ್ಲಕ್ಷ್ಯಕ್ಕೊಳಗಾಗದೆ, ಚೊಕ್ಕಟವಾಗಿಡಲ್ಪಟ್ಟಿತ್ತು.

"ನೀವು ಬೊಂಬಾಯಿಗೆ ಬಂದು ಎಷ್ಟು ದಿನವಾಯಿತು?" ಎಲೆಕ್ಟ್ರಿಕ್ ಸ್ಟವ್‌ನ ಮೇಲೆ ಟೀ ಕೆಟಲನ್ನಿಟ್ಟು ಕೇಳಿದಳು ಫ್ಲೋರಾ.

"ಹತ್ತು ಹನ್ನೊಂದು ತಿಂಗಳಿಗೆ ಬಂತು."

"ಅಷ್ಟು ದಿನದಿಂದಲೂ ಈ ಮನೆಯಲ್ಲೇ ಇದೀರಾ?"

"ಮೊದಲು ಒಂದು ತಿಂಗಳ ಕಾಲ, ಎಲ್ಲೋ ಸ್ನೇಹಿತರ ಮನೆಯಲ್ಲಿದ್ದೆವು. ಅಲ್ಲಿಂದೀಚೆಗೆ ಇಲ್ಲೇ."

"ಹತ್ತು ತಿಂಗಳಾಯಿತು; ಆದರೂ ನನಗೆ ನಿಮ್ಮ ಪತ್ತೆಯೇ ಹತ್ತಲಿಲ್ಲ. ನೀವು ಬಹಳ ಕ್ವೈಯಟ್ ಕಪಲ್ ಅಂತ ಕಾಣುತ್ತದೆ. ಇಷ್ಟು ದಿನವಾದರೂ ನಿಮ್ಮ ಪರಿಚಯವಾಗದಿದ್ದುದು ನನ್ನ ದುರದೃಷ್ಟವೇ ಸರಿ. ನಿನ್ನೆ ರಾತ್ರಿ ನಾನು ಅಷ್ಟು ಕುಡಿಯಬಾರದಾಗಿತ್ತು ಎಂತ ಹಳಹಳಿಸುತ್ತಿದ್ದೆ. ಈಗ ಅದೂ ಒಳ್ಳೆಯದೇ ಆಯಿತು ಎನಿಸುತ್ತದೆ."

"ಏಕೆ?"

"ನಿಮ್ಮ ಸ್ನೇಹವನ್ನು ತಂದುಕೊಟ್ಟಿತು. ಅದು ಅದೃಷ್ಟವಲ್ಲವೇ?"

"ಅದೃಷ್ಟವೋ ದುರದೃಷ್ಟವೊ ಈಗ ಹೇಗೆ ಹೇಳುವುದು. ಕಡುಬಿನ ರುಚಿ ತಿಂದಾಗಲೇ ಅಲ್ಲವೇ ಗೊತ್ತಾಗುವುದು."

"ಊಹೂ. ಕೆಲವು ವೇಳೆ ಬರೀ ವಾಸನೆಯಿಂದಲೇ ಗೊತ್ತಾಗಿಬಿಡುತ್ತದೆ. ಈ ಕಡುಬಂತೂ ಸ್ವರ್ಗಸುಖದ ವಾಸನೆಯನ್ನೇ ಬೀರುತ್ತಿದೆ," ಎಂದಳು ಫ್ಲೋರಾ.

ಅವಳ ಸರಸವಾದ ಮಾತಿನ ರೀತಿ, ಸ್ನೇಹಮಯವಾದ ನಡತೆ ಪ್ರಭಾವತಿಯ ಹೃದಯವನ್ನು ಸೂರೆಗೊಂಡು, ಅವಳು ಅಪರಿಚಿತಳಾಗದೆ ಎಷ್ಟೋ ದಿನದ ಆತ್ಮೀಯ ಪರಿಚಯವಿದ್ದ ಗೆಳತಿ ಎನಿಸಿತು, ಪ್ರಭಾವತಿಗೆ.

ಇವರ ಮಾತು ನಡೆದಿರುವಾಗಲೇ ಟೀ ನೀರು ಮರಳಿತು. ಸ್ಟೇನರಿಗೆ ಸೊಪ್ಪು ನೀರು ಹಾಕಿ, ಕಷಾಯ ಇಳಿದ ಕೂಡಲೇ ಅದನ್ನು ಬಟ್ಟಲುಗಳಿಗೆ

ಹಾಕಿ, ಹಾಲಿನ ಕೆಟಲು, ಸಕ್ಕರೆಯ ಬಟ್ಟಲನ್ನು ಪ್ರಭಾವತಿಯು ಮುಂದಿಟ್ಟಳು ಫ್ಲೋರಾ. ಇಬ್ಬರೂ ಟೀ ಸರಿಮಾಡಿಕೊಂಡರು.

"ಅಲ್ಲೇ ಹೋಗಿ ಕುಳಿತುಕೊಳ್ಳೋಣ." ಎಂದಳು ಫ್ಲೋರಾ.

ಇಬ್ಬರೂ ಮುಂದಿನ ಕೋಣೆಗೆ ಬಂದು ಸೋಫಾದ ಮೇಲೆ ಕುಳಿತರು.

"ಒಂದು ಗಳಿಗೆ ನೀವು ನನ್ನ ಕೈಲಿ ಟೀ ಕುಡಿಯಲಿಕ್ಕಿಲ್ಲ ಎಂದು ಅಂಜಿಕೆಯಾಗಿತ್ತು," – ಫ್ಲೋರಾ ಹೇಳಿದಳು.

"ಏಕೆ?"

"ನೀವು ಹಿಂದೂ, ನಾನು ಕ್ರಿಶ್ಚಿಯನ್."

"ಅದೆಲ್ಲಾ ೧೬ನೇ ಶತಮಾನದ ಮಾತಾಯಿತು. ಇದು ಇಪ್ಪತ್ತನೇ ಶತಮಾನ. ಈಗಿರುವುದೆಲ್ಲಾ ಒಂದೇ ಜಾತಿ – ಮನುಷ್ಯ ಜಾತಿ."

"ನಿಮ್ಮದು ಬಹಳ ವಿಶಾಲ ದೃಷ್ಟಿ. ನಿಮ್ಮಂಥವರು ಬಹಳ ಜನವಿಲ್ಲ. ನನ್ನ ಫ್ಲಾಟ್ ಬದಿಯ ಫ್ಲಾಟ್‌ನಲ್ಲಿ ಒಂದು ಗುಜರಾತಿ ಸಂಸಾರವಿದೆ. ನಾನು ಅತ್ತ ಕಡೆ ಹೋದರೆ, ಆ ಜನ ನನ್ನ ನೆರಳು ಬಿದ್ದರೆ ತಮ್ಮ ಮನೆಯೆಲ್ಲಿ ಅಪವಿತ್ರವಾಗುವುದೋ ಎಂದು ಬಾಗಿಲು ಹಾಕಿಕೊಳ್ಳುತ್ತಾರೆ."

"ಅಂಥ ಜನ ಎಲ್ಲ ಕಾಲಕ್ಕೂ ಇದ್ದವರೇ....ಅಂದ ಹಾಗೇ, ನನ್ನ ಹರಟೆಯಲ್ಲಿ ನಿಮ್ಮ ಹೊತ್ತು ಕಳೆಯುತ್ತಿದ್ದೇನೆ. ನಿಮ್ಮ ಆಫೀಸಿಗೆ ಹೊತ್ತಾಗಲಿಲ್ಲವೇ?"

"ತಡವೇನೂ ಇಲ್ಲ. ಇಡೀ ದಿನವೆಲ್ಲಾ ನನ್ನದೇ."

"ಇವತ್ತೇನು ರಜವೇ?"

"ಹೂ. ನಾನು ಕೊಟ್ಟಿದೇನೆ."

"ಏಕೆ?"

"ನಿನ್ನೆಯದರ ಪರಿಣಾಮ. ಬೆಳಗ್ಗೆ ತಲೆ ಎತ್ತಲಾಗದಷ್ಟು ತಲೆ ನೋವು ಇತ್ತು. ಅದಕ್ಕೇ ಆಫೀಸಿಗೆ ಫೋನ್ ಮಾಡಿದೆ."

"ನಿಮಗೆ ಯಾವ ಆಫೀಸಿನಲ್ಲಿ ಕೆಲಸ? ಕೇಳಬಹುದೇ?"

"ಸಂಕೋಚವೇನು ಬಂತು ಅದರಲ್ಲಿ. ಇಲ್ಲಿನ ಗ್ರೀಕ್ ಎಂಬೆಸಿಯಲ್ಲಿ ನಾನು ರಿಸೆಪ್ಷನಿಸ್ಟ್."

"ತುಂಬಾ ಕಷ್ಟದ ಕೆಲಸವೇ?"

"ಹೂ. ಬೇಕಾದವರಿಗೆ, ಬೇಡವಾದವರಿಗೆಲ್ಲಾ ನನ್ನ ಸುಂದರವಾದ ಮುಖ ತೋರುತ್ತಾ, ಇಲ್ಲದ ನಗು ಬೀರುತ್ತಾ, ಅವರು ಕೇಳುವ ಹುಚ್ಚು ಪ್ರಶ್ನೆಗಳಿಗೆ ಸಹನೆಯಿಂದ ಉತ್ತರ ಕೊಡುವುದು ಕಷ್ಟವಾದ ಕೆಲಸವೇ ಅಲ್ಲವೇ ?....ನಿಮಗೆ ಇನ್ನಷ್ಟು ಟೀ ತರಲೇನು ? ನನಗಂತೂ ಇವತ್ತು ಎಷ್ಟು ಟೀ ಕುಡಿದರೂ ಬಾಯಾರಿಕೆ ಹೋಗುವುದಿಲ್ಲ. ತಲೆನೋವೂ ನಿಲ್ಲುವುದಿಲ್ಲ."

"ನನಗೆ ಟೀ ಬೇಡ. ಈಗಲೂ ತಲೆನೋವಿದೆಯೇ ?"

"ಹೂ."

"ಸ್ಯಾರಿಡಾನ್ ತೆಗೆದುಕೊಳ್ಳಬೇಕಾಗಿತ್ತು."

"ಇದು ಸ್ಯಾರಿಡಾನಿಗೆ ಹೋಗುವ ತಲೆನೋವಲ್ಲ."

"ಮತ್ತೇನು ಮಾಡುತ್ತೀರಿ ?"

"ಇವತ್ತು ಸಂಜೆ ಮತ್ತಷ್ಟು ಪಾನೀಯ ಬಿದ್ದರೆ, ತಾನೇ ಸರಿಹೋಗುತ್ತದೆ. ವಿಷಕ್ಕೆ ವಿಷ ಮದ್ದಿದ್ದ ಹಾಗೆ ಇದು," ಎಂದಳು ಫ್ಲೋರಾ ನಗುತ್ತಾ.

"ಆದರೆ ಮತ್ತೆ ಮರುದಿನವೂ ತಲೆನೋವು ಅನುಭವಿಸಬೇಕೆ ? ಹಾಗಾದರೆ ಕುಡಿಯಬೇಕೇಕೆ ?"

"ಮಿತಿಯಾಗಿ ಕುಡಿಯದಿದ್ದರೆ ಅನುಭವಿಸಬೇಕಾದದ್ದೆ. ಹತೋಟಿಯಲ್ಲಿದ್ದರೆ ಏನೂ ಆಗುವುದಿಲ್ಲ. ಎಲ್ಲವೂ ಅಷ್ಟೇ. ಜೀವನವೂ ಮದ್ಯಪಾನದಂತೆಯೇ. ಹ್ಯಾಂಗ್ ಓವರ್ (ಉತ್ತರ ಪರಿಣಾಮ) ತಪ್ಪಿದ್ದಲ್ಲ. ಕುಡಿತ ಕೆಟ್ಟದ್ದು ಎಂದು ನಿಮ್ಮ ಅಭಿಪ್ರಾಯವೇನೋ. ಆದರೆ ಅದು ಈ ಬದುಕಿನಷ್ಟು ಕೆಟ್ಟದಲ್ಲ. ಒಂದು ದಿನ ಅತಿಯಾಗಿ ಕುಡಿದರೆ, ಒಂದೇ ದಿನ ಅದರ ಹ್ಯಾಂಗ್ ಓವರ್ ಅನುಭವಿಸಬೇಕು. ಆದರೆ ಜೀವನದಲ್ಲಿ ಬಹುವೇಳೆ ಒಂದು ದಿನದ ಸುಖಕ್ಕೇ, ಇಡೀ ಜೀವಮಾನದ ದುರ್ಭರ ಹ್ಯಾಂಗ್ ಓವರ್ ಅನುಭವಿಸಬೇಕಾಗುತ್ತದೆ.... ಬಂದೆ, ಟೀ ತೆಗೆದುಕೊಂಡು ಬರುತ್ತೇನೆ," ಎಂದು ಹೇಳಿ ಫ್ಲೋರಾ ಟೀ ತರಲು ಎದ್ದು ಹೋದಳು.

'ಒಂದು ದಿನದ ಸುಖ–ಬಳಿಕ ಇಡೀ ಜೀವಮಾನದ ಹ್ಯಾಂಗ್ ಓವರ್.

ಏಕೋ ಆ ಮಾತು ಕೇಳಿ ಪ್ರಭಾವತಿಯ ಮೈ ನಡುಗಿತು. ನಿಷ್ಠುರ ಸತ್ಯದ ಹರಿತವಿತ್ತು ಆ ಮಾತಿನಲ್ಲಿ.

ಟೀ ತೆಗೆದುಕೊಂಡು ಬಂದ ಫ್ಲೋರಾ ಮತ್ತೆ ತನ್ನ ಮಾತು ಮುಂದುವರಿಸಿದಳು –

"ಆದ್ದರಿಂದಲೇ ನಾನು ಹೇಳುವುದು – ಹ್ಯಾಂಗ್ ಓವರ್ ಹೇಗೂ ತಪ್ಪಿದ್ದಲ್ಲ. ಕುಡಿಯುವಾಗ ಚೆನ್ನಾಗಿ ಕುಡಿಯುವುದು, ಬದುಕುವಾಗ ಜೀವನದ ಸುಖವೇನಿದೆಯೋ ಎಲ್ಲವನ್ನೂ ಪಟ್ಟುಬಿಡುವುದು. ಉಮರ್ ಖಯ್ಯಾಂ ಹೇಳಿದಾನೆ – 'ಸತ್ತ ನಿನ್ನೆ, ಹುಟ್ಟದಿರುವ ನಾಳೆ; ಇಂದು ಸುಖವಾಗಿರಲು ಚಿಂತೆಯೇಕೆ?' ಉಮರ್ ಅದನ್ನು ಅನುಭಾವದ ದೃಷ್ಟಿಯಿಂದ ಹೇಳಿದ. ನಾನು ಅದನ್ನು ನನ್ನ ಜೀವನಕ್ಕೇ ಅನ್ವಯಿಸಿಕೊಂಡಿದ್ದೇನೆ. ಜೀವನದ ಯಾವ ಸುಖವನ್ನೂ ಬಾಕಿ ಉಳಿಸಿ ಸಾಯಲು ನನಗಿಷ್ಟವಿಲ್ಲ."

ಫ್ಲೋರಾ ಆ ಮಾತಾಡುವಾಗ ಅವಳ ವಿಶಾಲವಾದ ನೀಲಿಯ ಕಣ್ಣಾಳದಲ್ಲಿ ವಿಚಿತ್ರ ಉರಿ ಉರಿಯುತ್ತಿತ್ತು. ಉಗ್ರ ಮತಾಂಧ ತನ್ನ ಧರ್ಮದ ಬಗ್ಗೆ ಮಾತಾಡುವಾಗಿನ ಕಠೋರ ಶ್ರದ್ಧೆಯು ಹರಿತವಿತ್ತು ಅವಳ ಮಾತಿನಲ್ಲಿ. ಆ ಮಾತು ಕೇಳುತ್ತಾ ಪ್ರಭಾವತಿಗೇಕೋ ಉಸಿರು ಕಟ್ಟಿದಂತಾಯಿತು. ಆ ಮಾತು ಮುಂದುವರಿಸಲು ಧೈರ್ಯವಾಗಲಿಲ್ಲ. ಆ ಮಾತು ತಿರುಗಿಸಲು ಹೇಳಿದಳು –

"ನೀವು ಸಾಹಿತ್ಯವನ್ನೂ ಹೆಚ್ಚಾಗಿ ಓದಿಕೊಂಡಂತೆ ಕಾಣುತ್ತದೆ."

"ಹೂ., ಅಷ್ಟಿಷ್ಟು. ಜೀವನ ಕೊಡುವ ಸುಖಗಳಲ್ಲಿ ಅದೂ ಒಂದಲ್ಲವೇ?"

"ಹಾಗಾದರೆ...."

"ಏನು?"

"ಇಲ್ಲಿ ಒಂದೂ ಪುಸ್ತಕ ಕಾಣುವುದಿಲ್ಲವಲ್ಲ."

"ಎಲ್ಲಾ 'ವಾರ್ಡ್‌ರೋಬ್'ನಲ್ಲಿ ತುರುಕಿದೇನೆ."

"ಏಕೆ? ನನ್ನಂಥವರು ಯಾರಾದರೂ ಎರವಲು ಕೇಳಿಯಾರೆಂದೇ?"

"ಊಹೂ. ಅದಕ್ಕಲ್ಲ."

"ಮತ್ತೇಕೆ?"

"ನನ್ನ ಒಳ ಉಡುಪಿನಂತೆ, ಉತ್ತಮ ಅಭಿರುಚಿಗಳೂ ಪ್ರದರ್ಶನಾರ್ಹವಲ್ಲ ಜನ ಕೇಳುವುದು ಬಹಿರಾಲಂಕಾರವನ್ನು, ಅವರಿಗೆ ಪಡೆಯುವ ಯೋಗ್ಯತೆ ಇರುವುದೂ ಅಷ್ಟರದೇ. ಅದಕ್ಕಾಗಿ. ನಿಮಗೆ ಎರವಲು ಕೊಡಲು ಯೋಚನೆಯಿಲ್ಲ. ಬೇಕಾದ ಪುಸ್ತಕ ತೆಗೆದುಕೊಂಡು ಹೋಗಿ. ಪುಸ್ತಕದ ಯೋಗ್ಯತೆ ಬಹು ಜನಕ್ಕೆ ಅರಿವಾಗುವುದು, ಎರವಲು ಪಡೆದವರು ಆ ಪುಸ್ತಕವನ್ನು ಹಿಂದಿರುಗಿಸದಿದ್ದಾಗ ಮಾತ್ರವೇ. ಆದ್ದರಿಂದ ಎರವಲು ಕೊಡುವುದೂ

ಒಳ್ಳೆಯದೇ. ಎರವಲು ಕೊಡುವುದೆಂದರೆ, ಹೆಣ್ಣು ಗಂಡಿಗೆ ಮೈ, ಮನಸ್ಸು ಒಪ್ಪಿಸಿದಂತೆ. ಕೊಟ್ಟ ಮೇಲೇ ಏನು ಕಳೆದುಕೊಂಡೆ ಎನ್ನುವುದು ಅರಿವಾಗುವುದು...."

ಫ್ಲೋರಾಳ ಕಟು-ಮಧುರ ಚಾಲೂಕ್ತಿಗಳನ್ನು ಕೇಳಿ, ಪ್ರಭಾವತಿ ನಗಲೆತ್ನಿಸಿದಳು, ಆದರೆ ನಗು ಬರಲಿಲ್ಲ.

"ಹ್ಞ? ಆಯಿತು. ನನ್ನ ಹರಟೆಯಲ್ಲಿ ನಿಮಗೆ ಪುಸ್ತಕ ತೋರಿಸುವುದೇ ಮರೆತುಬಿಟ್ಟೆ. ಅದಕ್ಕೇ ಹೆಂಗುಸನ್ನು ನೋಡಬೇಕು, ಅನುಭವಿಸಬೇಕು; ಮಾತಾಡಲು ಮಾತ್ರ ಬಿಡಬಾರದು ಎನ್ನುವುದು," ಎಂದು ನಗುತ್ತಾ ಫ್ಲೋರಾ 'ವಾರ್ಡ್‌ರೋಬ್'ನ ಬಾಗಿಲು ತೆಗೆದಳು.

ಅಲ್ಲಿದ್ದ ಫ್ಲೋರಾಳ ಬಗೆ ಬಗೆಯ ಉಡುಪುಗಳನ್ನು ಕಂಡು ಪ್ರಭಾವತಿಗೆ ಕಣ್ಣು ಕೋರೈಸಿದಂತಾಯಿತು. ವಾರ್ಡ್‌ರೋಬಿನಿಂದಲೂ ನವಿರಾದ ಪರಿಮಳದ ವಾಸನೆ ಬರುತ್ತಿತ್ತು.

"ಬಹಳ ಒಳ್ಳೆ ಬಟ್ಟೆಗಳಿಟ್ಟಿದ್ದೀರಾ. ಅದರಲ್ಲೂ ನಿಮ್ಮ ಅಭಿರುಚಿಗೆ ಅಭಿವಂದನೆಗಳು."

"ಮತ್ತೆ ಬಟ್ಟೆ ಬೇಡವೇ? ನನಗೆ ಮುನ್ನೂರು ರೂಪಾಯಿ ಸಂಬಳ ಕೊಡುವುದೇಕೆ ಎಂದು ತಿಳಿದಿದ್ದೀರ? ಒಳ್ಳೆ ಬಟ್ಟೆ ಧರಿಸಿ, ಲಕ್ಷಣವಾಗಿ ಕಾಣುವುದಕ್ಕೇನೇ. ನನ್ನನ್ನು ನೋಡಲೆಂದಾದರೂ ಜನ ಎಂಬೆಸಿಗೆ ಬರಲೆಂದು. ಹೀಗಿರುವಾಗ ಒಳ್ಳೆ ಬಟ್ಟೆ ಇಡದಿದ್ದರಾಗುತ್ತದೆಯೆ? ನೀವೂ ಅಷ್ಟೆ-ಉತ್ತಮವಾದ ಬಟ್ಟೆ ಉಡಬೇಕು. ಬಟ್ಟೆಯ ಮೇಲೇ ಜನ ಸೌಂದರ್ಯದ ಬೆಲೆ ಕಟ್ಟುವುದು. ಅತಿ ಒಳ್ಳೆ ಬಟ್ಟೆ ಧರಿಸಿದವಳೇ ಅತಿ ರೂಪವತಿ."

ಮತ್ತೆ ಪ್ರಭಾವತಿ ಅವಳ ಮಾತು ಕಿವಿಗೆ ಬೀಳದವಳಂತೆ, ವಾರ್ಡ್‌ರೋಬ್‌ನ ಕೆಳಗಿನ ಖಾನೆಯಲ್ಲಿದ್ದ ಪುಸ್ತಕಗಳನ್ನೆಲ್ಲಾ ತೆಗೆದು ನೋಡಿ, ಕಾಲೇಜಿನಲ್ಲಿ ತಾನು ಬಹುವಾಗಿ ಕೇಳಿ, ಆದರೆ ಓದಲು ಸಿಗದಿದ್ದ ಡಿ. ಎಚ್. ಲಾರೆನ್ಸ್‌ನ 'ಲೇಡಿ ಚಾಟರ್ಲೀಸ್ ಲವರ್' ಕಾದಂಬರಿಯನ್ನೂ, ಮೋಪಾಸಾನ ಕಥಾಸಂಗ್ರಹವನ್ನೂ ತೆಗೆದುಕೊಂಡಳು.

"ಇವೆರಡನ್ನೂ ನಾನು ಓದಿ ಕೊಡಬಹುದೇ?"

"ಖಂಡಿತ."

"ಥ್ಯಾಂಕ್ಸ್. ನಾನಿನ್ನು ಬರಲೆ? ತುಂಬ ತಲೆನೋವು ಎನ್ನುತ್ತಿದ್ದಿರಿ. ವಿಶ್ರಾಂತಿ ತೆಗೆದುಕೊಳ್ಳಿ."

"ಹೂ. ನನ್ನಿಂದ ನಿಮ್ಮ ಮನೆಗೆಲಸವೂ ಕೆಟ್ಟಿರಬೇಕು. ಯಾರಿಗೂ ನಾನು ಮಾಡುವುದು ಅಷ್ಟೇ ಉಪಕಾರ. ಹಾಗೆಂದು ಅದನ್ನು ತಳ್ಳಿಹಾಕ ಬೇಡಿ. ಒಬ್ಬನಿಗೆ ಮತ್ತೊಬ್ಬ ಕೆಡಿಸುವುದಕ್ಕಿಂತ ದೊಡ್ಡ ಉಪಕಾರ ಮಾಡ ಲಾರ. ಕೆಡದೆ ಯಾರಿಗಾದರೂ ಬುದ್ಧಿ ಬಂದದ್ದುಂಟೇ? ಆದ್ದರಿಂದ ಕೆಡಿಸು ವವನೇ ಜಗದ್ಗುರು. ಆಗಾಗ ಬರುತ್ತಿರಿ. ಇಷ್ಟಕ್ಕೇ ಗಾಬರಿಯಾಗಿ ಬರುವು ದನ್ನೇ ನಿಲ್ಲಿಸಬೇಡಿ."

"ಖಂಡಿತ. ನೀವೂ ಬಿಡುವಾದಾಗ ಬನ್ನಿ. ಆದರೆ ನಿಮ್ಮಲ್ಲಿನ ಸೌಕರ್ಯ ನಮ್ಮಲ್ಲಿಲ್ಲ."

ಪ್ರಭಾವತಿಯ ಮಾತು ಕೇಳಿ ಫ್ಲೋರಾ ಮಾರುತ್ತರ ಕೊಡದೆ ಒಂದು ಗಳಿಗೆ ಸುಮ್ಮನೆ ಅವಳನ್ನೇ ನೋಡಿ, ಬಳಿಕ ಹೇಳಿದಳು –

"ನೀನು ಒಳ್ಳೆಯ ಸ್ನೇಹಿತೆ. ಹಾಗೆ ಮಾತಾಡಿ ನನ್ನನ್ನು ಅಳಿಸಬೇಡ."

ಬಳ್ಳಿಯಲ್ಲಿ ಹೂ ಅರಳಿದಂತೆ ಸಹಜವಾಗಿ ಫ್ಲೋರಾಳ ಹೃದಯದಾಳ ದಿಂದ ಬಂದ ಆ ಮಾತು, ಆ ಎರಡು ಎದೆಗಳಿಗೂ ಸ್ನೇಹದ ವಜ್ರಲೇಪ ಮಾಡಿ ಬೆಳೆಯಿತು. ಆ ಮಾತು ಕೇಳಿ ಪ್ರಭಾವತಿಯ ಮೈ ಪುಲಕಿತವಾಯಿತು.

"ಬರುತ್ತೇನೆ. ಬೈ ಬೈ."

"ಬೈ ಬೈ."

ಉತ್ಸಾಹದಿಂದ, ಸಲಕ್ಕೆ ಎರಡು ಮೆಟ್ಟಲು ಹಾರಿ, ಮನೆಗೆ ಹಿಂದಿರು ಗಿದಳು ,ಪ್ರಭಾವತಿ. ಅವಳ ಮುಖದಲ್ಲಷ್ಟು ಆನಂದ ಮೂಡಿ ಎಷ್ಟೋ ತಿಂಗಳಾಗಿತ್ತು.

## ೨೦

ಪ್ರಭಾವತಿಯ ನಿಶ್ಚಲ, ನಿರ್ದಯ – ನೀರಸ ನಿಡುಬೇಸರದ ಬಾಳಿನಲ್ಲಿ ಫ್ಲೋರಾ ಮಾದಕ ಮಧುಮಾರುತದಂತೆ ಬೀಸಿ ಬಂದಳು. ಮದ್ಯಪಾನ ಮಾಡಿದವರು ಆನಂದಮತ್ತರಾಗುತ್ತಾರೆಂದು ಕೇಳಿದ್ದಳು. ಆ ಅನುಭವ ಹೇಗೋ ಅವಳರಿಯಳು. ಆದರೆ ಫ್ಲೋರಾ ಸ್ನೇಹ ಅವಳಿಗೆ ಮದ್ಯಪಾನ

ದಂತೆಯೇ ಆಗಿದೆಯೆಂದು, ಅವಳ ಹೆಸರು ಹೇಳಿದ ಕೂಡಲೇ ಹೊಳೆಯುವ ಅವಳ ಕಣ್ಣುಗಳಿಂದ ಕಾಣುವುದು.

ಫ್ಲೋರಾಗೂ ಪ್ರಭಾವತಿಯೆಂದರೆ ಹಾಗೇ ಆಗಿತ್ತು.

ದಿನಕ್ಕೊಂದು ಬಾರಿಯಾದರೂ ಒಬ್ಬರನ್ನೊಬ್ಬರು ನೋಡದಿದ್ದರೆ, ಎರಡು ನಿಮಿಷವಾದರೂ ಮಾತಾಡದಿದ್ದರೆ, ಇಬ್ಬರ ಜೀವಕ್ಕೂ ಸಮಾಧಾನ ಇರುತ್ತಿರಲಿಲ್ಲ.

ಸಾಧಾರಣವಾಗಿ ಮನೆ ಬಿಟ್ಟು ಕದಲದಿದ್ದ ಪ್ರಭಾವತಿ ಎಂದಾದರೊಮ್ಮೆ, ಸಂಜೆ ಫ್ಲೋರಾ ಆಫೀಸು ಬಿಡುವ ವೇಳೆಗೆ, ಅಲ್ಲಿಗೇ ಹೋಗಿ ಇಬ್ಬರೂ ಕಲೆತು ಸಿನಿಮಾ ನೋಡುವರು. ಬೀಚ್‌ನಲ್ಲಿ ಹೋಗಿ ಕುಳಿತು ಹರಟೆ ಹೊಡೆಯುವರು, ಜಗತ್ತಿನ ಮೇಲಿನ ಎಲ್ಲ ವಿಷಯವನ್ನೂ ಮಾತನಾಡುವರು. ಆ ಮಾತಿನಲ್ಲೇ ಮೈ ಮರೆಯುವರು.

ಫ್ಲೋರಾ – **ಲೀಲಾವತಿ.**

ಇಬ್ಬರೂ ಪ್ರಭಾವತಿಯ ಬಾಳಿನ ಎರಡು ದಂಡೆಯಾದರು. ಲೀಲಾವತಿ ಶಾಂತಿಯ ತಂಗಾಳಿ, ಫ್ಲೋರಾ ಉತ್ಸಾಹದ ಮಧುಗಾಳಿ. ಬರಿದಾದ ತನ್ನ ಜೀವನ ಮತ್ತೆ ತುಂಬಿತೆಂದೆನಿಸಿತು ಪ್ರಭಾವತಿಗೆ.

ಅವರಿಬ್ಬರ ಬಳಿ ಇದ್ದಾಗ ಜಗತ್ತನ್ನೇ ಮರೆತು ಬಿಡುವಳು ಪ್ರಭಾವತಿ. ಅವರಿಬ್ಬರ ಸ್ನೇಹದಲ್ಲಿ, ಅವಳ ಬಾಳಿನ ಕಳೆದುಹೋದ ವಸಂತ ಮತ್ತೆ ದೊರಕಿದಂತಿತ್ತು.

"ಅವರಿಬ್ಬರ ಸ್ನೇಹದಲ್ಲಿ ನಿನಗೆ ಮನೆಯ ನೆನಪೇ ಮರೆತಂತೆ ಕಾಣುತ್ತದೆ," ಎನ್ನುವನು ಶಾಂತಾರಾಂ, ತಾನು ಮನೆಗೆ ಬಂದಾಗ ಅವಳಿಲ್ಲದ ದಿನ– ಅದು ಅವಳ ದೋಷವೆಂಬಂತೆ.

ಫ್ಲೋರಾಳ ಬಗ್ಗೆ ತನಗಿದ್ದ ಉತ್ಸಾಹದಲ್ಲಿ ತನ್ನ ಗಂಡನನ್ನು ಪಾಲುಗಾರನನ್ನಾಗಿ ಮಾಡಿಕೊಳ್ಳಲು ಯತ್ನಿಸಿದಳು ಪ್ರಭಾವತಿ. ಆದರವನು ಆ ಉತ್ಸಾಹದಲ್ಲಿ ಪಾಲುಗಾರನಾಗದೆ –

"ಯಾರಲ್ಲೂ ಇಷ್ಟು ಸ್ನೇಹ, ಸಲಿಗೆ ತರವಲ್ಲ. ಮನುಷ್ಯರ ವಿಚಾರ ತಿಳಿಯದೆ ಅವರಲ್ಲಿ ಇಷ್ಟು ಸ್ನೇಹ ಬೆಳಸಬಾರದು," ಎಂದು, ಅವಳ ಉತ್ಸಾಹದ ಮೇಲೆ ತಣ್ಣೀರೆರೆಚಲು ನೋಡಿದ. ಆ ಮಾತು ಬೆಳೆಸಿದರೆ ವಿರಸವಾಗಬಹುದೆಂದು, ಆ ಮಾತು ಬೆಳೆಸದೆ ಸುಮ್ಮನಾದಳು.

ಆದರೂ ದಿನಗಳೆದಂತೆ ಶಾಂತಾರಾಮನಿಗೆ ಪ್ರಭಾವತಿಯ ಬಾಯಿಂದ ಫ್ಲೋರಳ ಹೆಸರು ಕೇಳಿದರೂ ಸಹನವಾಗದಂತೆ ತೋರಿತು. ಅದನ್ನರಿತಾಗ ಪ್ರಭಾವತಿಯ ಮನಸ್ಸಿಗೆ ತುಂಬಾ ಖೇದವಾಯಿತು.

ಅವಳ ಬಾಳನ್ನು ಸುಖಮಯ ಮಾಡಲು ಅವನು ಯಾವ ರೀತಿಯಲ್ಲೂ ವಿಶೇಷವಾಗಿ ಶ್ರಮಿಸುತ್ತಿರಲಿಲ್ಲ. ದುಡಿದು ತಂದು ಹಾಕುವುದೇ ಪರಮಾನುಗ್ರಹ ಎಂಬ ರೀತಿಯಲ್ಲಿ ವರ್ತಿಸುತ್ತಿದ್ದ. ಆದರೂ ಅವನಿಗೆ ತನ್ನಿಂದಾದ ಸುಖ ಕೊಡಲು ಪ್ರಭಾವತಿ ಹಿಂಜರಿದಿರಲಿಲ್ಲ. ಅವರಿಬ್ಬರ ಜೀವನ ಒಂದುಗೂಡಿದಾಗ ಪ್ರಜ್ವಲಿಸಿದ ಮೋಹ ದಿನಗಳೆದಂತೆ ಬತ್ತಿಹೋಗಿತ್ತು. ಶಾಂತಾರಾಮನಿಗೆ ಹೇಗೋ ಏನೋ ಪ್ರಭಾವತಿಗಂತೂ ನಿರಸನವಾಗಿತ್ತು. ಆದರೂ ಅವಳು ಅದನ್ನು ತೋರಗೊಡದೆ, ಆದಷ್ಟು ಪ್ರಸನ್ನತೆಯಿಂದಲೇ ಇದ್ದು, ಲೀಲಾವತಿ ಹೇಳಿದ 'ಪ್ರೇಮ'ದ ದಿನ ಬರಬಹುದೆಂದು ಕಾಯುತ್ತಿದ್ದಳು. ಹೀಗಿರುವಾಗ ಅವನು ತಾನು ಸುಖವಾಗಿರುವುದರ ಬಗ್ಗೆಯೂ ಸಹನೆ ತೋರದುದನ್ನು ಕಂಡು ಅವಳ ಮನಸಿಗೆ ಬೇಸರವಾಯಿತು. 'ಹಾಳಾಗಲಿ' ಎಂದು ಅವನ ಮುಂದೆ ಫ್ಲೋರಾ ಹೆಸರೆತ್ತುವುದನ್ನೇ ಬಿಟ್ಟಳು. ಆದರೂ ಅನಿವಾರ್ಯವಾಗಿ ಒಮ್ಮೊಮ್ಮೆ ಅವಳ ಮಾತು ಬರುವುದು. ಆ ಮಾತು ಬೇಸರದಲ್ಲಿ ಮುಕ್ತಾಯವಾಗುವುದು. ಆ ಬೇಸರವನ್ನು ಪ್ರಭಾವತಿ ಫ್ಲೋರಾ ಸ್ನೇಹದಲ್ಲಿ ಮರೆಯುವಳು.

ಹೀಗೇ ನಡೆದಿತ್ತು.

## ೨೧

ಹೊರಗೆ ಬಿಸಿಲು ರಣರಣ ಸುರಿಯುತ್ತಿತ್ತು.

ಮನೆಯೊಳಗೆ ಒಂಟಿಯಾಗಿ ಕುಳಿತ ಪ್ರಭಾವತಿಯ ಮನಸ್ಸಿನಲ್ಲೂ ಹಾಗೇ ಬೇಸರದ ಬಿಸಿಲು ದಹಿಸುತ್ತಿತ್ತು.

ಆ ಬಿಸಿಲ ಬೇಗೆಗೆ ನಿದ್ರೆ ಮಾಡುವುದಕ್ಕೂ ಆಗದು. ಮಾಡಲು ಕೆಲಸವೂ ಇಲ್ಲ. ಮಾಡಬೇಕಾದ ಕೆಲಸವೆಲ್ಲವನ್ನೂ ಮಾಡಿಯಾಗಿತ್ತು. ಮತ್ತೇನು ಮಾಡುವುದು?

ಪ್ರಭಾವತಿ ಲೀಲಾವತಿಯನ್ನು ನೋಡಿ ವಾರದ ಮೇಲಾಗಿತ್ತು. ಹೋಗಿ

ಅವಳನ್ನಾದರೂ ನೋಡಿ ಬರೋಣವೆಂದು, ಸ್ನಾನಮಾಡಿ, ಬೇರೆ ಸೀರೆಯುಟ್ಟು, ಹೆರಳು ಹೆಣೆದುಕೊಂಡು ಗಿರ್‌ಗಾವ್‌ಗೆ ಹೊರಟಳು.

ಆದರೆ ಲೀಲಾವತಿಯೂ ಮನೆಯಲ್ಲಿರಲಿಲ್ಲ. ಅವಳ ಮನೆಯ ಬಾಗಿಲೂ ಬೀಗ ಹಾಕಿತ್ತು. ನೆರೆಯವರಿಂದ, ಲೀಲಾವತಿ ಅತಿಥಿಗಳಾಗಿ ಬಂದ ಯಾರೋ ತಮ್ಮೂರಿನವರಿಗೆ ಬೊಂಬಾಯಿ ತೋರಿಸಲು ಹೋಗಿರುವಳೆಂದೂ, ಬರುವ ವೇಳೆ ಗೊತ್ತಿಲ್ಲವೆಂದೂ ತಿಳಿಯಿತು.

ಮತ್ತೇನು ಮಾಡಬೇಕು? ಮನೆಗೆ ಹಿಂದಿರುಗುವುದೇ?

ಏಕೋ ಆ ಬರಿ ಮನೆಗೆ ಹಿಂದಿರುಗುವುದು ಅವಳ ಮನಸ್ಸಿಗೆ ಬೇಕಾಗ ಲಿಲ್ಲ. ಅವಳು ಹೀಗೆ ಮನೆ ಬಿಟ್ಟು ಬರುವುದೇ ಅಪರೂಪ. ಹೀಗಿರುವಾಗ, ಇಷ್ಟು ದೂರ ಬಂದು, ಬಳಲಿ, ಮತ್ತೆ ಆ ಮನೆಗೆ ಹಿಂದಿರುಗಿ ಒಂಟಿಯಾಗಿ ಬಿಸಿಲಿನಲ್ಲಿ ಬೇಯುವುದೇ ಎನಿಸಿ, ಮನೆಗೆ ಹೋಗುವ ಯೋಚನೆಯೇ ಬೇಡ ವಾಯಿತು.

ಹಾಗಾದರೇನು ಮಾಡಬೇಕು?

ಬೇರೇನೂ ತೋಚದೆ, ಹತ್ತಿರದಲ್ಲೇ ಇದ್ದ ಇರಾನಿ ರೆಸ್ಟೋರಾಗೆ ಹೋಗಿ, ಚಾ ತರಿಸಿ ಕುಡಿಯುತ್ತಾ ಕೂತಳು.

ಅವಳ ಕಣ್ಣೆದುರಿನ ಗೋಡೆಯ ಗಡಿಯಾರ ನಾಲ್ಕು ಗಂಟೆಯಾದುದನ್ನು ಸೂಚಿಸಿತು. ತಟಕ್ಕನೆ ಫ್ಲೋರಾ ನೆನಪು ಬಂತು. ಸಂಜೆಗೆ ಅವಳಿಗಾದರೂ ಬಿಡುವಿದ್ದರೆ, ಅವಳ ಜೊತೆಗಾದರೂ ಸ್ವಲ್ಪ ಹೊತ್ತು ಕಳೆದು ಜೊತೆಗೇ ಮನೆಗೆ ಹಿಂದಿರುಗುವುದೆಂದುಕೊಂಡಳು. ಆದರೆ ಫ್ಲೋರಾಗೂ ಬಿಡುವಿದೆಯೋ ಇಲ್ಲವೋ? ಹೀಗೆ ಹೋಗಬೇಕೆಂದರೆ ಎರಡು ದಿನ ಮೊದಲೇ ಕಾರ್ಯಕ್ರಮ ಸಿದ್ಧಮಾಡು ತ್ತಿದ್ದಳು, ನೂರಾರು ಕಾರ್ಯಕ್ರಮದ ಫ್ಲೋರಾ. ಹಾಗಿರುವಾಗ ಅವಳು ಸಿಗಬಹುದೇ?

ವಿಚಾರಿಸಿ ನೋಡುವುದೆಂದು, ಹೋಟಲಿನ ಫೋನ್ ತೆಗೆದುಕೊಂಡು ಫೋನ್ ಮಾಡಿದಳು. ಫೋನ್ ಮಾಡುತ್ತಿದ್ದ ಹಾಗೇ ಅದನ್ನೆತ್ತಿಕೊಂಡ ಫ್ಲೋರಾ ಧ್ವನಿ ಕೇಳಿಸಿತು –

"ಇದು ಗ್ರೀಸ್ ಎಂಬೆಸಿಯ ರಿಸೆಪ್ಷನಿಸ್ಟ್ ಮಾತನಾಡುತ್ತಿರುವುದು. ನಿಮ್ಮಿಂದ ಏನಾಗಬೇಕು?"

"ಫ್ಲೋರಾನೇ ಮಾತನಾಡುತ್ತಿರುವುದು?"

"ಹೌದು. ಯಾರು?"

"ನಾನು ಪ್ರಭಾವತಿ."

"ಹಲ್ಲೋ ಡಾರ್ಲಿಂಗ್. ಎಂಥ ಸವಿ ಅನಿರೀಕ್ಷಿತ. ಎಲ್ಲಿಂದ ಮಾತಾಡುತ್ತಿದೀಯ?"

"ಇಲ್ಲೇ ಒಂದು ಹೋಟಲಿನಿಂದ."

"ಹೋಟಲು? ಮನೆ ಬಿಟ್ಟುಬಿಟ್ಟೆಯೇನು?"

"ನಿನ್ನ ಸ್ನೇಹ ಮಾಡಿದ ಮೇಲೆ ಅಷ್ಟೇ ತಾನೇ."

"ಹಾಗಾದರೆ ನನ್ನನ್ನು ಅಭಿನಂದಿಸಬೇಕು."

"ಏಕೆ?"

"ಹೆಂಗಸಿಗೆ ಮನೆಯ ಬೇಡಿ ಬಿಡಿಸುವುದೇ ಮಹೋಪಕಾರವಲ್ಲವೇ?"

"ಅದು ಆಮೇಲಾಗಲಿ. ಮತ್ತೆ ಯಾರೋ ಫೋನ್ ಮಾಡಲು ಕಾದಿದಾರೆ. ಸಂಜೆಗೆ ಬಿಡುವಿದೆಯೇನು?"

"ಬಿಡುವು – ಅದು ಮನುಷ್ಯ ಮಾಡಿಕೊಳ್ಳಬೇಕಾದುದು. ಅದು ಇರುವುದೇ ಇಲ್ಲ. ಇದೇನು ಇದ್ದಕ್ಕಿದ್ದ ಹಾಗೇ ಈ ಬಯಕೆ?"

"ಮನೆಯಲ್ಲಿ ಬೇಸರಾಯಿತು. ಲೀಲಾವತಿಯನ್ನು ನೋಡೋಣವೆಂದು ಬಂದೆ. ಅವಳೂ ಸಿಗಲಿಲ್ಲ. ಅದಕ್ಕೇ ನಿನಗೆ ಫೋನ್ ಮಾಡಿದೆ."

"ಸರಿಯೇ, ಸಾವಿಗಿಂತ ಬೇಸರ ಮೇಲು. ಒಪ್ಪಿದೆ. ನಿನ್ನ ಆಯ್ಕೆ ಸರಿಯಾಗಿದೆ."

"ಯಾರು ಸಾವು, ಯಾರು ಬೇಸರ?"

"ನಿನ್ನ ಧರ್ಮಗುರು ಲೀಲಾವತಿ – ಸಾವು. ಧರ್ಮ ಬೋಧಿಸುವುದೇ, ಸತ್ತು ಸುಖಪಡಿ ಎಂದಲ್ಲವೇ? ಅವಳ ಉಪದೇಶವೂ ಅದೇ ಅಲ್ಲವೇ?"

"ಕಂಡವರನ್ನು ತೆಗಳುತ್ತಾ ಕೂಡುವುದಕ್ಕೇನು ನಿನಗೆ ಸಂಬಳ ಕೊಡುವುದು?" ಹುಸಿ ಮುನಿಸಿನಿಂದ ಕೇಳಿದಳು ಪ್ರಭಾವತಿ.

"ಒಬ್ಬರನ್ನು ಹೊಗಳುವುದು ಮತ್ತೊಬ್ಬರ ಪರೋಕ್ಷ ತೆಗಳಿಕೆ. ನಾನು ಮಾಡುವುದೇ ಆ ಉದ್ಯೋಗ."

"ಏನಾದರೂ ಮಾಡಿಕೋ. ಅತ್ತಕಡೆ ಬಂದರೆ ಸಿಗುತ್ತೀಯಾ?"

"ದೆವ್ವ, ರೋಗ ಎರಡೂ ಅಪ್ಪಣೆ ಕೇಳಿ ಬರುವುದಿಲ್ಲ, ಬಾ."

"ನಿನ್ನ ಮುಖಕ್ಕಷ್ಟು ಬೆಂಕಿ ಹಾಕಿದರು. ಯಾವಾಗಲೂ ಕೆಟ್ಟ ಬಾಯಿ."

"ಅದು ನೀನು ಇದುವರೆಗೆ ಕೊಟ್ಟ ಅತ್ಯುತ್ತಮ ಅಭಿನಂದನೆ. ಥ್ಯಾಂಕ್ಸ್ ಹನಿ. ಕಾಯುತ್ತಿರುತ್ತೇನೆ, ಬಾ. ಚೀರ್ ಯು."

"ಸೋಲಾಂಗ್ – ಚೀರ್ ಯು."

ಎಂದು ಫೋನ್ ಇಟ್ಟಳು, ಪ್ರಭಾವತಿ. ಫ್ಲೋರಾ ಜೊತೆಗೆ ಮಾತ ನಾಡಿದುದೇ, ಅವಳ ಬಹು ಭಾಗದ ಬೇಸರವನ್ನು ತೊಲಗಿಸಿತ್ತು. ಮತ್ತೊಂದು ಕಪ್ ಚಾ ತರಿಸಿ ಕುಡಿದು, ಹೋಟಲಿನ ಋಣ ತೆತ್ತು, ಹೊತ್ತು ಬೇಕಾದಷ್ಟಿ ದ್ದುದರಿಂದ, ನಿಧಾನವಾಗಿ ಹೋಗುವ ಟ್ರಾಂನಲ್ಲಿ ಫೋರ್ಟಿಗೆ ಹೊರಟಳು.

ಟ್ರಾಮಿನಲ್ಲಿ ಕುಳಿತಾಗಲೂ ಅವಳ ಮುಖದ ಮೇಲೆ ಫ್ಲೋರಾ ಮಾತಿ ನಿಂದ ಮೂಡಿದ ನಗೆ ಮಿನುಗುತ್ತಿತ್ತು ; ಮಿದುಳು ಅವಳಾಡಿದ ಮಾತನ್ನು ಮೆಲಕುಹಾಕುತ್ತಿತ್ತು.

ಎಂಥ ವಿಚಿತ್ರ ಹೆಂಗಸು ಫ್ಲೋರಾ!

ಫ್ಲೋರಾ ಪ್ರಭಾವತಿಗೆ ದೊಡ್ಡ ಸಮಸ್ಯೆಯಾಗಿದ್ದಳು. ಅವಳು ಹೀಗೆ ಎಂದು ನಿರ್ಧರಿಸುವುದೇ ಕಷ್ಟವಾಗಿತ್ತು. ಮೊದಮೊದಲು ಪ್ರಭಾವತಿಗೆ ಫ್ಲೋರಾ ಮಾತು, ಜೀವನ ಎಲ್ಲವೂ ಏನೋ ಕೃತ್ರಿಮ, ಮುಖವಾಡ ಧರಿಸಿದಂತೆ ಕಾಣುತ್ತಾಳೆ, ಪುಸ್ತಕದ ಹಾಗೆ ಮಾತಾಡುತ್ತಾಳೆ ಎನಿಸಿತ್ತು. ಒಮ್ಮೊಮ್ಮೆ ಅವಳ ಚಾಲೂಕ್ತಿಯ ವ್ಯಂಗ್ಯ, ಕಟುತೆ, ಉಧ್ಧೃತೆಗಳು ಬೇಕೆಂತಲೇ ಆಡಿದು ವೇನೋ ಎನಿಸಿ, ಬೇಸರವೂ ಆಗುತ್ತಿತ್ತು. ಪರಿಚಯ ಬೆಳೆಯುತ್ತಾ ಅದೆಲ್ಲವೂ ಅವಳ ಸ್ವಾಭಾವಿಕ ಚರ್ಯೆ. ಜೀವನದ ಬಗ್ಗೆ ಅವಳು ತಳೆದ ನಿರಸನವಾದದ ಪರಿಣಾಮ ಎಂಬುದು ಅರ್ಥವಾಯಿತು. ಕಣ್ಣೀರಿನ ಬಳ್ಳಿಯಲ್ಲಿ ನಗೆಯ ಹೂ ಅರಳಿದಂತೆ, ಅಳುವಿನಾಳದಲ್ಲಿ ನಗೆಯ ಕವಲೊಡೆಯಬಹುದು ಎಂಬು ದನ್ನು ಅವಳು ಕೇಳಿದ್ದಳು. ಫ್ಲೋರಾ ಬಾಳೂ ಹಾಗೇ ಆಗಿದೆ ಅನಿಸುತ್ತಿತ್ತು. ಆದರೆ ಅವಳ ಬಾಳಿನಾಳದಲ್ಲಿ ಹುದುಗಿ, ನಗೆಯ ಮುಖವಾಡವಾಗಿ ಕಾಣುವ ದುಃಖವೇನೆಂದು ಪ್ರಭಾವತಿಗೆ ತಿಳಿಯದು. ಅದು ಏನೆಂದು ಕೇಳುವ ಮನಸ್ಸು ಪ್ರಭಾವತಿಗಿರಲಿಲ್ಲ. ತನ್ನ ದುಃಖವನ್ನೇ ದೊಡ್ಡದು ಮಾಡಿಕೊಂಡು, ಅದು ಜಗತ್ತಿನಲ್ಲಿ ಪ್ರತಿಯೊಬ್ಬರೂ ತಿಳಿಯಲೇಬೇಕಾದುದು ಎಂಬಂತೆ ಅದನ್ನು ಸಾರಿ ಹೇಳುವ ಸ್ವಭಾವದವಳೂ ಅಲ್ಲ ಫ್ಲೋರಾ. ಅವಳೇ ಒಮ್ಮೆ ಹೇಳಿದಂತೆ –

"ಹೆಚ್ಚು ತಿಳಿಯುವುದೂ ಅಜ್ಞಾನದ ಪರಮಾವಧಿಯಾಗುತ್ತದೆ. ಒಬ್ಬರ ವಿಚಾರ ಒಬ್ಬರು ತಿಳಿಯದಿದ್ದಲ್ಲಿ ಸ್ನೇಹ ಶಾಶ್ವತವಾಗುತ್ತದೆ. ಈ ತಿಳುವಳಿಕೆ–ನಾಲೆಡ್ಜ್ – ತುಂಬಾ ಅಪಾಯಕಾರಿ. ಗಂಡ ಹೆಂಡಿರು ಜಗಳವಾಡುವುದು ಒಬ್ಬರನ್ನೊಬ್ಬರು ತಿಳಿದುಕೊಂಡ ಮೇಲೇ ಅಲ್ಲವೇ?"

ಅವಳು ಹಾಗೆ ಆ ಮಾತಾಡಿದಾಗ, ಒಮ್ಮೊಮ್ಮೆ ಪ್ರಭಾವತಿಗೆ, ಆ ಮಾತನ್ನು ಫ್ಲೋರಾಳ ಬಾಯಲ್ಲಿ ಕೇಳುವುದಕ್ಕಿಂತ ಮೊದಲು ಮತ್ತೆಲ್ಲೋ, ಇನ್ನಾರ ಬಾಯಲ್ಲೋ ಕೇಳಿದ್ದಂತೆ ಅನಿಸುತ್ತದೆ. ಹಾಗೇ ಯೋಚಿಸಿದಾಗ ತನ್ನ ಹೃದಯದಾಳದಲ್ಲಿ ಹುದುಗಿದ ಮಾತನ್ನೇ ಎಳೆದು ತಂದು ಹೇಳಿದಂತೆ ತೋರುತ್ತದೆ. ನಗುವಿನ ಉದ್ಯಾನದಲ್ಲಿ ಮೈ ಮರೆತು ತಿರುಗಾಡುವಾಗ, ತಟಕ್ಕನೆ ಕಣ್ಣೆದುರು ಸತ್ಯದ ಕಾಳಸರ್ಪ ಹೆಡೆಯೆತ್ತಿ ನಿಲ್ಲುತ್ತದೆ. ಇತರರು ಒದರಿ ಒದರಿ ಹೇಳುವುದನ್ನು ಅವಳು ನಗೆ ಮಾತಿನಲ್ಲಿ ತೇಲಿಸಿ ಚುಚ್ಚಿ ಸೂಚಿಸುತ್ತಾಳೆ ಎನಿಸುತ್ತದೆ.

ಎಷ್ಟು ಯೋಚಿಸಿದರೂ ಕಡೆಗವಳು 'ವಿಚಿತ್ರ ಹೆಂಗಸು' ಎಂಬ ಸಮಸ್ಯಾತ್ಮಕ ಸಿದ್ಧಾಂತವಾಗಿ ನಿಲ್ಲುತ್ತಾಳೆ ಫ್ಲೋರಾ. ಸಹಜವಾಗಿ ಮಾತನಾಡ ಬಾರದೇ, ಹಾಗಾದರೆ ಇವಳೇನೆಂದು ತಿಳಿಯಬಹುದಲ್ಲಾ ಎನಿಸುತ್ತದೆ. "ಯಾವಾಗಲೂ ಹೀಗೆ ಏಕೆ ಮಾತಾಡಬೇಕು. ಸಹಜವಾಗಿ ಮಾತಾಡ ಬಾರದೇ" ಎಂದರೆ ಅದಕ್ಕೂ ಅಂಥದ್ದೇ ಉತ್ತರ ಕೊಡುತ್ತಾಳೆ–

"ಸಹಜತೆ ಜೀವನ, ಅಸಹಜತೆ ಕಲೆ. ನಾನು ಬಾಳನ್ನೇ ಕಲೆಯಾಗಿಸ ಬೇಕೆಂಬ ಸಂಪ್ರದಾಯದವಳು."

"ಯಾವಾಗಲೂ ಹೀಗೇ ಮಾತನಾಡುವ ನಿನ್ನನ್ನು ಅರ್ಥಮಾಡಿಕೊಳ್ಳು ವುದೇ ಕಷ್ಟ ಫ್ಲೋರಾ. ಯಾವಾಗಲೂ ಹೀಗೇ ಸ್ನೇಹಿತರಿಗೂ ಸಮಸ್ಯೆ ಯಾಗಿಯೇ ಉಳಿಯಬೇಕೆಂದೇ ನಿನ್ನಿಚ್ಛೆಯೇನು?"

"ಜೀವನವೂ ಒಂದು ಸಮಸ್ಯೆಯೇ ಅಲ್ಲವೇ ಪ್ರಭಾ ಡಾರ್ಲಿಂಗ್. ಸಮಸ್ಯೆಯ ಮೋಹಕತೆ ಇರುವುದು, ಅದು ಸಮಸ್ಯೆಯಾಗಿರುವುದರಲ್ಲೇ. ಅದನ್ನು ಎಂದೂ ಅರ್ಥಮಾಡಿಕೊಳ್ಳಲು ಯತ್ನಿಸಬಾರದು. ಅರ್ಥ ಅಪಾಯ ಕಾರಿ."

"ಎಲ್ಲಾದಗೂ ಹಾಳಾಗಿ ಹೋಗು," ಎಂದು ಪ್ರಭಾವತಿ ನಕ್ಕು ಮಾತು ಮುಗಿಸುವಳು.

"ಆಶೀರ್ವಾದಕ್ಕೆ ಚಿರಋಣಿ," ಎಂದು ತಾನೂ ನಕ್ಕುಬಿಡುವಳು ಫ್ಲೋರಾ.

ಅವಳು ನಗಲಿ, ಗಂಭೀರವಾಗಿ ಮಾತಾಡಲಿ – ಕಡೆಗೂ ಸಮಸ್ಯೆಯಾಗಿಯೇ ಉಳಿಯುತ್ತಾಳೆ.

ತನ್ನ ಎಲ್ಲ ವಿಚಾರಗಳನ್ನು ಚರ್ಚಿಸುವಂತೆ, ಫ್ಲೋರಾಳ ವಿಷಯವನ್ನು ಪ್ರಭಾವತಿ ಲೀಲಾವತಿಯೊಂದಿಗೆ ಚರ್ಚಿಸುತ್ತಾಳೆ. ಆದರೆ ಲೀಲಾವತಿ ಫ್ಲೋರಾ ಸಮಸ್ಯೆಯೇ ಅಲ್ಲವೆಂಬ ರೀತಿ ಮಾತನಾಡುತ್ತಾಳೆ.

"ನಿನ್ನದು ಹುಚ್ಚು ತಲೆ, ಪ್ರಭಾ, ಎಲ್ಲಾ ಅತಿಯಾಗಿ ಹಚ್ಚಿಕೊಂಡು, ತಲೆ ಕೆಡಿಸಿಕೊಳ್ಳುತ್ತೀಯ. ಸಣ್ಣ ಮಾತೂ ಅಷ್ಟೆ."

"ಅದು ನನ್ನ ಹುಟ್ಟುಗುಣ ಅಂತ ಕಾಣುತ್ತೆ ಲೀಲಾ."

"ಹೂ. ಹಸಿಯಾದ ಮಣ್ಣಿನಲ್ಲಿ ಸಣ್ಣ ಕಲ್ಲು ಹಾಕಿದರೂ ನಿಲ್ಲುತ್ತೆ. ಒಣಗಿ ಅದೇ ಗಟ್ಟಿಯಾದರೆ ದೊಡ್ಡ ಕಲ್ಲನ್ನು ಗಿಡಿದರೂ ನಿಲ್ಲುವುದಿಲ್ಲ. ಫ್ಲೋರಾ ನಿನ್ನ ಸ್ನೇಹಿತಳಲ್ಲವೇ?"

"ಹೂ."

"ಮತ್ತೇಕೆ ಅವಳ ವಿಷಯ ಯೋಚನೆಮಾಡುತ್ತಿ? ಅಲ್ಲಿಗೆ ಬಿಟ್ಟುಬಿಡು."

"ಆದರೂ ಅವಳು ವಿಚಿತ್ರ ಹೆಂಗಸು ಲೀಲಾ. ನನಗಂತೂ ದೊಡ್ಡ ಸಮಸ್ಯೆ."

"ಮತ್ತೆ ಅದೇ. ಏನು ಸಮಸ್ಯೆ ಬಂತು ಪ್ರಭಾ, ಅದೆಲ್ಲಾ ನೀನು ಸಮಸ್ಯೆ ಅಂದುಕೊಂಡರೆ ಸಮಸ್ಯೆ, ಇಲ್ಲವೆಂದರೆ ಇಲ್ಲ."

"ನೀನೂ ಫ್ಲೋರಾ ಹಾಗೇ ಮಾತಾಡುತ್ತೀ."

"ಊಹೂ. ಯಾರ ಹಾಗೂ ಮಾತಾಡುವುದಿಲ್ಲ. ನನಗೆ ತೋಚುವುದು ಅಷ್ಟೆ. ಗುಲಾಬಿಯಲ್ಲಿ ಹೂವೂ ಇದೆ, ಮುಳ್ಳೂ ಇದೆ. ಏಕಿದೆ ಎಂದುಕೊಂಡು, ಹೂವಿನಲ್ಲಿ ಮುಳ್ಳೇಕೆ ಎಂದು ಯೋಚನೆ ಮಾಡಿದರೆ, ಹೂವೂ ಸಮಸ್ಯೆಯಾಗುತ್ತೆ. ಅದರಲ್ಲಿ ಅದರ ಪರಿಮಳದ ಸೊಗಸೇ ತಪ್ಪಿಹೋಗುತ್ತೆ. ಸಂಪಿಗೆಗೆ ಮುಳ್ಳಿಲ್ಲ, ಗುಲಾಬಿಗೆ ಮುಳ್ಳಿದೆ. ಎರಡೂ ಸರಿಯೆ. ಹಾಗಿರುವುದೇ ಅದರ ಧರ್ಮ ಅಂದುಕೊಂಡು ಬಿಟ್ಟರೆ ಅದರ ಸಮಸ್ಯೆ ಏನು ಬಂತು ಹೇಳು? ಏಕೆ ಮುಳ್ಳಿದೆ ಅಂತ ಚಿಂತಿಸುವುದು ಒಳ್ಳೆಯದೋ, ಗುಲಾಬಿ ಸುಂದರವಾಗಿದೆ ಎಂದು ಸಂತೋಷಪಡುವುದು ಒಳ್ಳೆಯದೋ? ತಲೆ ಕೆಡಿಸಿಕೊಂಡರೆ ಹೂವು

ಹೋಗಿ ಮುಳ್ಳು ಉಳಿಯುತ್ತೆ, ಮುಳ್ಳು ಮರೆತರೆ ಹೂವು ಉಳಿಯುತ್ತೆ. ಹಾಗೇಕೆ ಹೀಗೇಕೆ ಎಂದುಕೊಳ್ಳುವುದಕ್ಕಿಂತ ಇದ್ದದ್ದರಲ್ಲಿ ಸುಖಪಡುವುದು ಲೇಸು, ಪ್ರಭಾ."

"ನೀನು ಫ್ಲೋರಾನ ನೋಡಿಲ್ಲ, ಅದಕ್ಕೇ ಹೀಗೆ ಹೇಳುತ್ತಿ."

"ನೋಡುವುದೇಕೆ? ನೀನು ಹೇಳಿದ್ದು ಕೇಳಿದರೇ ತಿಳಿಯುತ್ತೆ."

"ಏನು ತಿಳಿಯುತ್ತೆ?"

"ಆಕೆ ಒಳ್ಳೆ ಹೆಂಗಸೆಂದು."

"ಆದರೂ ನೀನು ಅವಳನ್ನು ಒಮ್ಮೆ ನೋಡಬೇಕು ಲೀಲಾ."

"ಆಯಿತು. ನೋಡೋಣ. ಯಾವಾಗಲಾದರೂ ಬಿಡುವಾದರೆ ಒಮ್ಮೆ ಕರೆದುಕೊಂಡು ಬಾ; ಅಥವಾ ನಾನೇ ನಿಮ್ಮ ಮನೆಗೆ ಬಂದಾಗ ಆಕೆ ಇದ್ದರೆ ಪರಿಚಯ ಮಾಡಿಸು."

"ನೋಡಬೇಕು ಎಂತ ಅನ್ನಿಸುವುದಿಲ್ಲವೇ?"

"ಹೂ. ನೋಡಬೇಕು ಅಂತ ಇರುವುದನ್ನೆಲ್ಲ ನೋಡಲಿಕ್ಕಾಗುತ್ತೆಯೇ? ನೋಡುವುದೇ ಇದ್ದರೆ ನೋಡುತ್ತೇನೆ. ಅದಕ್ಕಷ್ಟು ಆತುರವೇಕೆ?"

"ಆತುರವಿದ್ದರೆ ತಪ್ಪೇ ಲೀಲಾ?"

"ಯಾವುದೂ ತಪ್ಪಲ್ಲ."

"ನೀನು ಶುದ್ಧ ಕೋಲ್ಡ್." (Cold) ನಗುತ್ತಾ ಹೇಳಿದಳು ಪ್ರಭಾವತಿ.

"ಹಾರುವ ಹಕ್ಕಿ, ಬಸವನ ಹುಳವನ್ನು ಹಾರಲಿಲ್ಲ ಎಂದು ಬೈದ ಹಾಗೆ. ನಿನಗೆ ಹಾರುವುದು ಅಭ್ಯಾಸ, ನನಗೆ ತೆವಳುವುದು ಅಭ್ಯಾಸ. ಏನು ಮಾಡುವುದು ಹೇಳು."

ಹಾಗೆ ಲೀಲಾವತಿ ಮಾತನಾಡಿದಾಗ ಸರಳವಾಗಿ ಮಾತಾಡಿದ ಅವಳ ಮಾತೂ ಸಮಸ್ಯೆಯ ಹಾಗೇ ಕಾಣುತ್ತದೆ ಪ್ರಭಾವತಿಗೆ. ಲೀಲಾವತಿಯ ಸರಳತೆ, ಫ್ಲೋರಳ ಕ್ಲಿಷ್ಟತೆ – ಎರಡೂ ಅರ್ಥವಾಗದೆ ತೊಳಲುತ್ತಾಳೆ ಅವಳು.

ಲೀಲಾವತಿ – ಫ್ಲೋರಾ, ಫ್ಲೋರಾ – ಲೀಲಾವತಿ....

ಅವರು ಅರ್ಥವಾಗಲಿ ಬಿಡಲಿ, ಅವರಿಬ್ಬರೂ ತನ್ನ ಬಾಳನ್ನು ತಬ್ಬಿದ ಎರಡು ಮೃದು ತೋಳುಗಳು....

ಈ ಯೋಚನೆ ಮಾಡುತ್ತಲೇ ಪ್ರಭಾವತಿ ಫ್ಲೋರಾ ಫೌಂಟನ್ ಬಳಿ ಟ್ರಾಂನಿಂದಿಳಿದು, ಗ್ರೀಸಿನ ಎಂಬೆಸಿಯ ಕಡೆ ಹೆಜ್ಜೆ ಹಾಕಿದಳು.

ಫ್ಲೋರಾ ಅವಳು ಬರುವುದನ್ನೇ ಕಾಯುತ್ತಾ ಇದ್ದಳು. ಆದರೆ ಆಫೀಸು ಮುಗಿಯಲು ಇನ್ನೂ ಐದು ನಿಮಿಷ ಇದ್ದುದರಿಂದ, ಐದಾಗುವವರೆಗೂ ಕಾಯುತ್ತಾ ಕೂಡಬೇಕಾಯಿತು. ಗಂಟೆ ಐದು ಹೊಡೆಯುತ್ತಿದ್ದ ಹಾಗೇ ಫ್ಲೋರಾ ಕೆಲಸ ಮುಗಿಸಿ ಮೇಲೆದ್ದು –

"ಇನ್ನು ಎಲ್ಲಿಗೆ ಬೇಕಾದರೂ ಹೋಗಬಹುದು, ಏನು ಬೇಕಾದರೂ ಮಾಡಬಹುದು. ಹೇಳು ಏನು ಮಾಡೋಣ. ಆಕ್ರಮಣವೋ. ಅತ್ಯಾಚಾರವೋ, ಯಾವುದಕ್ಕೂ ನಾನು ಸಿದ್ಧ," ಎಂದಳು.

"ನಾನು ಇಂಥಲ್ಲಿ ಹೋಗುವುದೆಂದು ಯೋಚಿಸಿಲ್ಲ."

"ಅದೇ ಒಳಿತು. ಉದ್ದೇಶವಿಲ್ಲದಿರುವುದರಲ್ಲೇ ಆನಂದವಿದೆ. ನಡಿ, ಹೋಗಿ ಎಲ್ಲಾದರೂ ಅಷ್ಟು ಚಾ ಕುಡಿದು ಹಾಗೇ ಕಾಲೆಳೆದುಕೊಂಡತ್ತ ಹೋಗೋಣ" – ಎಂದು ಫ್ಲೋರಾ, 'ಕ್ಲೋಕ್ ರೂಂ'ಗೆ ಹೋಗಿ ತನ್ನ ತಲೆ ಕೂದಲು, ಮುಖದ ಪೌಡರನ್ನು ಸರಿಮಾಡಿಕೊಂಡು ಬಂದಳು.

ಪ್ರೀಮಿಯರ್ ಕಾಫೀ ಬಾರ್‌ನಲ್ಲಿ ಕಾಫಿ ಕುಡಿದು, ಹಾಗೇ ಸುತ್ತಾಡುತ್ತಾ 'ಸಿಟ್ರೋ' ಥಿಯೇಟರಿನ ಕಡೆ ಬಂದರು.

"ಸಿನೀಮಾ ನೋಡೋಣವೇ?" ಫ್ಲೋರಾ ಪ್ರಭಾವತಿಯನ್ನು ಕೇಳಿದಳು.

"ಯಾವ ಸಿನೀಮಾನೋ?"

"ಯಾವುದಾದರೇನು? ಸಿನಿಮಾ ನೋಡಿದರಾಯಿತು," ಎಂದಳು ಫ್ಲೋರಾ.

"ಸರಿ, ಹಾಗಾದರೆ."

"ಆದರೆ ನಿನ್ನ ಗಂಡ ಮನೆಗೆ ಬಂದು ಕಾಯುತ್ತಾನೇನೋ."

ಪ್ರಭಾವತಿಗೆ ಮನೆಗೆ ಬೀಗ ಹಾಕಿಕೊಂಡು ಬಂದುದೇ ಮರೆತು ಹೋಗಿತ್ತು. ಈಗ ಸಿನಿಮಾಕ್ಕೆ ಹೋಗದೆ ಮನೆಗೆ ಹಿಂದಿರುಗಿದರೆ ಆ ಸಮಸ್ಯೆ ಪರಿಹಾರವಾಗುತ್ತಿತ್ತು. ಆದರೆ –

"ಆಗಲೇಳು ಒಂದು ದಿನಕ್ಕೇನು? ದಿನವೂ ಅವರಿಗಾಗಿ ನಾನು ಕಾಯುವುದಿಲ್ಲವೇ? ಒಂದು ದಿನ ಅವರು ಕಾದರೆ ತಪ್ಪೇನು?

"ಸರಿ, ಹಾಗಾದರೆ."

ಇಬ್ಬರೂ ಸಿನಿಮಾಕ್ಕೆ ಹೋಗಿ ಕುಳಿತರು.

ಸಿನಿಮಾದಲ್ಲಿ ಕುಳಿತಾಗಲೂ 'ಅವರನ್ನು ಕಾಯಿಸಬಾರದಾಗಿತ್ತು. ಏನು ಮಾಡುವುದು?' ಎಂಬ ಅಳುಕಿತ್ತು. ಆದರೆ ಅದನ್ನು ಮನಸ್ಸಿನಿಂದ ದೂಡಿ, ಸಿನೀಮಾದ ನೋಟ, ಫ್ಲೋರಾಳ ಮಾತುಗಳಲ್ಲಿ ಎಲ್ಲವನ್ನೂ ಮರೆತು ಬಿಟ್ಟಳು.

## ೨೨

ಮನೆಯ ಬಾಗಿಲಲ್ಲೆ ನಿಂತು ಕಾಯುತ್ತಿದ್ದ ಶಾಂತಾರಾಂ.

ತುಂಬ ಹೊತ್ತು ಗಂಡನನ್ನು ಕಾಯಿಸಿದೆನೆಂಬ ಅಳುಕಿನಿಂದಲೇ ಪ್ರಭಾವತಿ ಮನೆಗೆ ಹಿಂದಿರುಗಿದಳು. ಫ್ಲೋರಾ ಮತ್ತಾವುದೋ ಪಾರ್ಟಿಗೆ ಹೋಗುವುದಿದೆಯೆಂದು ಹೋದದ್ದರಿಂದ, ಪ್ರಭಾವತಿ ಒಬ್ಬಳೇ ಮನೆಗೆ ಬಂದಳು. ತಾನು ಹಾಗೆ ಅವರನ್ನು ಕಾಯಿಸಬಾರದಾಗಿತ್ತು, ಎಂಬ ಪಶ್ಚಾತ್ತಾಪವೂ ಅವಳಲ್ಲಿತ್ತು.

ಎಂತಲೇ ಶಾಂತಾರಾಮನ ಬಿಗಿದ ಮೋರೆ ನೋಡಿದ ಕೂಡಲೇ ಅವನಿಗೆ ಅಸಮಾಧಾನವಾಯಿತೆಂದು ತಿಳಿಯಿತು.

ಬಾಗಿಲು ತೆಗೆದವಳೇ, ದೀಪ ಹಾಕಿ –

"ಮನೆಗೆ ಬಂದು ತುಂಬಾ ಹೋತ್ತಾಯಿತೇ?" ಎಂದು ಪಶ್ಚಾತ್ತಾಪ ದಿಂದ ಮೃದುವಾದ ಧ್ವನಿಯಲ್ಲಿ ಕೇಳಿದಳು.

"ಎಷ್ಟು ಹೊತ್ತು ಕಾದರೆ ನಿನಗೇನು, ಯಾವಾಗ ಬಂದರೇನು?" ಬಲವಾಗಿ ಬೀಸುವ ಬಿರುಗಾಳಿಯ ಮೊದಲು ಸುಳಿವ ಗಂಭೀರ ಮಾರುತ ದಂತಿತ್ತು ಅವನ ಮಾತು.

"ಹೋಗುವಾಗ ಇಷ್ಟು ಹೊತ್ತಾಗುವುದೆಂದಿರಲಿಲ್ಲ. ಬೇಗ ಬರಬೇಕೆಂದು ಹೋದೆ...."

ಹೀಗೆ ಮಾಡಿದುದು ತಪ್ಪಾಯಿತು ಎಂದು ಹೇಳದಿದ್ದರೂ ಅವರಲ್ಲಿ ಆ ಧ್ವನಿಯಿತ್ತು. ಆದರೆ ಅದು ಶಾಂತಾರಾಮನಿಗೆ ಅರಿವಾಗಲಿಲ್ಲ.

"ಬೇಗ ಬರಬೇಕೆಂದು ಹೋದೆ, ಬೇಕಾದಾಗ ಬಂದೆ. ಹೇಗೂ ಬಂದವರು ನಾಯಿಯ ಹಾಗೆ ಬಾಗಿಲು ಕಾದು ಬಿದ್ದಿರುತ್ತಾರಲ್ಲ. ಮಹಾ ರಾಣಿಯ ಹಾಗೆ ನಿನಗೆ ಬಿಡುವಾದಾಗ ಬರಬಹುದು."

ತಣ್ಣನೆಯ ರಕ್ತವನ್ನು ಕುದಿಸುವ ಕಠೋರ ವ್ಯಂಗ್ಯ ಅವನ ಮಾತಿನಲ್ಲಿತ್ತು. ಮಾತು ಈ ರೀತಿ ಬರಬಹುದೆಂದು ಪ್ರಭಾವತಿ ಊಹಿಸಿರಲಿಲ್ಲ.

"ಒಂದು ದಿನ ಅಕಸ್ಮಾತ್ತಾಗಿ ಹೀಗಾದರೆ, ಹೀಗನ್ನುವುದೆ? ಹೋಗಲಿ ಬಿಡಿ. ಊಟಕ್ಕೇಳಿ, ಎಲೆ ಹಾಕುತ್ತೇನೆ."

"ಒಂದು ದಿನ? ನಿಜ – ಒಂದೇ ದಿನ. ಮತ್ತೆ ಇದು ಹೀಗಾಗಲಾರದು. ದುಡಿದು ಸತ್ತು ಬರುವುದು ಬಾಗಿಲು ಕಾದು ಬಿದ್ದಿರುವುದಕ್ಕಲ್ಲ. ಹೆಂಗಸಿಗೆ ಆ ಪರಿವೆ ಇರಬೇಕು."

ಬೇಕೆಂದೇ ಅವಳನ್ನು ಕೆರಳಿಸುವಂತಿತ್ತು ಅವನ ಮಾತು. ಪ್ರಭಾವತಿಯ ಹೃದಯದಲ್ಲಿ ಮೂಡಿದ ಪಶ್ಚಾತ್ತಾಪ ಕರಗಿ, ಸಿಟ್ಟು ಸಣ್ಣಗೆ ಕಿಡಿಯಾಡಲಾರಂಭಿಸಿತು. ಮೇರೆ ಲಂಘಿಸುವೆನೆನ್ನುವ ಕ್ರೋಧಕ್ಕೆ ಲಗಾಮು ಹಾಕಿ ಬಿಗಿ ಹಿಡಿಯುತ್ತಾ ಹೇಳಿದಳು–

"ದಿನವೂ ನೀವು ಎಂಟು ಗಂಟೆ ಮಾಡಿಕೊಂಡು ಬರುತ್ತೀರಲ್ಲಾ, ನಾನೂ ಹೀಗೇ ಹೇಳುತ್ತೇನೆಯೇ? ಕಾದಿರುವುದಿಲ್ಲವೇ?"

"ನೀನು ಕಾದಿರಬೇಕು, ಕಾದಿರುತ್ತೀಯ. ನಾನು ಕಾದಿರಬೇಕಾದುದಿಲ್ಲ."

"ಏಕೆ?"

"ಅದು ನಿನ್ನ ಕೆಲಸ."

"ಯಾವುದು,"

"ಕಾದಿರುವುದು."

"ನಿಜ. ನಾನು ನಿಮಗೆ ಕಾದು ಬಿದ್ದಿರಬೇಕಾದ ಆಳು ಅಲ್ಲವೇ? ನಿಮಗೆ ಜಗಳವಾಡುವುದಕ್ಕೆ ಇಷ್ಟವಿರಬಹುದು. ಆದರೆ ನನಗಿಲ್ಲ. ಆದ್ದರಿಂದ ಹೇಳುತ್ತೇನೆ. ಇನ್ನೊಮ್ಮೆ ಆ ಮಾತಾಡಬೇಡಿ."

ಕಚ್ಚಿಕೊಂಡ ಒರೆಯಿಂದ ನಿಧಾನವಾಗಿ ಎಳೆವ ಕತ್ತಿಯಂತಿತ್ತು ಪ್ರಭಾವತಿಯ ಮಾತಿನ ರೀತಿ. ಅದು ಶಾಂತಾರಾಮನನ್ನು ಎಚ್ಚರಿಸದೇ ಅವನ ಸಿಟ್ಟಿಗೆ ಗಾಳಿ ಬೀಸಿತು. ಪ್ರಭಾವತಿ ಹರಿತವಾಗಿ ಅಷ್ಟು ಹೇಳಿ, ಆ ಮಾತು ಅಲ್ಲಿಗೆ ಮುಗಿಸಲೆಂದು ಅಡಿಗೆಯ ಮನೆಯತ್ತ ಹೊರಳಿದಳು.

"ಅಲ್ಲಿ ನಿಂತುಕೋ ಪ್ರಭಾ," ಉಗ್ರನಾಗಿ ಹೇಳಿದ ಶಾಂತಾರಾ. ಆ

ಮಾತು ಕೇಳಿ ಪ್ರಭಾವತಿ, ಹೆಜ್ಜೆ ಸದ್ದು ಕೇಳಿದ ಹಾವಿನಂತೆ ತಟಕ್ಕನೆ ತಿರುಗಿ ನಿಂತಳು.

"ಇನ್ನೇನಾಗಬೇಕು?" ಸವಾಲಿನಂತಿತ್ತು ಪ್ರಭಾವತಿಯ ಮಾತು.

"ಇವತ್ತು ಈ ಮಾತು ಇತ್ಯರ್ಥವಾಗಬೇಕು. ಎಲ್ಲಿಗೆ ಹೋಗಿದ್ದೆ ಇಷ್ಟು ಹೊತ್ತು?"

ಯಾವುದೋ ಅಪರಾಧವನ್ನು ಕಂಡು ಹಿಡಿದ ಆಪಾದನೆಯ ಧೋರಣೆ ಯಿತ್ತು.

"ಸಿನಿಮಾಕ್ಕೆ,"

"ಯಾರ ಜೊತೆಯಲ್ಲಿ?"

"ಫ್ಲೋರಾ ಜೊತೆಯಲ್ಲಿ."

"ಇವತ್ತು ಹೇಳುತ್ತೇನೆ–ಮತ್ತೆ ನೀನು ಆ ಫ್ಲೋರಾ ಜೊತೆಗೆ ಹೋಗ ಕೂಡದು."

"ನೀವು ಇಂಥವರ ಜೊತೆ ಹೋಗಬಾರದೆಂದು ನಾನೆಂದೂ ಹೇಳಿಲ್ಲ."

"ನೀನು ಹೇಳುವಂತೆಯೂ ಇಲ್ಲ."

"ಏಕೆ?"

"ಏಕೆಂದರೆ ಈ ಮನೆಗೆ ನಾನು ಯಜಮಾನ."

"ನಿಮ್ಮನ್ನು ನೀವು ಬೇಕಾದ್ದು ತಿಳಿದುಕೊಂಡಿರಬಹುದು. ಆದರೆ ನನಗೆ ಇಂಥವರ ಜೊತೆ ಹೋಗಬೇಡವೆಂದು ಹೇಳುವ ಅಧಿಕಾರ ನಿಮಗಿಲ್ಲ."

"ಅಧಿಕಾರವಿದೆ. ನಾನು ದುಡಿದು ತಂದ ಅನ್ನ ನೀನು ತಿನ್ನುತ್ತಿರುವ ವರೆಗೂ ಹಾಗೆ ಹೇಳುವ ಅಧಿಕಾರ ನನಗಿದೆ."

ಅಷ್ಟು ದಿನ ಪ್ರಭಾವತಿ ತನ್ನ ಹೃದಯದಲ್ಲಿ ಹುಗಿದಿದ್ದ ಆಕ್ರೋಶ, ಕಿಡಿ ಸೋಕಿದ ಸಿಡಿಮದ್ದಿನಂತೆ ಆಸ್ಫೋಟನವಾಯಿತು.

"ನಿಮ್ಮ ಅನ್ನಕ್ಕೆ ಬಂದು ಬಿದ್ದವಳಲ್ಲ ನಾನು. ಈ ಅನ್ನ–ನನ್ನ ಮನೆ ಯಲ್ಲಿ ನಾಯಿ ತಿನ್ನುತ್ತಿತ್ತು ಈ ಅನ್ನವನ್ನು."

"ಅದಕ್ಕೇ ಈ ಅನ್ನ ಸಾಲದೆ ಫ್ಲೋರಾನ ಸ್ನೇಹ ಮಾಡಿದೆಯಾ, ಹೆಚ್ಚಿನ ಅನ್ನದ ದಾರಿ ಕಂಡುಕೊಳ್ಳಲು."

ಶಾಂತಾರಾಂ ಔಚಿತ್ಯದ ಮೇರೆಯರಿಯದೆ ಮಾತನಾಡಿದ. ಅದರ ಅರ್ಥ ಅವಳ ಎದೆಯನ್ನು ಭೇದಿಸಿ, ಕ್ರೋಧ ತಾನೇ ತಾನಾಗಿ ಮೆರೆಯಿತು–

"ಸಾಕು ನಿಲ್ಲಿಸಿ. ಗಟಾರದಂತೆ ನಾರಬೇಡಿ."

"ನಾನಲ್ಲ ನಾರುತ್ತಿರುವುದು. ನಾರುತ್ತಿರುವುದು ನಿನ್ನ ಪ್ರೇಮಾನ ಪವಿತ್ರ ಜೀವನ. ಆ ಬೀದಿ ಬಸವಿಯ ಜೊತೆ ತಿರುಗಲು ನಾಚಿಕೆಯಾಗುವು ದಿಲ್ಲವೇ? ಮತ್ತೆ ನನಗೇ ಬಾಯಿ ಮುಚ್ಚೆಂದು ಹೇಳುತ್ತೀಯಾ? ಇನ್ನೊಮ್ಮೆ ಆ ಮಾತಾಡಿದರೆ...."

"ಏನು ಮಾಡುತ್ತೀರ?"

"ಮತ್ತೆ ಆ ಮಾತಾಡದಂತೆ ಮಾಡುತ್ತೇನೆ."

"ಕಂಡವರನ್ನು ಅಂದಷ್ಟು ಸುಲಭವಲ್ಲ ಅದು. ಮತ್ತೊಮ್ಮೆ ಹೇಳು ತ್ತೇನೆ, ನಾಲಿಗೆ ಹರಿಬಿಡಬೇಡಿ. ಅದು ಗಂಡಸುತನವಲ್ಲ, ಹೇಡಿತನ.'

"ಮುಚ್ಚು ಬಾಯಿ," ಎಂದ ಶಾಂತಾರಾಂ. ಮಾತಿಗಿಂತ ಮುಂಚೆ ಅವನ ಕೈ ಅವಳ ಕೆನ್ನೆಯನ್ನು ಅಪ್ಪಳಿಸಿತು. ಏಟು ಬೀಳುತ್ತಿದ್ದ ಹಾಗೆ, ಪ್ರಭಾ ವತಿಯ ಮುಷ್ಟಿ ಬಿಗಿಯಿತು. ನರನರಗಳೂ ಉಕ್ಕಿನ ತಂತಿಯಂತೆ ಎಳೆದು ಬಿಗಿದುಕೊಂಡವು. ಅವಳಲ್ಲಿ ಕುದಿಯೆದ್ದಿದ್ದ ಕ್ರೋಧ ತಟಕ್ಕನೆ ಹೆಪ್ಪುಗಟ್ಟಿ ದ್ವೇಷವಾಗಿ ಕಣ್ಣಲ್ಲಿ ಮಿಂಚಿತು.

ಅವನಿದಿರು ನಿಲ್ಲದೆ ತಟಕ್ಕನೆ ತಿರುಗಿ ಹೊರಗೆ ಹೋದಳು. ಭಯಂಕರ ತಾತ್ಸಾರವಿತ್ತು, ಅವಳು ಹೋಗುವಾಗ ಶಾಂತಾರಾಮನನ್ನು ನೋಡಿದ ತೀವ್ರ ನೋಟದಲ್ಲಿ. ಆ ತಾತ್ಸಾರದ ಆಘಾತಕ್ಕೆ ಶಾಂತಾರಾಂ ತತ್ತರಿಸಿಹೋದ.

ಹೊರಗೆ ವರಾಂಡಾದಲ್ಲಿ ಹೋಗಿ ನಿಂತಳು ಪ್ರಭಾವತಿ. ಅವಳ ಮಿದು ಳಿನಲ್ಲಿ ಕಡಲು ಹೆಡೆಯಪ್ಪಳಿಸುತ್ತಿತ್ತು, ಬಿರುಗಾಳಿ ಭೋರ್ಗರೆಯುತ್ತಿತ್ತು. ಅವಳ ಮೈಯ ನರನರವೂ 'ಅಪಮಾನ, ಅಪಮಾನ' ಎಂದು ಚೀರುತ್ತಿತ್ತು.

ಹೊರಗೆ ಬೀದಿಯಲ್ಲಿ ಕಾರುಗಳು ಹಾದು ಹೋಗುತ್ತಿದ್ದವು. ಟ್ರಾಂನ ಚಲನೆಯ ಸದ್ದು ಕೇಳುತ್ತಿತ್ತು. ಬದಿಯ ಇರಾನಿ ಹೋಟಲಿನಲ್ಲಿ ರೇಡಿಯೋ ಹಾಡುತ್ತಿತ್ತು. ಜನ ಅತ್ತಿಂದಿತ್ತ ಅಡ್ಡಾಡುತ್ತಿದ್ದರು. ಬೀದಿಯ ದೀಪ ಸಣ್ಣಗೆ ಉರಿಯುತ್ತಿತ್ತು.

ದಿನದಂತೆಯೇ ಆ ಜಗತ್ತು ಚಲಿಸುತ್ತಿತ್ತು.

ಆದರೆ ಪ್ರಭಾವತಿಯ ಜಗತ್ತು ಮಾತ್ರ ಚೊಕ್ಕಚೂರಾಗಿ ಸಿಡಿದು ಹೋಗಿತ್ತು. ಒಂದು ಕಾಲಕ್ಕೆ ಸಪ್ತವರ್ಣವಾಗಿ ಕಂಡು, ಬಳಿಕ ಏಕ ವರ್ಣವಾಗಿ, ಮಂಕಾಗಿ ಹೊಳೆಯುತಿದ್ದ ಬುದ್ಬುದ–ಸಿಡಿದುಬಿದ್ದಿತ್ತು, ಅವಳ ಕಾಲಡಿಯಲ್ಲಿ. ಅವಳ ಸ್ವಪ್ನಸೌಧದ ಭಗ್ನಾವಶೇಷಗಳ ಮೇಲೆ ಪುರುಷನ ನಗ್ನ ಪುರುಷತ್ವದ ವಿಕಟಾಟ್ಟಹಾಸದ ತಾಂಡವ ನಡೆದಿತ್ತು.

'ಎರಡು ಹೊತ್ತಿನ ಅನ್ನಕ್ಕಾಗಿ ನಿನ್ನನ್ನು ನೀನು ಮಾರಿಕೊಂಡಿದೀಯ ನೀನು ದಾಸಿ. ಗಂಡಸಿಗಾಗಿ ಕಾದು ಬಿದ್ದಿರಬೇಕಾದ ನಾಯಿ. ಅಷ್ಟೇ, ಅಷ್ಟೇ ನೀನು.

'ನಿನಗೆ ಬೇಕಾದಾಗ ಬೇಕಾದ ಕಡೆ ಹೋಗುವ ಸ್ವಾತಂತ್ರ್ಯವಿಲ್ಲ. ಬೇಕಾದವರ ಸ್ನೇಹ ಮಾಡುವ ಅಧಿಕಾರವೂ ನಿನಗಿಲ್ಲ. ಪುರುಷನ ಅಪ್ಪಣೆ ಪಡೆಯದೆ ಮನೆಯಿಂದಾಚೆಗೆ ಹೆಜ್ಜೆ ಇಡುವ ಅಧಿಕಾರವೂ ನಿನಗಿಲ್ಲ.

'ಈ ದಾಸ್ಯ, ಗುಲಾಮಗಿರಿ ಇದೇ ನೀನು ಬಿಡುಗಡೆಯೆಂದು ಬಯಸಿ ಪಡೆದದ್ದು....

'ಗಂಡಿನ ಗುಲಾಮಗಿರಿ? ಅನುಭವಿಸು ಪ್ರಭಾ. ನಿನ್ನ ತಂದೆ ಒಪ್ಪಿದವನನ್ನು ಮದುವೆಯಾದರೆ ಅದು ಗುಲಾಮಗಿರಿ–ನೀನೊಪ್ಪಿದವನನ್ನು ಮದುವೆಯಾದರೆ ಬಿಡುಗಡೆ. ಸಂತೋಷಪಡು ಬಿಡುಗಡೆಯ ಈ ರಣತಾಂಡವದಲ್ಲಿ.... ಬಯಸಿದವನನ್ನು ಕೂಡಿದ ಮಾತ್ರಕ್ಕೇ ಬಿಡುಗಡೆ ಬಂತೇ, ಹೇಳೆ, ಹಿಡಿಗೂಳಿನ ದಾಸಿ....'

ಚೂರು ಚೂರಾದ ಅವಳ ಸ್ವಪ್ನಸೌಧದ ಒಂದೊಂದು ತುಂಡೂ ಅವಳನ್ನು ಹಂಗಿಸಿ ಕೇಳಿತು.

'ಇಲ್ಲ, ಇಲ್ಲ, ಇನ್ನು ಸತ್ತರೂ ಸರಿಯೇ, ಈ ಗುಲಾಮಗಿರಿಯ ಅನ್ನ ತಿನ್ನುವುದಿಲ್ಲ'–ಎಂದು ಚೀರಿ ಚೀರಿ ಹೇಳಿತು ಅವಳ ಅಪಮಾನ ಪ್ರಕ್ಷುಬ್ಧ ಹೃದಯ.

ಆ ಹಾಳಿನ ಮೂಲೆಯಲ್ಲೆಲ್ಲೋ ಮುಖ ಮರೆಸಿ ಕುಳಿತು, ಕಣ್ಣೀರು ಕರೆಯುತ್ತಿತ್ತು ಅವಳ ವಿಫಲ ಪ್ರಣಯ. ಹಾಳುಮನೆಯಲ್ಲಿ ಸುಯ್ಯನ, ಊಳಿಡುವ ಗಾಳಿಯಂತೆ ಕೇಳಿತು.

'ನಿನ್ನ ಪ್ರೇಮಕ್ಕೆ ಇದು ಮರ್ಯಾದೆ. ಶ್ರೀಮಂತಳಾಗಿ ಹುಟ್ಟಿ ಯಾವುದಕ್ಕಾಗಿ ಬಡತನವನ್ನಪ್ಪಿದೆಯೋ, ದೊಡ್ಡ ಮನೆಯಲ್ಲಿ ಹುಟ್ಟಿ

ಯಾವುದಕ್ಕಾಗಿ ಎಲ್ಲರಿಂದಲೂ ತಿರಸ್ಕೃತಳಾಗಿ- ಅಪಮಾನಿತಳಾದೆಯೋ, ಯಾವುದಕ್ಕಾಗಿ ಮನೆ ಮಠಗಳನ್ನು ತೊರೆದು ಬಂದೆಯೋ, ಯಾವುದರ ಇದಿರು ಉಳಿದೆಲ್ಲವೂ ಕಸ ಕಡ್ಡಿಗಿಂತ ಕ್ಷುಲ್ಲಕನೆಂದು ಹಿಯ್ಯಾಳಿಸಿದೆಯೋ-ಅದು, ಅದು, ಆ ನಿನ್ನ ಪ್ರಣಯ, ಅದು ನಿನಗೆ ಕೊಟ್ಟ ಬೆಲೆ ಇದು-

'ಹಿಡಿಗೂಳಿನ ದಾಸಿ! ಇಷ್ಟೇನೇ ನಿನ್ನ ಬೆಲೆ. ನಿನ್ನ ತ್ಯಾಗ, ಬಲಿದಾನದ ಪ್ರತಿಫಲ-ಹಿಡಿಗೂಳು, ನಿನ್ನ ಸಾಹಸಕ್ಕೆ ಬಹುಮಾನ-ನಾಯಿ ಬಾಳು.

'ಪುರುಷನೆಂದರೆ ಪಶು ಎಂದು ತಿರಸ್ಕರಿಸುತ್ತಿದ್ದೆಯಲ್ಲಾ, ಕಾಮ ಬಂದು ಕಣ್ಣು ಹೊಡೆದಾಗ ಎಲ್ಲಿ ಹೋಗಿತ್ತು ನಿನ್ನ ಪ್ರಜ್ಞೆ ?

'ಗಂಡಿನ ಮೋಹಕ್ಕೆ ಬಲಿಯಾದ ರೇವತಿಯನ್ನು "ಗಂಡಿನ ಗುಲಾಮಳು" ಎಂದು ಹಂಗಿಸಿದ್ದೆಯಲ್ಲಾ, ನೀನು ಯಾರು ?

'ಮದುವೆಯಾದ ಹೆಣ್ಣು, ಗಂಡಿನ ಸುತ್ತ ತಿರುಗುವ ಉಪಗ್ರಹ ಎಂದು ಹಿಯಾಳಿಸಿದ್ದೆಯಲ್ಲ-ಈಗ ನೀನೇನು ? ಹೇಳು, ಹೇಳು, ಲಜ್ಜೆಗೆಟ್ಟ ಹೆಂಗಸೇ, ಉತ್ತರ ಹೇಳು-ಈಗ ನೀನು ಯಾರು ? ನಿನಗೇನು ಬೆಲೆ....'

ಹತ್ತಾರು ಕಡೆಯಿಂದ ಬೀಳುವ ಚಾಟಿ ಏಟಿಗೆ ತತ್ತರಿಸುತ್ತಾ, ಸುರಿವ ನೆತ್ತರಿನಿಂದ ಕಣ್ಣು ಕುರುಡಾಗಿ, ದಿಕ್ಕರಿಯದೆ ಧಾವಿಸುವ ಪಶುವಿನಂತೆ ಹೊಯ್ದಾಡಿದಳು ಪ್ರಭಾವತಿ.

'ನನ್ನ ಮನೆ, ಸಂಸಾರ, ನನ್ನ ಜೀವನ, ನಾನು, ಎಂದು ಠೇಂಕಾರ ಮಾಡುತ್ತಿದ್ದೆಯಲ್ಲಾ, ಎಲ್ಲಿದೆ ಈಗ ಅದೆಲ್ಲಾ ?'

ಏಟು ತಿಂದ ಅವಳೊಳಗಿನ ಹೆಣ್ಣುತನ, ಅವಳ ಹೃದಯವನ್ನೇ ಅಲ್ಲಾಡಿಸಿ ಕೇಳಿತು.

'ನಿನ್ನ ಮನೆಗೆ, ನಿನ್ನ ಸಂಸಾರಕ್ಕೆ, ನಿನ್ನ ಜೀವನಕ್ಕೆ, ನಿನಗೆ-ನಾನು ಯಜಮಾನ. ನೀನು ನನ್ನ ದಾಸಿ. ಎರಡು ಹೊತ್ತಿನ ಅನ್ನ, ನೆತ್ತಿಯ ಮೇಲೊಂದು ಛಾವಣಿ, ಹಾಸಿಗೆಯ ಸುಖ ಕೊಟ್ಟು ನಿನ್ನನ್ನು ಕೊಂಡ ದಣಿ ನಾನು. ನಾನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು ನೀನು.'

ಅವಳ ಜಗತ್ತಿನ ನೆಲ ಮುಗಿಲನ್ನು ಆಕ್ರಮಿಸಿ, ಅವಳ ಬಾಗಿನ ನೆತ್ತಿಯ ಮೇಲೆ ತನ್ನ ಅಧಿಕಾರದ ಪಾದವಿಟ್ಟು, ಗುಡುಗಿನಂತೆ ಗುಡುಗಿದ ಪುರುಷ ತ್ರಿವಿಕ್ರಮ.

'ಇಲ್ಲ, ಇಲ್ಲ, ಇಲ್ಲ, ನಾನು ಆಳಲ್ಲ.'

'ಆಳಲ್ಲವಾದರೆ ಮತ್ತೇನು? ನೀನು ಆಳು.'

'ಸಹನೆ, ತಾಳ್ಮೆ, ಸಹಾನುಭೂತಿ-ಪ್ರಭಾ-ಅದು ನಿನಗೆ ಮೂಲ ಮಂತ್ರ.' ಫಿರಂಗಿ, ತೋಪುಗಳ ಸಿಡಿಲಾಘಾತದ ಸದ್ದಿನಲ್ಲಿ ವೇಣುನಾದದಂತೆ ಕೇಳಿಬಂತು ಆ ಮಾತು.

'ಬೆಂಕಿ ಹಚ್ಚಲಿ ಆ ಸಹನೆಗೆ, ಸಾವು ಬರಲಿ ಆ ಸಹಾನುಭೂತಿಗೆ-ಆ ಮಾತು ನಂಬಿ ನಾನು ಆಳಾದೆ.' ಎಂದು ಕೆದರಿದ ರೋಷದಿಂದ ಕಾಲ ಪ್ಪಳಿಸಿದಳು ಪ್ರಭಾವತಿ.

'ಪುರುಷನನ್ನು ಸ್ವತಂತ್ರ, ಸಮಾನತೆ ಬೇಡುವ ಈ ಹೇಡಿ ಹೆಂಗಸರೇ, ಹೆಂಗಸರ ಮೊದಲ ವೈರಿಗಳು ಎಂದೆಯಲ್ಲಾ. ನೀನಾರು, ಸ್ತ್ರೀ ಯೋಧೆ? ಎಲ್ಲಿದೆ ಸ್ವತಂತ್ರ ನಿನಗೆ, ಯಾರು ಕೊಡುತ್ತಾರೆ ನಿನಗೆ ಸ್ವತಂತ್ರವನ್ನು?'

ಕಿಲಕಿಲ ಅಣಕದ ನಗೆ ನಕ್ಕು ಕೇಳಿದವು ಹತ್ತಾರು ಹುಡುಗಿಯರ ಧ್ವನಿಗಳು.

'ಸ್ವತಂತ್ರ ಬೇಕೇ ನಿನಗೆ, ಸಮಾನತೆ ಬೇಕೇ? ಬಾ-ನನ್ನ ತೋಳ ತೆಕ್ಕೆಯಲ್ಲಿ ನಿನಗೆ ಸ್ವತಂತ್ರವಿದೆ, ನನ್ನ ಪಾದದಡಿಯಲ್ಲಿ ಸಮಾನತೆ ಇದೆ. ಪ್ರೇಮವೆಂದು ಬಂದು ನಿನ್ನನ್ನು ಕರೆದೆನಲ್ಲಾ, ಆಗ ನಾನು ಗಂಡೆಂಬುದು ನಿನಗೆ ಅರಿವಾಗಲಿಲ್ಲವೇ? ಬಾ, ನನ್ನ ದರ್ಪದ ರಥದಡಿಯಲ್ಲಿ ಧೂಳಾಗಿ ಹೊರಳು. ಅದೇ ನಿನಗೆ ಬಿಡುಗಡೆ. ಬಾ....ಬಾ....ಏನು ಬೇಕು? ಪ್ರಭಾವತೀ....ಓ....ಪ್ರಭಾವತಿ....ಸ್ವತಂತ್ರ ಬೇಕೇ, ಬಿಡುಗಡೆ ಬೇಕೇ, ಸಮಾನತೆ ಬೇಕೇ? ಬಾ....ಬೇಗ ಬಾ....' ಬಾಳ ಮಸಣದಲ್ಲಿ ಪ್ರೇಮದ ಪ್ರೇತ ಚೀರುತ್ತಾ ಅಲೆದಾಡಿತು.

'ನೀನು ಗುಲಾಮಳು, ನಿನ್ನ ಗೆಳತಿ ಕುಲಟೆ-ಬೀದಿಯ ಬಸವಿ....'

'ಪ್ರಭಾ, ನಿನ್ನ ಸ್ನೇಹ ಮಾಡಿದ್ದಕ್ಕಾಗಿ ಈ ಅಪಮಾನವೇ ನನಗೆ?'

'ಇಲ್ಲ ಇಲ್ಲ ಫ್ಲೋರಾ....ನಿನ್ನ ಅಪಮಾನವನ್ನು ನಾನು ಸಹಿಸುವುದಿಲ್ಲ, ನನ್ನ ಅಪಮಾನವನ್ನೂ ಸಹಿಸುವುದಿಲ್ಲ....'

'ಸಹಿಸುವುದಿಲ್ಲ? ಏನು ಮಾಡುತ್ತೀ?....ಹೆಣ್ಣು ಹುಳ....ನೀನೇನು ಮಾಡಬಲ್ಲೆ?'

ವಿಕಾರವಾಗಿ ಗಹಗಹಿಸಿ ಕೇಳಿತು ಗಂಡಿನ ಅಧಿಕಾರ ಧ್ವನಿ.

'ನೀನು ಹೆಣ್ಣು, ನಿನ್ನನ್ನು, ನಿನ್ನ ಗೆಳತಿಯನ್ನು, ನಿನ್ನ ಕುಲವನ್ನೇ ಅವಮಾನ ಮಾಡಬಲ್ಲೆ, ನಾನು ಗಂಡು!'

'ಇಲ್ಲ, ನಾನು ಹೆಣ್ಣಲ್ಲ. ಹೆಣ್ಣಾಗಿದ್ದೆ–ಇಂದು ನಾನು ಹೆಣ್ಣಲ್ಲ.'

'ಹೆಣ್ಣಲ್ಲವಾದರೆ ಮತ್ತೇನು?'

'ವಿದ್ರೋಹದ ದಾವಾನಲ. ಪುರುಷನ ದರ್ಪದ ಶವದಿದಿರು ಬೆಂಕಿಯ ಪಾತ್ರೆ ಹಿಡಿದು ಹೊರಟ ಶವಸಂಸ್ಕಾರಿಣಿ. ಇಂದು ನಿನ್ನ ಅಧಿಕಾರದ ಕೊನೆಯ ದಿನ.'

'ಬೇಡ, ಬೇಡ, ನನಗೆ ಬೆಂಕಿ ಇಡಬೇಡ. ನನ್ನ ತುಟಿಯ ಕಾವು, ತೋಳ ಬಿಗಿತ, ಎದೆಯ ಮೆತ್ತೆ, ತೊಡೆಯ ತೊಟ್ಟಿಲು ಇದೆಲ್ಲವೂ, ನಿನಗೆ ಬೇರೆಲ್ಲಿ ದೊರೆಯುವುದು. ಬೇಡ, ಬೇಡ, ನನಗೆ ಬೆಂಕಿ ಇಟ್ಟು ನಿನ್ನ ಬಾಳಿಗೆ ಬೆಂಕಿಯನ್ನು ಹೊತ್ತಿಸಿಕೊಳ್ಳಬೇಡ, ನಿನ್ನ ಮೈಯ ನರನರವನ್ನೂ ಕುಣಿಸಿ, ಮಣಿಸಿ ನಾನು ನೀಡುವ ತೃಪ್ತಿಗಿಂತ ಹೆಚ್ಚೇ ಈ ಸ್ವಾತಂತ್ರ್ಯ. ಬಾ, ಬಾ. ವಿದ್ರೋಹದ ಬೆಂಕಿ ಹಚ್ಚಬೇಡ ಹೆಣ್ಣೇ, ನಿನ್ನ ಚುಂಬನದ ಉರಿ ಹೊತ್ತಿಸು ನನ್ನೆದೆಯಲ್ಲಿ.'

ಹಲ್ಲು ಕಿಸಿದು, ಅವಳ ಕಾಲ ಮೇಲೆ ಹೊರಳಿ ಕೇಳಿತು ಕಾಮ.

ಸರ್ಪ ಸ್ಪರ್ಶವಾದಂತೆ ಗಡಗಡನೆ ನಡುಗಿದಳು ಪ್ರಭಾವತಿ, ಕಾಮದ ಕುಳಿಗಾಳಿ ಸೋಂಕಿ....

'ತೊಲಗಾಚೆ ಶನಿ. ನನ್ನ ಬಳಿ ಸುಳಿಯಬೇಡ.'

'ನಾನು ಬೇಡವೇ? ನೀನು ನನಗೆ ಬೇಕು ಬಾ. ಅನ್ನ ಕೊಡುತ್ತೇನೆ. ಬಟ್ಟೆ ಕೊಡುತ್ತೇನೆ. ಹಾಸಿಗೆಯಲ್ಲಿ ಸಮಪಾಲು ಕೊಡುತ್ತೇನೆ.'

'ನನಗದಾವುದೂ ಬೇಡ. ಹೊರಡು.'

'ಬೇಡವಾದರೆ, ಅನ್ನಕ್ಕೇನು ಮಾಡುತ್ತಿ?'

'ನನ್ನ ಅನ್ನ ನಾನು ದುಡಿದುಕೊಳ್ಳುತ್ತೇನೆ. ಆ ಶಕ್ತಿ ನನಗಿದೆ. ತುಟಿ ಕಚ್ಚಿ ತನಗೆ ತಾನೇ ಹೇಳಿಕೊಂಡಳು ಪ್ರಭಾವತಿ.

ಅವಳ ಮಿದುಳಿನಲ್ಲಿ ಕಡಲು ಹೆಡೆಯಪ್ಪಳಿಸುತ್ತಿತ್ತು, ಬಿರುಗಾಳಿ ಭೋರ್ಗರೆಯುತ್ತಿತ್ತು....

ಹೊರಗೆ ಬೀದಿಯಲ್ಲಿ ಕಾರುಗಳು ಹಾದು ಹೋಗುತ್ತಿದ್ದವು. ಟ್ರಾಂ ಓಡಾಡುವ ಸದ್ದು ಕೇಳುತ್ತಿತ್ತು. ಬದಿಯ ಇರಾನಿ ಹೋಟಲಿನಲ್ಲಿ ರೇಡಿಯೋ

ಹಾಡುತ್ತಿತ್ತು. ಜನ–ಹೆಂಗಸರು, ಗಂಡಸರು–ಅತ್ತಿದಿಂತ್ತ ಅಡ್ಡಾಡುತ್ತಿದ್ದರು. ಬಳೆ, ರಿಬ್ಬನ್, ಹೇರ್‌ಪಿನ್‌ಗಳನ್ನು ಹೊತ್ತ ಗಾಜಿನ ಗಾಡಿಯೊಂದು ಗಂಟೆ ಬಾರಿಸುತ್ತಾ ಹೋಯಿತು. ಮುಗಿಲಿಗೆ ಇದಿರಾಗಿ ಹರಡಿದ ವಿದ್ಯುತ್ ತಂತಿ, ಟೆಲಿಫೋನ್ ತಂತಿಗಳ ಮೇಲೆ, ಸರ್ಕಸ್ಸಿನ ಡೇರಾದಂತೆ ಬಿಗಿದಿತ್ತು ಆಕಾಶ. ಕಸದ ತೊಟ್ಟಿಯ ಬಳಿ ನಾಯಿ ಬೊಗಳುತ್ತಿತ್ತು, ಬೀದಿಯ ಬದಿಯಲ್ಲಿ ಮಲಗಿದ ಹಸು, ರಸ್ತೆಯಲ್ಲಿ ಹಾವಿನಂತೆ ಹರಿದ ಟ್ರಾಂನ ಹಳಿಗಳನ್ನು ನೋಡಿ ಮೆಲಕು ಹಾಕುತ್ತಿತ್ತು. ಎಲೆಕ್ಟ್ರಿಕ್ ರೈಲು ಕರ್ಕಶವಾಗಿ ಸಿಳ್ಳುಹಾಕಿತು. ಕಿಟಕಿಯ ಬೆಳಕು ಅರಳಿದ ನೂರು ಕಣ್ಣುಗಳನ್ನು ಹತ್ತಾರು ಅಂತಸ್ತುಗಳಲ್ಲಿ ತೆರೆದು ನೋಡುತ್ತಿದ್ದವು ಮನೆಗಳು–ನಿಶ್ಯಬ್ದವಾಗಿ. ಬೀದಿಯ ದೀಪ ತಣ್ಣಗೆ ಉರಿಯುತ್ತಿತ್ತು.

ದಿನದಂತೆಯೇ ಜಗತ್ತು ಚಲಿಸುತ್ತಿತ್ತು.

ಪ್ರಭಾವತಿಯ ಪಾದದಡಿಯಲ್ಲಿ ಅವಳ ಜಗತ್ತು ಚೊಕ್ಕಚೂರಾಗಿ ಸಿಡಿದೊಡೆದಿತ್ತು.

ತಣ್ಣನೆಯ ಇರುಳುಗಾಳಿ ಸೋಂಕಿ, ಏಟು ಬಿದ್ದೆಡೆಯಲ್ಲಿ ಅವಳ ಕೆನ್ನೆ ಉರಿಯುತ್ತಿತ್ತು–ಒಳಗೆ ಹೋದಳು ಪ್ರಭಾವತಿ.

ಅತ್ತಿಂದಿತ್ತ–ಇತ್ತಿಂದತ್ತ ಶತಪಥ ತುಳಿಯುತ್ತಿದ್ದ ಶಾಂತಾರಾಂ ಅವಳು ಒಳಗೆ ಬಂದುದನ್ನು ಕಂಡು, ಅವಳತ್ತ ತಿರುಗಿ–

"ಪ್ರಭಾ, ಇಲ್ಲಿ ಬಾ," ಎಂದ, ಅವಳ ಬಳಿ ಸರಿಯುತ್ತಾ.

"ಎಲ್ಲಿಗೆ ಬರಬೇಕು? ಏನು ಬೇಕು–ನನ್ನ ಮೈ ಬೇಕೇ? ನಿಮ್ಮ ತೋಳಿಗೆ ಬರಬೇಕೇ? ಛಿ? ದೂರ ನಿಲ್ಲಿ." ಅಣಕಿಸಿ ಅಬ್ಬರಿಸಿದಳು ಪ್ರಭಾವತಿ.

ಮಿಂಚು ಸೋಕಿದವನಂತೆ ದೂರ ಸರಿದ ಶಾಂತಾರಾಂ.

## ೨೩

ಮರು ಬೆಳಿಗ್ಗೆ ಪ್ರಭಾವತಿ ಎದ್ದಾಗ, ಶಾಂತಾರಾಂ ಮನೆಯಲ್ಲಿ ಇರಲಿಲ್ಲ. ಅವಳು ಏಳುವ ಮೊದಲೇ ಎದ್ದು ಹೊರಟು ಹೋಗಿದ್ದ.

ಮನೆ, ಅವಳ ಮನೆ, ಜೋಳಾಗಿ ಗೋಳು ಸುರಿಯುತ್ತಿತ್ತು.

ಮೋಡ ಕಟ್ಟಿ, ಬೆಳಕು ಸತ್ತು, ಚಳಿಯಡರಿ, ಆಗೊಮ್ಮೆ ಈಗೊಮ್ಮೆ ಬೀಳುವ ಹನಿ ಮಳೆಗೆ ಮೈ ನಡುಗಿಸುವ ಬರಿ ಬೀದಿಯಂತಿತ್ತು ಅವಳ ಮನೆ

ಆ ಮನೆ-ಅವಳನ್ನು ಕತ್ತು ಹಿಡಿದು ಹೊರದೂಡಲು ಹಾತೊರೆದು ತೋಳು ಚಾಚಿ, ಕಣ್ಣು ಕೆಕ್ಕರಿಸಿ ನಿಂತಂತಿತ್ತು.

ಇನ್ನು ಇದಕ್ಕೂ ತನಗೂ ಸಂಬಂಧವಿಲ್ಲ-ರಾತ್ರಿಯೇ ಆ ನಿರ್ಧಾರ ಮಾಡಿದ್ದಳು ಪ್ರಭಾವತಿ.

ತನ್ನ ಟ್ರಂಕನ್ನು ತೆಗೆದು ತನ್ನ ಬಟ್ಟೆಗಳನ್ನೆಲ್ಲಾ ತುಂಬಿಕೊಂಡಳು. ಶಾಂತಾರಾಂ ಅವಳಿಗೆಂದು ತಂದ ಒಂದೆರಡು ಸೀರೆ, ಕುಬುಸ ಕಣ್ಣಿಗೆ ಬಿದ್ದವು, ಬಟ್ಟೆ ಜೋಡಿಸುವಾಗ. ಅವನ್ನು ತೆಗೆದು, ದೂರಕ್ಕೆ ಮೂಲೆಗೆ ಒಗೆದು ಬಿಟ್ಟಳು.

ಗೋಡೆಯ ಮೇಲೆ ಅವರಿಬ್ಬರೂ ತೆಗೆಸಿಕೊಂಡ ಫೋಟೋ ತೂಗಾಡು ತ್ತಿತ್ತು.

ಎಷ್ಟು ಉತ್ಸಾಹದಿಂದ, ಎಷ್ಟು ಪ್ರೇಮದಿಂದ, ನಿಂತ ಅವನ ಮೈಗೆ ತನ್ನ ತಲೆಯೊರಗಿಸಿ ಆ ಫೋಟೋ ತೆಗೆಸಿಕೊಂಡಿದ್ದಳು.

ಆ ಫೋಟೋದ ಮೇಲೆ ಇನ್ನಿಲ್ಲದಷ್ಟು ಸಿಟ್ಟು ಬಂತು. ಗೋಡೆಯಿಂದ ಕಿತ್ತು, ನೆಲಕ್ಕೆ ರಾಚಿದಳು. ಕನ್ನಡಿಯೊಡೆದ ಕಟ್ಟಿನೊಳಗಿದ್ದ ಚಿತ್ರವನ್ನು ಕಿತ್ತು ತೆಗೆದು, ಅದರಲ್ಲಿದ್ದ ತನ್ನನ್ನೇ ನೋಡಿ-"ಛಿ ? ನಾಚಿಕೆಗೇಡಿ," ಎಂದು, ಆ ಚಿತ್ರವನ್ನು ಹರಿದು ಹಾಕಿ, ಕಾಲಲ್ಲಿ ತುಳಿದಳು.

ಮನೆಯಲ್ಲೆಲ್ಲಾ ಅಡ್ಡಾಡಿ ನೋಡಿದಳು. ಅವಳದೆನ್ನುವುದು ಮತ್ತಾವುದೂ ಇರಲಿಲ್ಲ. ಅಲ್ಲಿದ್ದ ಪಾತ್ರೆ ಪಡಗ, ಅಡಿಗೆಯ ಸಾಮಾನು, ಒಲೆ, ತಟ್ಟೆಯ ಸ್ಟ್ಯಾಂಡು-ಒಂದೊಂದೂ ಅವಳನ್ನು ನೋಡಿ ಅಣಕಿಸಿ ನಕ್ಕವು.

ಅಡಿಗೆಯ ಮನೆಯಿಂದ ಹೊರಬಂದಳು. ಟ್ರಂಕು ಅವಳೊಡನೆ ಹೊರಡಲು ಸಿದ್ಧವಾಗಿತ್ತು.

ಟಿಕ್-ಟಿಕ್-ಟಾಕ್ ಎಂದು ಸದ್ದು ಮಾಡುತ್ತಿತ್ತು, ಸದ್ದಡಗಿದ ಮನೆಯಲ್ಲಿ ಗಡಿಯಾರ-ಇನ್ನೂ ಎಂಟು ಗಂಟೆ.

ಫ್ಲೋರಾ ಇನ್ನೂ ಆಫೀಸಿಗೆ ಹೋಗುವ ಹೊತ್ತಾಗಿರಲಿಲ್ಲ. "ಹೂ. ಅವಳಿಗೂ ಹೇಳಿ ಹೋಗಬೇಕು."

"ಎಲ್ಲಿಗೆ ?"

ಇರುಳೆಲ್ಲಾ ಅವಳನ್ನು ಬಳಲಿಸಿದ ಆ ಮಾತು ನೆನಪಿಗೆ ಬಂದೊಡನೆಯೇ, ದಿಗಿಲಾಗಿ, ಅದು ಮತ್ತೆ ನೆನಪಾದರೆ, ತಾನು ಹೊರಡುವುದೇ ನಿಂತು

ಹೋದೀತೊ ಏನೋ ಎಂದು. ಆ ಯೋಚನೆಯನ್ನು ತಲೆಯಿಂದ ಕೊಚಹಿ, ಹೊರಬಂದು ಬಾಗಿಲು ಹಾಕಿ, ಫ್ಲೋರಾ ಫ್ಲ್ಯಾಟಿನತ್ತ ಹತ್ತಿದಳು.

"ಫ್ಲೋರಾ....ಫ್ಲೋರಾ...." ಮುಚ್ಚಿದ ಬಾಗಿಲನ್ನು ತಟ್ಟಿ ಕೂಗಿದಳು ಪ್ರಭಾ. ಒಳಗೆ ರೇಡಿಯೋ ಸಣ್ಣ ಧ್ವನಿಯಲ್ಲಿ ಹಾಡುತ್ತಿತ್ತು.

"ಯಾರು ?" ಒಳಗಿನಿಂದಲೇ ಕೂಗಿ ಕೇಳಿದಳು ಫ್ಲೋರಾ, ರೇಡಿಯೋ ಸದ್ದು ಮತ್ತೂ ಕಡಮೆ ಮಾಡಿ.

"ನಾನು ಪ್ರಭಾವತಿ."

"ಪ್ರಭಾವತಿ ?....ಇಷ್ಟು ಹೊತ್ತಿನಲ್ಲಿ, ಬಂದೆ ಡಿಯರ್."

ವೇಗವಾಗಿ ನಡೆದ ಹೆಜ್ಜೆ ಸದ್ದಾಗಿ, ಬಾಗಿಲು ತೆರೆಯಿತು. ಬಾಗಿಲ ಇದುರಿಗೆ ನಿಂತ ಪ್ರಭಾವತಿಯನ್ನು ಕಂಡು ಏಕೋ ಫ್ಲೋರಾಳ ಮುಖದ ಮೇಲೆ ದಿಗಿಲು ಮೂಡಿತು.

"ಇದೇನು, ಈ ಅವತಾರ? ಇನ್ನೂ ಮುಖ ತೊಳೆದಿಲ್ಲವೇ ?"

"ಅದೆಲ್ಲಾ ನಿಧಾನವಾಗಿ ಹೇಳುತ್ತೇನೆ. ಟೀ ಇದೆಯೇ ಫ್ಲೋರಾ ?" ಭಾರವಾದ, ನಿರ್ಜೀವ ಸ್ವರದಲ್ಲಿ ಕೇಳಿದಳು ಪ್ರಭಾವತಿ.

"ನಿನಗಿಲ್ಲವೇ ? ತರುತ್ತೇನೆ. ಕೂತುಕೊ," ಎಂದು ಹೇಳಿ ಫ್ಲೋರಾ ಬೇಗ ಒಳಗೆ ಹೋಗಿ, ತಟ್ಟೆ ಬಟ್ಟಲು, ಟೀ ಕೆಟಲು, ಹಾಲಿನ ಕೆಟಲು, ಸಕ್ಕರೆ ಬಟ್ಟಲನ್ನು ತಂದು, ಅವಳ ಮುಂದಿಟ್ಟು–'ಬಗ್ಗಿಸಿಕೋ,' ಎಂದು ತಾನು ಅರ್ಧ ಕುಡಿದಿಟ್ಟಿದ್ದ ಟೀ ಮುಗಿಸಿ, ಮತ್ತಷ್ಟು ಟೀ ಹಾಕಿಕೊಂಡು, ಸಿಗರೇಟು ಹೊತ್ತಿಸಿ, ಹೊಗೆಯುಗುಳುತ್ತಾ ಟೀ ಕುಡಿಯುತ್ತಿದ್ದ ಪ್ರಭಾವತಿಯ ಮುಖ ವನ್ನೇ ನೋಡುತ್ತಾ ಕುಳಿತಳು. ಪ್ರಭಾವತಿಯ ಕಳೆ ಸತ್ತ ತೊಳೆಯದ ಮುಖ, ಬಾಚದ ಕೂದಲು, ಹಿಂದಿನ ರಾತ್ರಿಯುಟ್ಟು ಹಳತಾದ ಸೀರೆ, ಟೀ ಬಗ್ಗಿಸಿ ಕೊಳ್ಳುವಾಗ ನಡುಗುವ ಕೈಗಳು ಎಲ್ಲವನ್ನೂ ನೋಡಿ, ಅವಳಿಗೆ ಸೋಫಾದ ಮೇಲೆ ಕುಳಿತಿದ್ದರೂ ಮುಳ್ಳಿನ ಮೇಲೆ ಕುಳಿತಂತಾಗಿತ್ತು.

ಪ್ರಭಾವತಿ ಒಂದೇ ಸಮನೆ ಎರಡು ಬಟ್ಟಲು ಟೀ ಕುಡಿದು, ಮತ್ತೆ ಟೀ ಬಗ್ಗಿಸಿಕೊಳ್ಳಲು ನೋಡಿದಳು. ಟೀ ಕೆಟಲು ಖಾಲಿಯಾಗಿತ್ತು.

ಕ್ಷಮಿಸು, ಫ್ಲೋರಾ. ಇನ್ನಷ್ಟು ಟೀ ಮಾಡಿಕೊಳ್ಳಲೇ ?....ಊಹೂ.... ಕಾಫಿ ಪುಡಿ ಇದೆಯೇ ? ಟೀ ಕುಡಿದರೆ ಸಮಾಧಾನವಾಗುವುದಿಲ್ಲ. ಕಾಫಿ ಬೇಕು ಎನಿಸುತ್ತದೆ."

"ಕಾಫಿ, ಟೀ ಮನೆ ಹಾಳಾಯಿತು. ಈ ದಿನ ನಿನಗೇನಾಗಿದೆ ಹೇಳು? ಆಮೇಲೆ ನಿನ್ನನ್ನು ಮುಳುಗಿಸುವಷ್ಟು ಕಾಫಿ ಕೊಡುತ್ತೇನೆ." ತನ್ನ ಕಾತರ ವನ್ನು ಹತ್ತಿಕ್ಕಲಾರದೆ ಕೇಳಿದಳು ಫ್ಲೋರಾ.

"ನನಗೇನಾಗಿದೆ! ಏನೂ ಇಲ್ಲ," ಒಣ ನಗೆ ನಕ್ಕು ಹೇಳಿದಳು ಪ್ರಭಾವತಿ.

"ಕನ್ನಡಿಯಲ್ಲಿ ನೋಡಿಕೊಂಡು ಬಳಿಕ ಆ ಮಾತು ಹೇಳು. ಏನಾಗಿದೆ–ಹೆಣವಾಗಿದ್ದೀಯ. ಏನಾಯಿತು ಡಾರ್ಲಿಂಗ್."

"ಪ್ಲೀಸ್....ಪ್ಲೀಸ್.... ಫ್ಲೋರಾ-ಸ್ವಲ್ಪ ಅವಕಾಶಕೊಡು. ನನ್ನ ತಲೆ ಸಿಡಿದುಹೋಗುತ್ತಿದೆ. ಕಾಫಿ ಇದ್ದರೆ ಕೊಡು ಫ್ಲೋರಾ. ಈಗೇನೂ ಕೇಳಬೇಡ," ತಲೆಯನ್ನು ಎರಡೂ ಕೈಗಳಲ್ಲಿ ಬಿಗಿ ಹಿಡಿದು, ಬಳಲಿಕೆಯಿಂದ ಬಿಗಿಯಾದ ಧ್ವನಿಯಲ್ಲಿ ಕೇಳಿದಳು ಪ್ರಭಾವತಿ.

ಫ್ಲೋರಾ ಮರು ಮಾತಾಡದೆ, ಒಳಗೆ ಹೋಗಿ ಸ್ಟವ್ ಮೇಲೆ ಕಾಯು ತ್ತಿದ್ದ ಹಾಲು, 'ನೆಸ್‌ಕೇಫ್' (ನೆಸಲ್ಸ್ ಕಾಫಿ ಪುಡಿ) ಡಬ್ಬ ತಂದು ಕೊಟ್ಟಳು.

ಹಾಲಿಗೆ ಸಕ್ಕರೆ, ನೆಸ್‌ಕೇಫ್ ಪುಡಿಯನ್ನು ಹಾಕಿ ಕಲಕುತ್ತಾ, ಫ್ಲೋರಾ ಮುಖದ ಕಡೆ ನೋಡದೆ, ಕ್ಷೀಣವಾದ ಧ್ವನಿಯಲ್ಲಿ ಹೇಳಿದಳು ಪ್ರಭಾವತಿ–

"ಪ್ರಾಯಶಃ ಇದು, ನಾನು ನಿನ್ನಲ್ಲಿ ಕುಡಿಯುವ ಕಡೆಯ ಕಪ್ ಕಾಫಿ, ಫ್ಲೋರಾ ಸ್ವೀಟ್."

ಕೇಳಿಯೂ ಕೇಳಿಸದಂತೆ ಪ್ರಭಾವತಿ ಹೇಳಿದ ಮಾತು ಬರಸಿಡಿಲಿನಂತೆ ಬಿತ್ತು ಫ್ಲೋರಾ ಕಿವಿಯ ಮೇಲೆ.

"ಏನು, ಏನು ಹಾಗೆಂದರೆ?" ಉದ್ವಿಗ್ನಳಾಗಿ ಕೇಳಿದಳು ಫ್ಲೋರಾ.

"ಇಲ್ಲಿಂದ ಹೊರಟು ಹೋಗಲು ನಿರ್ಧರಿಸಿದ್ದೇನೆ."

"ಏನು?"

ಕುಳಿತಿದ್ದ ಸೋಫಾದಿಂದ ಹಾರಿಬಿದ್ದು, ಪ್ರಭಾವತಿಯ ಭುಜಗಳನ್ನು ಹಿಡಿದು ಬಲವಾಗಿ ಅಲುಗಿಸುತ್ತ, ಉಸಿರು ಹತ್ತಿ ಬಂದ ಧ್ವನಿಯಲ್ಲಿ ಫ್ಲೋರಾ ಚೀರಿದಳು–

"ಏನು, ಏನು ಇದರ ಅರ್ಥ?"

"ಉಸಿರಾಡಿಸಿಕೊಳ್ಳಲು ಅವಕಾಶ ಕೊಡು, ಹೇಳುತ್ತೇನೆ."

"ಬೇಗ ಹೇಳು, ಸಂದಿಗ್ಧದಲ್ಲಿಟ್ಟು ನನ್ನನ್ನು ಕೊಲ್ಲಬೇಡ."

"ಎಲ್ಲಾ ಮುಗಿದುಹೋಯಿತು ಫ್ಲೋರಾ–ನನ್ನ ಸಂಸಾರ ನಾಟಕ ಮುಕ್ತಾಯವಾಯಿತು, ನನ್ನ ಕನಸು ಸಿಡಿದುಹೋಯಿತು."

ವಿಷಾದ ತುಂಬಿ ತುಳುಕುವ ಧ್ವನಿಯಲ್ಲಿ ತನ್ನೆದೆಯ ವ್ಯಥೆಯನ್ನೇ ಮಾತಾಗಿ ತೋಡಿಕೊಂಡಂತೆ ಹೇಳಿದಳು. ಸಾಲು ಸಾಲಾಗಿ ಸಿಡಿಲಪ್ಪಳಿಸಿದಂತಾಯಿತು ಫ್ಲೋರಾಗೆ. ದಿಗ್ಭ್ರಾಂತಳಾದಳು.

"ಹನಿ. ನಿನ್ನೆ ರಾತ್ರಿ ನೀನೆಷ್ಟು ಸಂತೋಷವಾಗಿದ್ದೆ. ಈಗ ಇದೇನು ದುರ್ವಾರ್ತೆ. ನನ್ನ ಕಿವಿಯನ್ನೇ ನಾ ನಂಬಲಾರೆ. ಇಷ್ಟರೊಳಗೆ ಅದೇನಾಯಿತು ಪ್ರಭಾ ಡಾರ್ಲಿಂಗ್, ದಯವಿಟ್ಟು ವಿವರವಾಗಿ ಹೇಳು, ನನ್ನೆದೆ ಸಿಡಿದು ಹೋಗುತ್ತಿದೆ." ವಿಹ್ವಲಳಾಗಿ ಅಂಗಲಾಚಿದಳು ಫ್ಲೋರಾ.

"ನೀನೂ ಇಷ್ಟು ಉದ್ವಿಗ್ನಳಾಗಿಬಿಟ್ಟರೆ ಹೇಗೇ ಫ್ಲೋರಾ ಡಿಯರ್. ನೀನೇ ನನ್ನ ಭರವಸೆಯ ಅಚಲ ಶಿಲೆ."

"ಆದಾಗಲಿ. ಈಗ ಏನಾಯಿತೆಂದು ಹೇಳು."

ಏನು ಹೇಳಬೇಕೆಂದು ಯೋಚಿಸುತ್ತಾ, ಸೋಫಾಕ್ಕೆ ಒರಗಿ ನೀಳವಾಗಿ ಮೈ ಚಾಚಿ ಬೆರಳುಗಳಿಂದ ಮುಚ್ಚಿದ ಕಣ್ಣು ಬಿಗಿ ಹಿಡಿದು, ಹಿಂದಿನ ರಾತ್ರಿ ಸಿನಿಮಾದಿಂದ ಬಂದ ನಂತರ ನಡೆದುದೆಲ್ಲವನ್ನೂ ಒಂದು ಮಾತೂ ಬಿಡದೆ ಹೇಳಿದಳು. ಹೇಳಹೇಳುತ್ತಾ, ಅವಳೂ ಉದ್ವಿಗ್ನಳಾಗಿ, ಸೋಫಾದಲ್ಲಿ ಸೆಟೆದು ಕುಳಿತು ಹೇಳಿದಳು ಪ್ರಭಾವತಿ–

"ಒಂದೇಟು–ಒಂದೇ ಒಂದು ಏಟನಿಂದ, ನನ್ನ ಬಾಳು, ಕನಸು, ಬಯಕೆ, ಪ್ರೇಮ, ನಂಬಿಕೆ ಎಲ್ಲವನ್ನೂ ಪುಡಿ ಪುಡಿ ಮಾಡಿದ. ನನ್ನ ಬಾಳ ಬಳ್ಳಿಗೆ ಬೆಂಕಿ ಹಚ್ಚಿಬಿಟ್ಟ. ನನ್ನ ಕನಸಿನ ಕುಡಿಯನ್ನೇ ಕಮರಿಸಿಬಿಟ್ಟ. ಹೊರಟುಹೋಗುತ್ತೇನೆ ಫ್ಲೋರಾ. ಇನ್ನೊಂದು ಗಳಿಗೆಯೂ ಇಲ್ಲಿರಲಾರೆ. ದೂರ, ಬಹು ದೂರ–ಎಲ್ಲಾದರೂ ಹೊರಟು ಹೋಗುತ್ತೇನೆ. ಆ ಮನೆ ಇನ್ನು ನನ್ನ ಪಾಲಿಗೆ ಮಸಣ. ಇದನ್ನೇ ನಿನಗೆ ಹೇಳಿ ಹೋಗೋಣವೆಂದು ಬಂದೆ."

ಪ್ರಭಾವತಿ ಹೇಳಿದುದನ್ನು ಕೇಳಿ ಫ್ಲೋರಳ ಮುಖ ಬಿರುಗಾಳಿಯ ಮೋಡಗಳಿಂದ ಉಗ್ರವಾಗಿ, ಅಸ್ತಮಯದ ರಕ್ತಕಾಂತಿಯಿಂದ ಭಯಾನಕವಾದ ಮುಗಿಲು ಬಿಂಬಿಸಿದ ಪ್ರಕ್ಷುಬ್ಧ ಕಾಳ ಕಡಲಿನಂತಾಗಿತ್ತು. ಎದೆ ತುಯ್ದು

ಉಸಿರು ಭೋರ್ಗರೆಯುತ್ತಿತ್ತು. ಕ್ರೋಧವಿಕಾರವಾದ ಅವಳ ಸುಂದರ ಮೊಗದಲ್ಲಿ, ಕಣ್ಣುಗಳೆರಡೂ ಕೆಂಡದುಂಡೆಗಳಂತೆ ಹೊಳೆಯುತ್ತಿದ್ದವು. ಮಾತನಾಡದೆ ಎದ್ದುಹೋಗಿ, ಪ್ರಭಾವತಿಯನ್ನು ತಬ್ಬಿಕೊಂಡಳು. ಅವಳ ವಕ್ಷಸ್ಥಲಕ್ಕೆ ಮೊಗ ವೊತ್ತಿದ್ದ ಪ್ರಭಾವತಿಯ ಕಿವಿಗೆ, ಅವಳ ಮೈಯಲ್ಲಿ ರಕ್ತ ಭೋರ್ಗರೆದು, ಹೃದಯ ತಾಂಡವ ಡಮರುವಿನಂತೆ ಬಡಿಯುತ್ತಿರುವುದು ಕೇಳಿಸಿತು.

"ಎಂದು ಕೊನೆ, ಎಂದು ಕೊನೆ, ಈ ದಬ್ಬಾಳಿಕೆ, ಈ ಚಿತ್ರಹಿಂಸೆ, ಈ ಪಶುರೀತಿಗೆ ಎಂದು ಕೊನೆ?" ಎಂದ ಹಲ್ಲು ಮಸೆಯುತ್ತಾ ತನ್ನನ್ನು ತಾನೇ ಕೇಳಿಕೊಂಡಳು ಫ್ಲೋರಾ–

"ಹೆಣ್ಣು ಹೂಗಳಿಗೆಲ್ಲಾ ಗಂಡಿನ ಅಗ್ನಿಕುಂಡವೇ ಸಮಾಧಿ ಯಾಗಬೇಕೇ?"

"ಈ ಸುಖಕ್ಕೆ, ಈ ಭಾಗ್ಯಕ್ಕೆ, ಈ ಭವ್ಯ ಜೀವನಕ್ಕೆ ನಾನೇನು ಬಲಿ ಗೊಟ್ಟೆನೆಂದು ನೀನರಿಯೆ ಫ್ಲೋರಾ. ಎಷ್ಟು ದೂರ ಇವನನ್ನು ನಂಬಿ, ನನ್ನದೆನ್ನುವುದೆಲ್ಲಕ್ಕೂ ಬೆಂಕಿ ಇಟ್ಟು ಬಂದೆನೆಂದು ನೀನು ಕಾಣೆ...." ವಿಹ್ವಲತೆಯ ಉರಿ ಹಿಡಿಯಲ್ಲಿ ಚಡಪಡಿಸುತ್ತಾ ಹೇಳಿದಳು ಪ್ರಭಾವತಿ.

"ಎಲ್ಲವನ್ನೂ ಒಮ್ಮೆ ಹೇಳಿ ಎದೆ ಭಾರ ಕಡಿಮೆ ಮಾಡಿಕೋ ಪ್ರಭಾ ಡಾರ್ಲಿಂಗ್. ಹೇಳಿಬಿಡು, ಇನ್ನೇನು ಕಂಬನಿಯ ಕಥೆಯನ್ನು ಹೇಳುವು ದಿದೆಯೋ ಎಲ್ಲವನ್ನೂ ಹೇಳಿಬಿಡು–"

"ಇವನನ್ನು ನಾನು ನಂಬಿದೆ ಫ್ಲೋರಾ, ಇವನ ಪ್ರೇಮವನ್ನು ನಂಬಿದೆ. ಅದಕ್ಕಾಗಿ ಎಲ್ಲವನ್ನೂ ಎದುರಿಸಿ ಬಂದೆ–" ಎಂದು ಪ್ರಭಾವತಿ ತನ್ನ ಬಾಳಿನ ಕತೆಯೆಲ್ಲವನ್ನೂ ಹೇಳಿ–

"ಆಗಾಗ, ಆಗಾಗ ಇವನ ಠೇಂಕಾರದ ಮನೋಭಾವ ಕಾಣುತ್ತಿತ್ತು. ಲೀಲಾವತಿಯ ಮಾತಿಲ್ಲವಾದರೆ, ಎಂದೋ ಇಂದಾದುದಾಗಬೇಕಾಗಿತ್ತು. ಆದರೆ ಲೀಲಾವತಿ ಕೈತಡೆದಳು." ಎಂದು ಹೇಳಿ, ತನಗೆ ಸಿಟ್ಟು ಬಂದಾಗ, ಲೀಲಾವತಿ ಹೇಳಿದುದನ್ನೆಲ್ಲಾ ಹೇಳಿ–

"ಲೀಲಾವತಿಯನ್ನು ನೀನು ಕಾಣೆ ಫ್ಲೋರಾ. ಆಕೆ ದೇವತೆ, ನನ್ನ ಬಾಳಿನ ದೀಪಸ್ತಂಭ. ಆಕೆಗಾಗಿ ಇಷ್ಟು ದಿನ ಎಲ್ಲವನ್ನೂ ಸಹಿಸಿದೆ. 'ನೀವಿಬ್ಬರೂ ಸುಖವಾಗಿರಬೇಕೆಂಬುದೊಂದೇ ನನ್ನ ಬಾಳ ಹಂಬಲ' ಎಂದು ಕಣ್ಣೀರಿಟ್ಟು ಹೇಳಿ, ಈ ಮಂಗಳಸೂತ್ರ ಕಟ್ಟಿಸಿದಳು ಆ ತಾಯಿ. ಈ ಸಂಸಾರ

ಸಿಡಿದರೆ, ಆಕೆಯ ಎದೆ ಒಡೆಯುವುದೆಂದು, ಇಷ್ಟು ದಿನ ಸಹಿಸಿದೆ ಫ್ಲೋರಾ. ನಾನಿನ್ನು ಇದನ್ನು ಸಹಿಸಲಾರೆ. ಸಹಿಸಲಾರೆ ಫ್ಲೋರಾ, ಒಂದು ಗಳಿಗೆಯೂ ಸಹಿಸಲಾರೆ. ಎಲ್ಲರ ಬಯಕೆಗೂ ಕಿಚ್ಚಿಟ್ಟುಬಿಟ್ಟ ಪಾಪಿ. ಇನ್ನವನ ಹಂಗಿನ ಕೂಳು ತಿಂದು ನಾನು ಬದುಕಲಾರೆ," ಎಂದು ಸಹಿಸಲಾಗದ ದುಃಖದ ಬೇಗೆಯಲ್ಲಿ, ಉರಿಗೆ ಸಿಕ್ಕ ಪಶು ಚಡಪಡಿಸುವಂತೆ ಚಡಪಡಿಸಿದಳು ಪ್ರಭಾವತಿ.

"ಸಿಡಿಲುಗಳು ಹೂವುಗಳಿಗೇ ಏಕೆ ಬಡಿಯಬೇಕೋ, ದೇವರ ಮೋರೆಗಿಷ್ಟು ಬೆಂಕಿ ಹಾಕ," ಎಂದಳು ಫ್ಲೋರಾ ಕರ್ಕಶವಾಗಿ.

ಪ್ರಭಾವತಿಯ ಕಥೆಯನ್ನು ಕೇಳಿ ಫ್ಲೋರಾ ಮುಖದಲ್ಲಿ ಕಾಂತಿಯೆಲ್ಲವೂ ಮಾಯವಾಗಿ, ಮುಖ ಬಿಳಚಿಕೊಂಡಿತ್ತು. ಕಣ್ಣುಗಳೆರಡೂ ಕಂಬನಿಯ ಕೋಡಿಯಾಗಿ, ಕೆನ್ನೆಗಳ ಮೇಲೆ ಕಣ್ಣೀರಿನ ಕರೆಗಟ್ಟಿತ್ತು. ಅಷ್ಟು ಹೊತ್ತು ಸುಮ್ಮನೆ ಕುಳಿತು ಸಿಗರೇಟು ಸೇದಿ ಬಳಿಕ ಕೇಳಿದಳು–

"ಈಗ ಮುಂದೇನು ಮಾಡಬೇಕೆಂದಿದೀಯ ಪ್ರಭಾ?"

"ಇನ್ನೂ ಯಾವುದನ್ನೂ ನಿರ್ಧರಿಸಿಲ್ಲ. ಏನಾದರೂ ಕೆಲಸ ನೋಡಬೇಕೆಂದಿದೇನೆ."

"ಇನ್ನೂ ನೀನಾವುದನ್ನೂ ನಿರ್ಧರಿಸದಿರುವುದೇ ಒಳಿತಾಯಿತು. ನನ್ನ ಮಾತು ಕೇಳಿ ಒಂದು ಕೆಲಸ ಮಾಡುತ್ತೀಯಾ?"

"ಏನು?"

"ಈಗ ನೀನು ಹೋಗಿ ಲೀಲಾವತಿಯ ಮನೆಯಲ್ಲಿರು. ಆಕೆಗೂ ನಡೆದುದನ್ನು ಹೇಳು...."

"ನಾನಲ್ಲಿಗೆ ಹೋಗಲಾರೆ ಫ್ಲೋರಾ. ಯಾವ ಮೋರೆ ಇಟ್ಟುಕೊಂಡು ಹೋಗಲಿ! ಊಹೂ – ನಾನಲ್ಲಿಗೆ ಹೋಗಲಾರೆ."

"ಬೇಡ, ಹಾಗಾದರೆ ಇಲ್ಲಿರು. ನಾನೇ ಆಕೆಯನ್ನು ಇಲ್ಲಿಗೆ ಕರೆತರುತ್ತೇನೆ."

"ಈಗ ಬೇಡ ಫ್ಲೋರಾ. ಮೊದಲೆಲ್ಲಾದರೂ ಒಂದು ನೌಕರಿ ನೋಡಿಕೊಡು. ನನ್ನ ಕಾಲ ಮೇಲೆ ನಿಂತು, ಬಳಿಕ ಹೋಗಿ ಅವಳನ್ನು ನೋಡುತ್ತೇನೆ."

"ನೌಕರಿ! ಬೊಂಬಾಯಿ ಎಂಥ ಭಯಂಕರ ಪಟ್ಟಣವೆಂದು ನೀನರಿಯೆ ಪ್ರಭಾ. ನೀನು ತೀರ ಮುಗ್ಧೆ. ಏನು ಬೇಕಾದರೂ ಮಾಡು. ಎಲ್ಲಿಗಾದರೂ

ಹೋಗು. ಆದರೆ ಇಲ್ಲಿ ನೌಕರಿ ಹುಡುಕುತ್ತೇನೆನ್ನಬೇಡ. ಇದು ನಗರವಲ್ಲ, ಹುಲಿಯ ಬಾಯಿ. ಇದು ನನ್ನಂಥವರಿಗೆ ಸರಿ – ನಿನ್ನಂಥ ಸುಮಜೀವಿಗಳಿಗಲ್ಲ."

"ಅಂಥ ಭಯವೇನು ಬಂತು ಫ್ಲೋರಾ. ನೀನಿಲ್ಲವೇ?"

"ನಾನಿರುವ ಪರಿಯನ್ನು ನೀನರಿಯೆ. ನನ್ನಂತೆ ನೀನು ಇರಲಾರೆ. ಹಾಗಿರಲು ಬಯಸಿ ಬಂದ ಜೀವವೊಂದರ ದುರಂತ ಪಾಡು ಏನಾಯಿತೆಂದು ನಾನು ಬಲ್ಲೆ ಪ್ರಭಾ – ಅದನ್ನು ನೆನೆದರೆ ಈಗಲೂ ನನ್ನ ಮೈ ನಡುಗುತ್ತದೆ. ಓ! ಮೀನಾಕ್ಷಿ – ಎಂಥ ಅಪರೂಪ ಜೀವ – ಹೂವಿನಂಥ ಹುಡುಗಿ. ಈ ಬೊಂಬಾಯಿಗೆ ಬೆಂಕಿ ಹಚ್ಚಬೇಕು ಪ್ರಭಾ, ಡೈನಾಮೆಟ್ ಇಟ್ಟು ಉಡಾಯಿಸಿಬಿಡಬೇಕು –" ಹಸಿದ ಹುಲಿಯಂತೆ ಅತ್ತಿಂದಿತ್ತ ಅಲೆಯುತ್ತಾ ಬೆಲೆ ಬಾಳುವ ರಗ್ಗಿನ ಮೇಲೇ ಉರಿವ ಸಿಗರೇಟನ್ನು ಹೊಸಗಿ ಹೇಳಿದಳು ಫ್ಲೋರಾ.

"ಆಕೆಗೆ ಏನಾಯಿತು?" ಕುತೂಹಲ ಕೆರಳಿ ಕೇಳಿದಳು ಪ್ರಭಾವತಿ.

"ಏನಾಯಿತೇ – ಕಡಲ ಸಮಾಧಿಯಾಯಿತು. ಆ ಹೂವನ್ನು ಹಿಸುಕಿ ಬಿಟ್ಟಿತು ಬೊಂಬಾಯಿ."

"ಯಾರಾಕೆ ಫ್ಲೋರಾ? ಏನಾಯಿತು ಹೇಳಬಾರದೇ?"

"ನಿಜ, ನೀನೂ ತಿಳಿದುಕೋ. ಕೇಳಲು ಇದು ಸರಿಯಾದ ಸಮಯ. ನಿನ್ನಂಥ ಸುಂದರವಾದ ಆತ್ಮ ಮೀನಾಕ್ಷಿ." ಎಂದು ಮತ್ತೊಂದು ಸಿಗರೇಟು ಹೊತ್ತಿಸಿ ಹೇಳಿದಳು ಫ್ಲೋರಾ –

"ಮೀನಾ ಪೂನಾದ ಫರ್ಗುಸನ್ ಕಾಲೇಜಿನಲ್ಲಿ ನನ್ನ ಜೊತೆಯಲ್ಲಿಯೇ ಓದುತ್ತಿದ್ದಳು. ತುಂಬಾ ಶಾಂತಸ್ವಭಾವದವಳು. ಒಂದು ಗದ್ದಲ ಗಲಾಟೆಗೆ ಹೋದವಳಲ್ಲ. ಒಂದು ಸಿಟ್ಟೇ, ಸೆಡಕೇ – ಒಂದೂ ಕೇಳಬೇಡ. ತಾನಾಯಿತು, ತನ್ನ ಓದಾಯಿತು. ಹುಡುಗರಿರಲಿ, ನಾವೇ ಅವಳನ್ನು ಎಷ್ಟೋ ಸಲ ರೇಗಿಸುತ್ತಿದ್ದೆವು. ಒಂದು ಸಲವಾದರೂ ಪ್ರತಿ ರೇಗಬೇಕಲ್ಲ – ಆ ಜೀವ. ಅವಳ ಆ ಗುಣವನ್ನು ಕಂಡೇ, ನನಗವಳ ಮೇಲೆ ಪ್ರೀತಿ ಬೆಳೆಯಿತು.

"ನಾನು ನನ್ನ ಓದು ಮುಗಿಸಿ, ಡಿಗ್ರಿ ತೆಗೆದುಕೊಂಡು ಬಂದು, ಕೆಲಸ ಹುಡುಕಿಕೊಂಡು ಬೊಂಬಾಯಿಗೆ ಬಂದೆ. ಬಂದ ನಾಲ್ಕೈದು ತಿಂಗಳ ಮೇಲೆ ಒಮ್ಮೆ ಮೀನಾಕ್ಷಿಯಿಂದ ಇದ್ದಕ್ಕಿದ್ದ ಹಾಗೇ ಕಾಗದ ಬಂತು – 'ಬೊಂಬಾಯಿಗೆ ಬರುತ್ತೇನೆ. ಸ್ಟೇಷನ್ನಿಗೆ ಬಾ. ಯಾರಿಗೂ ಇದನ್ನು ಹೇಳಬೇಡ' ಎಂತ.

ನಾನೇ ಸ್ಟೇಷನ್ನಿಗೆ ಹೋಗಿ ಅವಳನ್ನು ಕರೆದುಕೊಂಡು ಬಂದೆ. ನನ್ನ ರೂಮಿನಲ್ಲೇ ಉಳಿದಳು."

"ಇದೇ ಮನೆಯಲ್ಲೇ?"

"ಊಹೂ. ನಾನಾಗ ಪರೇಲ್‌ನಲ್ಲಿ ಒಂದು ಸಣ್ಣ ಕೋಣೆ ಮಾಡಿಕೊಂಡಿದ್ದೆ. ಆಗ ಈಗಿನ ಕೆಲಸ, ಸಂಬಳ ಯಾವುದೂ ಇರಲಿಲ್ಲ. ಇದ್ದಿದ್ದರೆ ಮೀನಾಕ್ಷಿ ಹಾಗಾಗಲು ಬಿಡುತ್ತಿರಲಿಲ್ಲ."

"ಸರಿ. ಮುಂದೆ?"

"ಎರಡು ದಿನವಾದರೂ ಅವಳು ರೂಂ ಬಿಟ್ಟು ಕದಲಲಿಲ್ಲ. ತಾನಿರುವುದನ್ನು ಯಾರಿಗೂ ಹೇಳಬಾರದೆಂದು ಕಟ್ಟಪ್ಪಣೆ ಮಾಡಿದ್ದಳು. ನಾನೇ ಕೇಳಿದೆ 'ಇದೇನು ಮುಚ್ಚುಮರೆ. ಹೀಗೆ ಬೊಂಬಾಯಿಗೆ ಬಂದದ್ದೇಕೆ?' ಎಂತ. 'ನೌಕರಿ ಹುಡುಕಿಕೊಂಡು ಬಂದಿದ್ದೇನೆ ಫ್ಲೋರಿ. ಮನೆಯಲ್ಲಿ ಯಾರಿಗೂ ಗೊತ್ತಾಗದಂತೆ ಬಂದಿದೇನೆ' ಎಂದಳು. 'ಅದೇಕೆ ಹಾಗೆ ಬಂದೆ?' ಎಂದದ್ದಕ್ಕೆ, ಹಾಗೆ ಬಂದ ಕಾರಣ ಹೇಳಿದಳು. ಮೀನಾ ದೊಡ್ಡ ಸಂಸಾರದ ಮನೆಯ ಹುಡುಗಿ. ಅವಳ ತಂದೆ ಯಾವುದೋ ಅಂಗಡಿಯಲ್ಲಿ ಮ್ಯಾನೇಜರಾಗಿದ್ದರು. ಸಂಬಳ ಹೆಚ್ಚಾಗಿಯೇ ಬಂದರೂ ಸಂಸಾರಕ್ಕೆ ಸಾಲುತ್ತಿರಲಿಲ್ಲ. ಮೀನಾನೇ ದೊಡ್ಡಮಗಳು, ಅವಳ ಹಿಂದೆ, ಇಬ್ಬರು ತಂಗಿಯರು, ಮೂವರು ತಮ್ಮಂದಿರಿದ್ದರು. ಮೀನಾ ಮೇಲೆ ಆಕೆಯ ತಂದೆಗೆ ತುಂಬಾ ಪ್ರೇಮ. ಮಗಳಿಗೆ ಯಾವುದನ್ನೂ ಕಡಿಮೆ ಮಾಡಲಿಲ್ಲ. ತುಂಬ ಪ್ರೀತಿಯಿಂದ ಬೆಳಸಿದರು. ಸಂಗೀತ ಹೇಳಿಸಿದರು. ಅವಳು ಕೇಳಿದ್ದನ್ನು ತೆಗೆದು ಕೊಡುತ್ತಿದ್ದರು. ಹಾಗೇ ಬೆಳೆದು ದೊಡ್ಡವಳಾದಳು ಮೀನಾ. ಅವಳ ತಂದೆಯ ತಾಯಿ ಬದುಕಿ ಮನೆಯಲ್ಲಿದ್ದರು. ಮೀನಾ ವಯಸ್ಸಿಗೆ ಬಂದ ಕೂಡಲೇ ಮೊಮ್ಮಗಳ ಮದುವೆ ಮಾಡು ಎಂದು ಮಗನಿಗೆ ಗಂಟು ಬಿದ್ದಳು. ನಿಮ್ಮ ಸಮಾಜದಲ್ಲಿ ಮದುವೆ ಎಂದರೆ ಏನೆಂದು ನಿನಗೆ ಗೊತ್ತಲ್ಲ. ಏನೆಂದರೂ ನಾಲ್ಕೈದು ಸಾವಿರ ರೂಪಾಯಿನ ವೆಚ್ಚ. ಅಷ್ಟು ಹಣವಿಲ್ಲದೆ, ಈ ವರ್ಷ ನೋಡೋಣ, ಮುಂದಿನ ವರ್ಷ ನೋಡೋಣ ಎಂದು ಮದುವೆಯನ್ನು ಮುಂದಕ್ಕೆ ತಳ್ಳುತ್ತಾ, ಅದಾಗುವವರೆಗೂ ಮಗಳು ಸುಮ್ಮನೆ ಮನೆಯಲ್ಲಿರುವುದೇಕೆಂದು ಓದಿಸಿದರು. ಇಂಟರ್ ಮುಗಿದ ವರ್ಷ, ಆ ವರ್ಷ ಅವಳ ಮದುವೆ ಮಾಡಲೇಬೇಕೆಂದು ಮುದುಕಿ ಗಂಟು ಬಿದ್ದಳು.

"ಮೀನಾ ತಂದೆ, ಅಲ್ಲಲ್ಲಿ ಗಂಡು ಹುಡುಕಿದರು. ಎಲ್ಲಿ ಹೋದರೂ ವರದಕ್ಷಿಣೆಯ ಪಿಡುಗು. ಕಡೆಗೊಂದು ಒಳ್ಳೆಯ ಗಂಡು ಕಾಣಿಸಿತು. ಆದರೆ ಗಂಡು ಎರಡು ಸಾವಿರ ವರದಕ್ಷಿಣೆ, ಮುಂದಿನ ಓದಿನ ವೆಚ್ಚಕ್ಕೆ ಸಾವಿರ ಎಲ್ಲಾ ಕೇಳಿದ. ಮುದುಕಿ ಅಷ್ಟು ಕೊಟ್ಟರೂ ಸರಿ. ಒಳ್ಳೆ ಸಂಬಂಧ ತಪ್ಪಿಸುವುದು ಬೇಡ' ಎಂದರು. ಮೀನಾ ತಾಯಿಯೂ ಹಾಗೇ ಹೇಳಿದರಂತೆ. ಆದರೆ ತಂದೆ '[illegible] ಅಷ್ಟು ಹಣ ಎಲ್ಲಿದೆ? ಸಾಲ ಮಾಡಬೇಕು. ನಾಲ್ಕಾರು ಸಾವಿರ ರೂಪಾಯಿ ಸಾಲ ತೀರುವುದರೊಳಗೆ, ಅದಕ್ಕೆ ಬಡ್ಡಿ ನಾಲ್ಕು ಸಾವಿರ ಕೊಡಬೇಕಾಗುತ್ತೆ. ಮುಂದೆ ಇನ್ನೂ ಎರಡು ಹೆಣ್ಣು ಮಕ್ಕಳಿವೆ, ಓದುವ ಹುಡುಗರಿದಾರೆ. ಈ ಮದುವೆಗೆ ಇಷ್ಟು ಸಾಲ ಮಾಡಿ ಅವರೆಲ್ಲರನ್ನ ಭಿಕ್ಷೆಗೆ ಅಟ್ಟಲೇ? ಎಂದು ಗೋಳಾಡಿದರಂತೆ.

"ಆದರೆ ಮೀನಾ ಮುಂದೆ ಅವರು ಇದಾವುದನ್ನೂ ಹೇಳಲಿಲ್ಲ. ಒಮ್ಮೆ ಅವರು ಮಾತಾಡುತ್ತಿರುವಾಗ ಮರೆಯಲ್ಲಿ ನಿಂತು ಕೇಳಿಸಿಕೊಂಡಳು ಮೀನಾ. ತಂದೆ ಹೇಳಿದುದನ್ನು ಕೇಳಿ, ಅವಳ ಮೈ ನಡುಗಿತು. ತನ್ನೊಬ್ಬಳ ಮದುವೆಗಾಗಿ ಇಡೀ ಸಂಸಾರ ಕಾಡುಪಾಲಾಗಬೇಕೇ? ತಂಗಿಯರು, ತಮ್ಮಂದಿರ ಭವಿಷ್ಯ ಕತ್ತಲಾಗಬೇಕೇ? ತಂದೆ ಸಾಲಗಾರ ಬಡ್ಡಿಯ ಎತ್ತಾಗಿ ದುಡಿಯಬೇಕೇ? ಅವರು ತನ್ನನ್ನು ಪ್ರೀತಿಯಿಂದ ಬೆಳಸಿದುದರ ಪರಿಣಾಮ ಈ ದುರಂತವಾಗಬೇಕೇ?

"ಇದೇ ಯೋಚನೆಯೇ ಆಯಿತು ಅವಳಿಗೆ. ತಾನು ಕಣ್ಣೆದುರಿಗಿದ್ದರೆ, ಈ ಮದುವೆಯ ಭೂತ ಅವರ ಬೆನ್ನನ್ನು ಬಿಡುವುದಿಲ್ಲವೆಂದರಿತು, ತನ್ನ ಬಾಳು ಹೇಗಾದರಾಗಲಿ, ಅವರೆಲ್ಲಾ ಸುಖವಾಗಿರಲಿ ಎಂದು, ನನಗೆ ಕಾಗದ ಬರೆದು, ಅವರಿಗೆ ಹೇಳದೆ ಕೇಳದೆ ಬೊಂಬಾಯಿಗೆ ಬಂದಿಳಿದಳು. 'ಇಲ್ಲಿ ಯಾವುದಾದರೂ ಕೆಲಸ ಕೊಡಿಸು. ನನ್ನ ಕಾಲ ಮೇಲೆ ನಾನು ನಿಂತು, ಬಳಿಕ ನಾನಿಲ್ಲಿರುವುದನ್ನು ಅವರಿಗೆ ತಿಳಿಸುತ್ತೇನೆ. ನಾಲ್ಕು ದಿನ ಅವರು ನೊಂದುಕೊಳ್ಳುತ್ತಾರೆ. ಆದರೇನು, ನಾಲ್ಕು ದಿನವಾದ ಮೇಲೆ ಅವರೂ ಸಮಾಧಾನಕ್ಕೆ ಬರುತ್ತಾರೆ. ಮನೆಯೂ ಉಳಿಯುತ್ತದೆ' ಎಂದಳು. ನನಗೂ ಆಗ ಹೊಸದಾಗಿ ಕೆಲಸದಲ್ಲಿದ್ದ ಹುರುಪು. ಅಲ್ಲದೆ ಅವಳ ಸಾಹಸ, ಅದರ ಹಿಂದಿನ ಸದಾಶಯವನ್ನು ಕಂಡು ಹೆಮ್ಮೆಯೂ ಆಯಿತು. 'ಆಗಲಿ, ಇರು' ಎಂದೆ.

"ಹತ್ತು ಹದಿನೈದು ದಿನ ನಾನು – ಅವಳು ಇಬ್ಬರೂ ಒಂದಾಗಿ ಚಾಕರಿ ಹುಡುಕಿದೆವು. ಸಿಗಲಿಲ್ಲ. ಒಂದು ದಿನ ಸಂಜೆ ಇಬ್ಬರೂ ಬೇಸರನಾಗಿ, ರೆಸ್ಟುರಾದಲ್ಲಿ ಚಾ ಕುಡಿಯುತ್ತಾ ಕುಳಿತಿರುವಾಗ, 'ಶಾಂತಾ ಸ್ಟೂಡಿಯೋಸ್'ನಲ್ಲಿ ಕೆಲಸಕ್ಕಿದ್ದ ಮಿತ್ರನೊಬ್ಬ ಅಕಸ್ಮಾತ್ತಾಗಿ ಸಿಕ್ಕಿ, ಮೀನಾಕ್ಷಿಯನ್ನು ಕಂಡು ಯಾರು ಎಂದು ವಿಚಾರಿಸಿದ. ಹೀಗೇ ಎಂದು ಅವಳ ವಿಚಾರವನ್ನೆಲ್ಲಾ ತಿಳಿಸಿ, 'ನಿನ್ನ ಸ್ಟುಡಿಯೋದಲ್ಲಿ ಯಾವುದಾದರೂ ಕೆಲಸವಿದ್ದರೆ ಕೊಡಿಸು' ಎಂದೆ. 'ನಿನ್ನ ಸ್ನೇಹಿತಳಿಗೆ ರೂಪವಿದೆ, ಸಂಗೀತ ಬರುತ್ತದೆ. ಡೈರೆಕ್ಟರಿಗೆ ಹೇಳಿ, ಯಾವುದಾದರೂ ಚಿತ್ರದಲ್ಲಿ ಕೆಲಸ ಕೊಡಿಸುತ್ತೇನೆ' ಎಂದ. ನಾಲ್ಕು ದಿನ ಕಳೆದ ಮೇಲೆ ಕೆಲಸ ಕೊಡಿಸಿದ ಶಾಸ್ತ್ರ ಮಾಡಿದ. ಆಗ ಮೀನಾಕ್ಷಿಗಾದ ಸಂತೋಷವನ್ನು ನೋಡಬೇಕಿತ್ತು ಪ್ರಭಾ -- ಇಟ್ ವಾಸ್ ಎ ಸೈಟ್ ಫಾರ್ ಗಾಡ್ಸ್ (ದೇವತೆಗಳೂ ತಣಿಯುವಂಥ ನೋಟ)...." ಎಂದು ಹೇಳಿ ನಿಲ್ಲಿಸಿದಳು ಫ್ಲೋರಾ. ಅವಳ ಹೃದಯವನ್ನಾವುದೋ ಉಗ್ರ ನೆನಪಿನ ಉರಿ ಸುಡುವಂತಿತ್ತು.

"ಮುಂದೆ?" ಪ್ರಭಾವತಿ ಮುಂದೇನಾಯಿತೆಂದರಿಯಲು ಕೇಳಿದಳು.

"ಮುಂದೆ....ಮುಂದೆ....ಮುಂದೆ ನಾನು ವರ್ಣಿಸಿ ಹೇಳಲಾರೆ ಪ್ರಭಾ.... ಆ ನೆನಪೂ ನರಕ ಸದೃಶ. ಪಶುಗಳು, ಶುದ್ಧ ಪಶುಗಳು, ನರಕದ ಹುಳುಗಳು....ನಾಲ್ಕು ದಿನವಾದ ಮೇಲೆ, ಆ ಸೂಳೆಯ ಮಗ ಡೈರೆಕ್ಟರ್ ಕೆಲಸ ತಪ್ಪಿಸುವೆನೆಂದು ಹೆದರಿಸಿ ಮೀನಾಕ್ಷಿಯ ಮೈ ಬಯಸಿದ. ಅವಳು ಒಪ್ಪಲಿಲ್ಲ. ಕಡೆಗೆ ಮದುವೆಯಾಗುತ್ತೇನೆ, ಹಾಗೆ ಹೀಗೆ ಎಂದು ಆಮಿಷ ತೋರಿಸಿ, ಅವಳ ಮೈ ಕೆಡಿಸಿದ. ಹದಿನೈದು ದಿನವೆನ್ನುವುದರೊಳಗಾಗಿ ಹತ್ತು ಕೈ ದಾಟಿದಳು ಮುದ್ದು ಮೀನಾ. ಶೀರಾ ಕೈ ಮೀರಿದ ಮೇಲೆ ಅವಳ ಗುಪ್ತಾಂಗದಲ್ಲಿ ರೋಗ ಕಾಣಿಸಿಕೊಂಡಿತು. ನಾನೇ ಡಾಕ್ಟರ ಹತ್ತಿರ ಕರೆದುಕೊಂಡು ಹೋಗಿ ತೋರಿಸಿದೆ. 'ಸಿಫಿಲಿಸ್' ಎಂದರು. ಆ ಮುಗ್ಧ ಜೀವ ಆ ಹೆಸರು ಕೇಳಿ, ಎರಡು ದಿನ ವಿಲಿವಿಲಿ ಒದ್ದಾಡಿ – ಮೂರನೆಯ ದಿನ ರೂಮಿನಿಂದ ಕಣ್ಮರೆಯಾಯಿತು. ಅವಳನ್ನು ಹುಡುಕಿ ಬೊಂಬಾಯೆಲ್ಲಾ ಜಾಲಾಡಿಬಿಟ್ಟೆ. ಮೀನಾ ಕಾಣಲಿಲ್ಲ....ಐದನೆಯ ದಿನ ಅವಳ ಹೆಣ ಕಡಲಕಿನಾರೆಲ್ಲಿ ಕಾಣಿಸಿತೆಂದು ಪೇಪರಿನಲ್ಲಿ ಓದಿದೆ. ಇದು ಬೊಂಬಾಯಿ! ನ ರ ಭ ಕ್ಷ ಕ ಬೊಂಬಾಯಿ.

ನೀನಿಲ್ಲಿರಬೇಡ. ಇದ್ದರೂ ಚಾಕರಿಗೆ ಹೋಗಬೇಡ. ಏನು ಬೇಕಾದ್ದು ಆದರೂ ಸರಿಯೇ – ಒಂಟಿಯಾಗಿ ಈ ನಗರದ ಕಣ್ಣಿಗೆ ಬೀಳಬೇಡ ಪ್ರಭಾ, ಆ ಜೀವದ ಸಾವಿನ ಕೊರಗೊಂದೇ ಸಾಕಾಗಿದೆ ನನಗೆ. ನಿನಗೇನಾಗುವುದೋ ಎಂದು ದಿನವೂ ಹೆದರಿ ಸಾಯಲಾರೆ. ನೀನು ತುಂಬಾ 'ಡೀಸೆಂಟ್ ಸೌಲ್,'" ಹೃದಯವನ್ನೇ ತೆಗೆದು ಪ್ರಭಾವತಿಯ ಮುಂದೆ ಕತ್ತರಿಸಿ ಇಟ್ಟಂತೆ ಕೇಳಿ ಕೊಂಡಳು ಫ್ಲೋರಾ.

"ನೀನು ಹೇಳುವುದು ಸರಿಯೇ ಫ್ಲೋರಾ. ಆದರೆ ಬೊಂಬಾಯಿ ಬಿಟ್ಟು ನಾನೆಲ್ಲಿಗೆ ಹೋಗಲಿ ?"

"ನಿಮ್ಮ ತಂದೆಯ ಬಳಿ ಹೋಗು – ಬೇರೆಲ್ಲಿ ಹೋಗುವುದೂ ಸಾಧ್ಯ ವಿಲ್ಲದಿದ್ದರೆ."

"ಅದು ಸಾಧ್ಯವೇ ಇಲ್ಲ. ಇಲ್ಲಿ ನನಗೆ ಅಂಥ ಯಾವ ಭಯವೂ ಇಲ್ಲ' ಫ್ಲೋರಾ. ನೀನಿದೀಯ, ಲೀಲಾವತಿ ಇದಾಳೆ. ನೀವಿರುವಾಗ ನನಗಾವ ಭಯವೂ ಇಲ್ಲ."

"ನಿನಗೆ ನಾನೇನೂ ಹೇಳಲಾರೆ ಪ್ರಭಾ. ಲೀಲಾವತಿಯನ್ನು ವಿಚಾರಿಸಿ ನಿರ್ಧರಿಸು. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ನನ್ನಿಂದ ಆದುದೆಲ್ಲವನ್ನೂ ಮಾಡಲು ಸಿದ್ಧವಾಗಿದೇನೆ – ಈ ಗಳಿಗೆಯಿಂದ."

"ಮೊದಲು ಮಾಡಬೇಕಾದುದೊಂದೇ – ಆ ಮನೆಯಿಂದ ತೊಲಗಿ ಹೋಗುವುದು. ಅಲ್ಲಿ ನಾನೊಂದು ಗಳಿಗೆಯೂ ಇರಲಾರೆ. ಇದ್ದರೆ ಉಸಿರು ಕಟ್ಟಿ ಸತ್ತುಹೋಗುತ್ತೇನೆ."

"ಹಾಗಾದರೆ ನಿನ್ನ ಸಾಮಾನು ತೆಗೆದುಕೊಂಡು ಬಂದು ಇಲ್ಲಿರು. ಮುಂದೆ ಹೇಗಾಗುವುದೋ ನೋಡೋಣ."

"ಇಲ್ಲಿರುವುದೂ ಆಗದು, ಫ್ಲೋರಾ, ನಿನಗೆ ಕೆಟ್ಟ ಹೆಸರು."

"ಕೆಟ್ಟ ಹೆಸರು ಕೊಡುವುದು ಅತ್ಯಂತ ದೊಡ್ಡ ಉಪಕಾರ. ಒಮ್ಮೆ ಆ ಹೆಸರಿಟ್ಟರೆ ಆಮೇಲೆ ಅದಕ್ಕೆ ಹೆದರುವ ಅಗತ್ಯವೇ ಇಲ್ಲ."

"ಆದರೆ ನಾನು ಅದಕ್ಕೆ ಕಾರಣಳಾಗಲಾರೆ."

"ಬೇಡ, ನಿನಗೇ ಆ ಭಾಗ್ಯವಿಲ್ಲ. ಈಗ ಏನು ಮಾಡುತ್ತಿ ಹೇಳು. ನನಗಂತೂ ಬುದ್ಧಿ ಮಸಣಿಸಿ ಹೋಗಿದೆ."

"ಎಲ್ಲಾದರೂ ಹೋಗಿ ಬೇರೆ ಕಡೆ ಇರುವುದು – ನಾಲ್ಕು ದಿನ."

" ಹಣವಿದೆಯೇ ?"

" ನನ್ನದೆಂದು ಐದು ಹತ್ತು ರೂಪಾಯಿ ಇರಬಹುದು, ಅಷ್ಟೆ."

" ನಿನ್ನ ಸಾಹಸ ಮೆಚ್ಚುತ್ತೇನೆ ಪ್ರಭಾ. ಹತ್ತು ರೂಪಾಯಲ್ಲೇ ಬೊಂಬಾಯಲ್ಲಿ ಸ್ವತಂತ್ರ ಜೀವನ ಆರಂಭಿಸುವ ಯೋಚನೆಯಿದೆಯಲ್ಲಾ ಅದು–Stroke of Genius."

" ಬೇಕಾದಾಗ ಮಾರಲು ಒಂದೆರಡು ಒಡವೆಗಳೂ ಇವೆ."

" ಇರಲಿ–ಒಡವೆಗಳನ್ನು ಮಾಡಿಸುವುದೇ ಮಾರಲಿಕ್ಕೆಂದು ತಾನೇ. ಹಾಗಾದರೆ ಈಗೊಂದು ಕೆಲಸ ಮಾಡೋಣ."

" ಏನು ?"

" ಮೊದಲು ಅಷ್ಟು ಬ್ರೆಕ್‌ಫಾಸ್ಟ್ ಮುಗಿಸೋಣ....ಆಮೇಲೆ ನಿನ್ನ ಸಾಮಾನು ತೆಗೆದುಕೊಂಡು ಟ್ಯಾಕ್ಸಿಯಲ್ಲಿ ಲೀಲಾವತಿಯ ಮನೆಗೆ...."

" ಊಹೂ. ಅಲ್ಲಿಗೆ ಬೇಡ. ಈ ಪಶು ಅಲ್ಲಿಗೂ ಬೆನ್ನು ಹತ್ತಿ ಬರಬಹುದು."

" ಇನ್ನೂ ಚಪಲವಿದೆಯೇ ಅವನಿಗೆ ನಿನ್ನ ಮೇಲೆ ?"

" ರಾತ್ರಿಯೇ ಒಪ್ಪಂದಕ್ಕೆ ಬಂದಿದ್ದ, ಹೆಗಲ ಮೇಲೆ ಕೈ ಹಾಕಿ."

" ಏನು ಮಾಡಿದೆ ?"

" ದೂರ ನಿಲ್ಲು ಎಂದೆ."

" ಅನ್ಯಾಯ. ಚಪ್ಪಲಿ ಮಾಡಬೇಕಾದ ಕೆಲಸಕ್ಕೆ ನಾಲಗೆ ಉಪಯೋಗಿಸಬಾರದಾಗಿತ್ತು."

" ನನಗೂ ಹಾಗೇ ಅನ್ನಿಸಿತು ಆಮೇಲೆ."

" ನಿಜವಾಗಿಯೂ ?"

" ನಿಜವಾಗಿಯೂ."

" ಹಾಗಾದರೆ ನೀನು ಬೊಂಬಾಯಿನಲ್ಲಿ ಬದುಕಬಲ್ಲೆ. ಇಲ್ಲಿ ಹೆಂಗಸರು ಚಪ್ಪಲಿ ಹಾಕುವುದೇಕೆ ಬಲ್ಲೆಯಾ ?"

" ಏಕೆ ?"

" ಪಾದರಕ್ಷೆಗಾಗಿಯಲ್ಲ. ಮೇಲೆ ಬೀಳುವ ಗಂಡಸರನ್ನು ಹಿಮ್ಮೆಟ್ಟಿಸುವ ಏಕೈಕ ಅಸ್ತ್ರ ಎಂದು. ಅದು ಗೊತ್ತಿದ್ದರೆ ಬದುಕುವುದು ಕಷ್ಟವಾಗುವುದಿಲ್ಲ.... ಹಾಗಾದರೆ ಅವನು ಅಲ್ಲಿಗೂ ಬರಬಹುದು ಎನ್ನುತ್ತೀಯ."

"ಬಗಬಹುದು."

"ನಿಜ, ಮೇಲೆ ಬೀಳಬರುವವರು ಕಾಲು ಹಿಡಿಯಲೂ ಸಿದ್ಧರಾಗಿಯೇ ಇರುತ್ತಾರೆ– ಹಾಗಾದರೆ ಒಂದು ಕೆಲಸ ಮಾಡೋಣ. ಮೊದಲು ಬ್ರೆಕ್ ಫಾಸ್ಟ್ ತೀರಿಸಿ, ಆಮೇಲೆ ಟ್ಯಾಕ್ಸಿ ಮಾಡಿಕೊಂಡು ಹೋಗೋಣ."

"ಎಲ್ಲಿಗೆ ?"

"ಎಲ್ಲಿಗಾದರೇನು, ಆ ಜವಾಬ್ದಾರಿ ನನಗಿರಲಿ," ಎಂದಳು ಫ್ಲೋರಾ.

ಫ್ಲೋರಾ ಸ್ಟೋವ್ ಮೇಲೆ ಅಷ್ಟು ಟೋಸ್ಟ್ ಮಾಡಿ ಮತ್ತಷ್ಟು ಕಾಫಿ ಮಾಡಿದಳು. ಇಬ್ಬರೂ ಬ್ರೆಕ್ ಫಾಸ್ಟ್ ಮುಗಿಸಿದರು. ಬಳಿಕ ಫ್ಲೋರಾ ಹೋಗಿ ಟ್ಯಾಕ್ಸಿ ತಂದಳು. ಪ್ರಭಾವತಿ ಮನೆಯಲ್ಲಿದ್ದ ತನ್ನ ಸಾಮಾನು ತರಲು ಹೋದಳು.

ಸಾಮಾನು ತಂದು ಹೊರಗಿಡುವವರೆಗೂ, ಪ್ರಭಾವತಿಯು ಚಿತ್ತಕ್ಕೆ ಸ್ಥೈರ್ಯವಿತ್ತು. ಸಾಮಾನು ಹೊರಗಿಟ್ಟು, ಬಾಗಿಲಿಗೆ ಬೀಗ ಹಾಕಿ, ಏಕೋ ಬಾಗಿಲಿಗೆ ಕಿವಿ ಕೊಟ್ಟು ಆಲಿಸಿದಳು.

ಬರಿ ಮನೆಯಲ್ಲಿ ಗಡಿಯಾರ ಟಿಕ್–ಟಿಕ್–ಟಾಕ್ ಎಂದು ಲೊಚ ಗುಟ್ಟುತ್ತಿತ್ತು.

ತಾನೇತಾನಾಗಿ ಉಕ್ಕಿಬಂದ ದುಃಖದ ಸೆರೆಯಲ್ಲಿ ಕೊಚ್ಚಿ ಕೆಳಗುರುಳಿ ದಳು ಪ್ರಭಾವತಿ.

................

ಟ್ಯಾಕ್ಸಿಯ ಬಳಿ ಕಾದು, ಎಷ್ಟು ಹೊತ್ತಾದರೂ ಬರಲಿಲ್ಲವೆಂದು, ಅವಳನ್ನು ನೋಡಲು ಫ್ಲೋರಾ ಬಂದಾಗಲೂ ಪ್ರಭಾವತಿ ಹಾಗೇ ಬಾಗಿಲ ಮುಂದಿನ ನೆಲದಲ್ಲಿ ಕೆಡೆದಿದ್ದಳು.

"ಧೈರ್ಯವಾಗಿ ಎದುರಿಸು – ಇಲ್ಲವೇ ಒಳಗೆ ಹೋಗು!" ಫ್ಲೋರಾ ಆ ದುಃಖದ ಉದ್ವೇಗವನ್ನು ನೋಡಲಾರದೆ ಹೇಳಿದಳು.

"ಇಲ್ಲ. ಇಲ್ಲ, ಮತ್ತೆ ನಾನಾ ಮನೆಯಲ್ಲಿ ಕಾಲಿಡಲಾರೆ."

"ಹಾಗಾದರೆ ಬಾ," ಎಂದು, ಅವಳ ಸೂಟ್‌ಕೇಸನ್ನು ತಾನೇ ಎತ್ತಿ ಕೊಂಡು ಪ್ರಭಾವತಿಯನ್ನು ತನ್ನ ತೋಳಲ್ಲಿ ತಬ್ಬಿ ಕೆಳಗಿಳಿಸಿದಳು. ದುಃಖದ ಬೇಗೆಯಲ್ಲಿ, ಪ್ರಭಾ ಕುಡಿದವಳಂತೆ ಮಾತಾಡುತ್ತಿದ್ದಳು.

"ಪ್ರಭಾ – ನೆನಪಿದೆಯೇ ಆ ದಿನ ?"

" ಯಾವ ದಿನ ?"

" ನಾನು ಕುಡಿದು ನಡೆಯಲಾರದಿದ್ದ ದಿನ ನೀನು ನನ್ನನ್ನು ಹೀಗೇ ನಡೆಸಿದ್ದೆ. ಈ ದಿನ ನಾನು ನಿನ್ನನ್ನು ನಡೆಸುತ್ತಿದೇನೆ. ಆದರೆ ಜೀವನವನ್ನು ಕುಡಿದು ದುಃಖಮತ್ತರಾಗುವುದಕ್ಕಿಂತ, ಮದ್ಯಪಾನ ಮಾಡಿ ಮತ್ತರಾಗುವುದು ಮೇಲು,"

ಪ್ರಭಾವತಿ ಜೀವವಿಲ್ಲದವಳಂತೆ, ಫ್ಲೋರಾಳ ತೋಳತೆಕ್ಕೆಯ ಆಧಾರ ವನ್ನವಲಂಬಿಸಿ ಬಂದು, ಟ್ಯಾಕ್ಸಿಯಲ್ಲಿ ಕುಳಿತಳು. ಆಗ ಅವಳಿಗೆ ಬಾಗಿಲಿಗೆ ಹಾಕಿದ ಬೀಗದ ಕೈ ನೆನಪಾಯಿತು.

" ಈ ಬೀಗದ ಕೈ ಏನು ಮಾಡಲಿ ?"

" ಅದರ ವ್ಯವಸ್ಥೆ ನಾನು ಮಾಡುತ್ತೇನೆ ಕೊಡು," ಎಂದು ಹೇಳಿ ತೆಗೆದು ಕೊಂಡು ಹೋಗಿ, ಅವಳ ಫ್ಲ್ಯಾಟ್‌ನ ನೆರೆಯಲ್ಲಿದ್ದವರಿಗೆ ಕೊಟ್ಟು, –

" ಎಂಟು ಗಂಟೆಯ ವೇಳೆಗೆ ಮನೆಯ ಯಜಮಾನರು ಬರುತ್ತಾರೆ, ದಯವಿಟ್ಟು ಅವರಿಗೆ ಕೊಡಿ," ಎಂದು ಹೇಳಿ ಬಂದು ಟ್ಯಾಕ್ಸಿಯಲ್ಲಿ ಕುಳಿತಳು.

" ಫ್ಲೋರಾ....ಮುಗಿದುಹೋಯಿತು, ಮುಗಿದುಹೋಯಿತು. ಇಷ್ಟು ದಿನಗಳ ಕನಸಿಂದು ಕತ್ತರಿಸಿಹೋಯಿತು."

" ಹೋಗಲಿ ಬಿಡು. ಕನಸು ಕತ್ತರಿಸುವುದೇ ಮೇಲು. ಇಲ್ಲವಾದರೆ ಅದು ನಿನ್ನನ್ನು ಕತ್ತರಿಸುತ್ತದೆ."

" ಸಾಂತಾಕ್ರೂಜ್‌ಗೆ ಬಿಡು," ಎಂದು ಟ್ಯಾಕ್ಸಿಯವನಿಗೆ ಹೇಳಿದಳು ಫ್ಲೋರಾ.

ಟ್ಯಾಕ್ಸಿ ವೇಗವಾಗಿ ಹೊರಟಿತು. ದಾದರ್ ಕಣ್ಣುಮರೆಯಾಯಿತು.

## ೨೪

ಸಾಂತಾಕ್ರೂಜ್‌ನಲ್ಲಿದ್ದ ಕಡಲ ದಂಡೆಯ ಇದುರಿನ ತನ್ನ ಪರಿಚಯದ ಹೋಟಲಲ್ಲಿ ಪ್ರಭಾವತಿ ಇರಲು ವ್ಯವಸ್ಥೆ ಮಾಡಿ ಅವಳಿಂದ ಲೀಲಾವತಿಯ ವಿಳಾಸ ತೆಗೆದುಕೊಂಡು ಫ್ಲೋರಾ –

" ನೀನು ಏನೂ ಯೋಚನೆ ಮಾಡಕೂಡದು ಪ್ರಭಾ. ಸ್ವಲ್ಪ ಹೊತ್ತು ಮಲಗಿ ನಿದ್ರೆ ಮಾಡುವ ಯತ್ನ ಮಾಡು. ನಾನೂ ಆದಷ್ಟು ಬೇಗ ಲೀಲಾವತಿ ಯನ್ನು ಕರೆತರುವ ಪ್ರಯತ್ನ ಮಾಡುತ್ತೇನೆ" – ಎಂದಳು.

"ಯೋಚನೆ. ಇನ್ನೇನು ಯೋಚನೆ ಫ್ಲೋರಾ – ಯೋಚನೆ ಮಾಡುವುದೆಲ್ಲಾ ಮುಗಿದುಹೋಯಿತು. ಇನ್ನುಳಿದುದೊಂದೇ ಯೋಚನೆ...."

"ಹಿಸ್ಟಿರಿಕಲ್ ಆಗಬೇಡ. ದುರಂತ ನಾಯಕಿಯರನ್ನು ಮೆಚ್ಚುವುದು ರಂಗಸ್ಥಲದಲ್ಲೇ ಹೊರತು, ಜೀವನದಲ್ಲಲ್ಲ. ಜೀವನ ಕಾಲಿನಿಂದ ಒದೆದವರ ಕಾಲನ್ನೇ ನೆಕ್ಕುವ ನಾಯಿಯಂತೆ. ಮೆಚ್ಚುಗೆ ಪುರಸ್ಕಾರ ಎಲ್ಲಾ ಖಳ ನಾಯುಕನಿಗೇ – ಆದ್ದರಿಂದ ಮುಂದೇನು ಮಾಡಬೇಕು, ಹೇಗಿರಬೇಕು ಎನ್ನುವುದನ್ನು ಯೋಚಿಸು."

"ನನ್ನದಿರಲಿ, ಫ್ಲೋರಾ. ನನ್ನ ಯೋಚನೆಯಲ್ಲಿ ನಿನ್ನ ಆಫೀಸಿನ ಯೋಚನೆಯನ್ನೇ ಮರೆತಂತೆ ಕಾಣುತ್ತದಲ್ಲಾ, ಹೀಗೆ ಆಫೀಸು ತಪ್ಪಿದರೆ ಕೆಲಸ ಉಳಿದೀತೇ ?"

"ಸರಿ, ಸರಿ. ನಿನಗೆಲ್ಲೋ ಹುಚ್ಚು. ನನ್ನ ಕೆಲಸದ ರಕ್ಷಣೆ ಕಂಡು ಕೆಲಸ ಕೊಟ್ಟಿದಾರೆಯೇ ? ರೂಪವಿದ್ದು, ಅದನ್ನು ಹೇಗೆ ಪ್ರಯೋಗಿಸಬೇಕೆಂದು ತಿಳಿದರೆ, ಒಂದಲ್ಲ ಹತ್ತು ಕೆಲಸ ಸಿಗುತ್ತದೆ."

"ಹೀಗೇಕೆ ಮಾತಾಡುತ್ತೀ ಫ್ಲೋರಾ. ನಿನ್ನ ಬಗ್ಗೆಯೇ ನಿನಗೂ ಗೌರವವಿಲ್ಲದಂತೆ ಏಕಾಡುತ್ತಿ ?"

"ನನ್ನ ಬಗ್ಗೆ ನನಗೇ ಗೌರವವಿದೆಯೆಂದುಕೊಂಡು, ನನಗೆ ನಾನು ಅಪಮಾನ ಮಾಡಿಕೊಳ್ಳಲಾರೆ ಪ್ರಭಾ. ನನಗೆ ಗೌರವವಿರುವುದು ನನ್ನ ರೂಪವೊಂದರ ಬಗ್ಗೆಯೇ. ಈ ಗಂಡಸರ ಜಗತ್ತಿನಲ್ಲಿ ಹೆಣ್ಣು ಹೆಮ್ಮೆ ಪಡಬಹುದಾದಂಥ ವಸ್ತು ಅದೊಂದೇ. ಹೆಣ್ಣನ್ನು ಅಪಮಾನಿಸುವ ಈ ಜಗತ್ತು ರೂಪದ ಬೂಟನ್ನು ನಾಲಿಗೆಯಿಂದ ಚೊಕ್ಕಟ ಮಾಡುತ್ತದೆ. ಇದು ನನಗೆ ಗೊತ್ತಿದೆ. ಆದ್ದರಿಂದ ನನ್ನನ್ನು ನಾನು ರಕ್ಷಿಸಿಕೊಳ್ಳಬಲ್ಲೆ ಪ್ರಭಾ, ಆದರೆ ನನಗಿರುವ ಚಿಂತೆಯೆಲ್ಲಾ, ಕಾಣದ ಆತ್ಮವನ್ನು ಕಟ್ಟಿಕೊಂಡು, ತಮ್ಮನ್ನು ತಾವು ಹಾಳುಮಾಡಿಕೊಳ್ಳುವ ನಿಮ್ಮಂಥವರದು. ಆದ್ದರಿಂದ ನನ್ನ ಚಿಂತೆ ಮಾಡಬೇಡ, ನಿನ್ನ ಚಿಂತೆಯನ್ನೂ ಮಾಡಬೇಡ. ಚಿಂತೆ ರೂಪದ ವೈರಿ. ಹಾಗೇ ನಿದ್ರೆ ಮಾಡಲು ಸಾಧ್ಯವಿಲ್ಲವಾದರೆ, ಅಟೆಂಡರಿಗೆ ಹೇಳಿ ಸ್ವಲ್ಪ ವೈನ್ ತರಿಸಿಕೊಂಡು ಕುಡಿ. ಹಸಿವಾದರೆ ಊಟ ತರಿಸಿ, ಊಟ ಮಾಡು. ನಿಮ್ಮ ಆಹಾರವೂ ಸಿಗುತ್ತದೆ," ಎಂದು ಹೇಳಿ, ಲೀಲಾವತಿಯನ್ನು ಕರೆತರಲು ಹೋದಳು ಫ್ಲೋರಾ.

ಫ್ಲೋರಾ ಬಲವಂತಕ್ಕೆ ಹಾಸಿಗೆಯ ಮೇಲೆ ಉರುಳಿಕೊಂಡ ಪ್ರಭಾವತಿ, ಅವಳು ಹೋದ ಮೇಲೆ, ಅವಳು ಹೇಳಿದಂತೆ ಮಲಗಿ ನಿದ್ರಿಸಲು ಪ್ರಯತ್ನ ಮಾಡಿದಳು. ಆದರೆ ಅವಳ ವಿಚಿತ್ರ ಮನೋಪರಿಸ್ಥಿತಿಯಲ್ಲಿ ನಿದ್ರೆ ಮಾಡು ವುದು ಸಾಧ್ಯವೇ ಆಗಲಿಲ್ಲ.

ವಿಚಿತ್ರ – ನಿಜವಾಗಿಯೂ ವಿಚಿತ್ರವಾಗಿತ್ತು ಅವಳ ಮನೋಪರಿಸ್ಥಿತಿ.

ಒಮ್ಮೊಮ್ಮೆ ಏನೇನೋ ನೂರಾರು ಯೋಚನೆಗಳು, ಭಾವನೆಗಳು ಮಳೆಗಾಲದ ಹೊಳೆಯಂತೆ ಸುಳಿ ಸುಳಿ ಸುತ್ತಿ, ದಂಡೆಯುಪ್ಪಳಿಸಿ ಬಂದು, ಮನಸ್ಸನ್ನು ಮುತ್ತುವುವು. ಮತ್ತೊಮ್ಮೆ ಇದ್ದಕ್ಕಿದ್ದ ಹಾಗೇ ಎಲ್ಲ ಯೋಚನೆ ಗಳೂ ಕಾದ ಹೆಂಚಿನ ಮೇಲೆ ಹಾಕಿದ ನೀರಿನ ಹನಿಯಂತೆ, ಮನಸ್ಸಿಗೆ ಬಂದ ತಕ್ಷಣವೇ 'ಸುಯ್' ಎಂದು ಸದ್ದು ಮಾಡಿ, ಬರಿ ಹೊಗೆಯಾಗಿ ಇಂಗಿ ಹೋಗುವುದು; ಬೇರೇನೋ ಯೋಚಿಸುವಾಗ, ಹುಲ್ಲುಗಾವಲಿನಲ್ಲಿ ಯಾವ ಭೀತಿಯೂ ಇಲ್ಲದೆ ಹಾಯಾಗಿ ಹುಲ್ಲು ಮೇಯುತ್ತಾ ಇರುವ ಹಸುವಿನ ಮೇಲೆ, ಇದ್ದಕ್ಕಿದ್ದಂತೆ ಸುಳಿವು ತೋರದೆ ಲಂಘಿಸುವ ಹುಲಿಯಂತೆ, ಅವಳ ಮಿದುಳಿನ ಮೇಲೆ ಕ್ರೋಧ ಅಪ್ಪಳಿಸುವುದು; ಬೇಸಿಗೆಯಲ್ಲಿ ಸುಳಿವು ತೋರದೆ ಬರುವ ಮಳೆಯಂತೆ, ಥಟಕ್ಕನೆ ಕಣ್ಣು ಹನಿಗರೆದು, 'ಇದೇನು ದುಃಖ' ಎಂದು ಕೊಳ್ಳುವುದರಲ್ಲೇ ಮಾಯವಾಗುವುದು.

ಬೇಕೆಂದು ಯೋಚನೆ ಬರುವುದಿಲ್ಲ. ಬಂದದ್ದು ನಿಲ್ಲುವುದಿಲ್ಲ....

ಆದರೆ ಅರ್ಥವಾಗದ ಯಾವುದೋ ಭಾವನೆಯೊಂದು, ಹತ್ತಿರದಲ್ಲೇ ಮೊರೆಯುತ್ತಿದ್ದ ಸಾಗರದ ಸದ್ದಿನಂತೆ, ಮೇಲೆಲ್ಲೋ ಆಕಾಶದಾಳದಲ್ಲಿ ಹಾರುವ ವಿಮಾನದ 'ಭೋ' ಎನ್ನುವ ಏಕನಾದದಂತೆ ಒಂದೇಸಮನೆ ಕೊರೆಯುತ್ತಿದೆ.

ಹಾಗೇ ಆ ಸದ್ದಿನಲ್ಲಿ ಮೈಮರೆತು ಒರಗಿದಾಗ, ಇರುಳಲ್ಲಿ ಇದ್ದಕ್ಕಿದ್ದಂತೇ ಗಡಬಡಿಸಿ, ಇರುಳಗಾಳಿಯನ್ನು ಕಲಕಿ, ಶಬ್ದ ತುಂಬಿ, ಕಂಗೆಡಿಸುವ ಶಬ್ದ – ವೇಗದಿಂದ ಹಾಯ್ದುಹೋಗಿ, ಮರುಗಳಿಗೆಯೇ ಕತ್ತಲಲ್ಲಿ ಕರಗುವ ವಿದ್ಯುತ್ ರೈಲಿನಂತೆ ಯಾವುದೋ ಭಾವನೆ ವೇಗವಾಗಿ ಹಾಯ್ದುಹೋಗುವುದು. ದಿಗಿಲಾಗಿ ಇದೇನು ಎನ್ನುವಾಗ ಏನೂ ಇರುವುದಿಲ್ಲ. ಇರುವುದೊಂದೇ – ಕಡೆಯಿಲ್ಲದ ಕಡಲ ಮೊರೆತ.

ಫ್ಲೋರಾ, ಲೀಲಾವತಿ, ಶಾಂತಾರಾಂ....

ಎಲ್ಲರೂ ಸರ್ಕಸ್ಸಿನಲ್ಲಿ ಒಂದು ಚಕ್ರದ ಬೈಸಿಕಲ್ಲಿನ ಮೇಲೆ ಕುಳಿತು ಚಿತ್ರವಿಚಿತ್ರವಾಗಿ ಸವಾರಿ ಮಾಡುತ್ತಾ ವೃತ್ತಾಕಾರದ ರಂಗದಲ್ಲಿ ಸುತ್ತಿ ಸುತ್ತಿ ಬರುವ 'ಬಫೂನ್'ನಂತೆ, ಹೀಗೆ ಬರುತ್ತೇನೆ ಎನ್ನದೆ, ಬರುವ ಸೂಚನೆ ಕೊಡದೆ, ಅವಳ ಮನೋಭೂಮಿಕೆಯಲ್ಲಿ ಬಂದು ತೆರಳುತ್ತಾರೆ.

ಎಷ್ಟು ಹತ್ತಿರ – ಆದರೆ ಎಷ್ಟು ದೂರ....

ಒಂದು ಗಳಿಗೆ ಎಲ್ಲರ ಕೂಗು, ಅವರ ಮಾತು, ನಗು ಎಲ್ಲವೂ ಕಣ್ಣಿಗೆ ಅತಿ ಸಮೀಪವಾಗಿ ನಡೆದಂತೆ ಕಾಣುತ್ತದೆ, ಮರುಗಳಿಗೆ ಎಲ್ಲವೂ ಮಬ್ಬು ಮಸಕು, ಮುಂಜಾವಿನ ನಕ್ಷತ್ರಕಾಂತಿಯಂತೆ ಅಸ್ಪಷ್ಟ.

ಅವಳ ಮಿದುಳಿನಲ್ಲಿ, ಹಾಳುಮನೆಯ ಅರೆಗತ್ತಲಿನಲ್ಲಿ ಸುತ್ತುವ ಯಾವುದೋ ನೆರಳುಗಳಂತೆ ನೆನಪುಗಳು ಅಲೆಯುತ್ತವೆ. ಮಸಣದ ರುದ್ರ ಮೌನದಲ್ಲಿ ಸುಯ್ಯುವ ನಡುರಾತ್ರಿಯ ಗಾಳಿಯಂತೆ, ಯಾವುದೋ ಮಾತು ಗಳು ಪಿಸುಗುಟ್ಟುತ್ತವೆ.

"ಅವರ ಕೋಣೆಯನ್ನು ಫೆನೈಲ್ ಹಾಕಿ ತೊಳೆದುಬಿಡು...."

"ವಿಷ್ ಯು ಬೋತ್ ಗುಡ್ ಲಕ್."

"ನೀವು ಮನಸ್ಸು ಮಾಡಿದರೆ ಬಾಕಿ ತೀರಿಸುವುದು ಕಷ್ಟವಾಗುವುದಿಲ್ಲ...."

ನೆನಪಿನ ಪಿಸುಮಾತುಗಳು....ಹೆದರಿಸುವ, ಹೆಪ್ಪುಗಟ್ಟಿಸುವ, ಪಿಸುಮಾತುಗಳು – ನೆನಪಿನ ಪಿಸುಮಾತುಗಳು. ನೆನಪನ್ನೂ ನೆನಪಿಸುವ ನೆನಪಿನ ಪಿಸುಮಾತುಗಳು....ನೆನಪಿನ ನೆರಳುಗಳಾಡುವ ಪಿಸುಮಾತುಗಳು.

................

ಬೇಕೆಂದು ಯೋಚನೆ ಬರುವುದಿಲ್ಲ, ಬಂದದ್ದು ನಿಲ್ಲುವುದಿಲ್ಲ....

"ಐ ಹೇಟ್ ಯು, ಐ ಹೇಟ್ ಯು." (ನಿನ್ನನ್ನು ಕಂಡರೆ ನನಗೆ ದ್ವೇಷ, ನಿನ್ನನ್ನು ಕಂಡರೆ ನನಗೆ ದ್ವೇಷ)

ಮಾರಿದ ಚಿನ್ನದ ಬಳೆ, ಸರ – ಬೀಸಿ ಬಿದ್ದ ಬೆರಳಿನ ಏಟಿಗೆ ಚುಮು ಚುಮು ಉರಿಯುವ ಕೆನ್ನೆ – ಐ ಹೇಟ್ ಯು.

ಬೇಕೆಂದು ಯೋಚನೆ ಬರುವುದಿಲ್ಲ, ಬಂದದ್ದು ನಿಲ್ಲುವುದಿಲ್ಲ....

................

ಹೀಗೇ ಕುಳಿತರೆ ತನಗೆ ಹುಚ್ಚು ಹಿಡಿಯುವುದೆಂದು ಹೆದರಿ, ಪ್ರಭಾವತಿ ವರಾಂಡಕ್ಕೆ ಹೋಗಿ, ಬೀಸಣಿಕೆಯಾಕಾರದ ಅಗಲವಾದ ಎಲೆಯ ತಾಳೆಯ ಗಿಡಗಳ ನಡುವೆ ಇಟ್ಟ ಬೆತ್ತದ ಕುರ್ಚಿಯಲ್ಲಿ ಮೈಯೊರಗಿಸಿ, ಕಡಲ ದಂಡೆಯನ್ನು ನೋಡುತ್ತಾ ಕುಳಿತಳು.

ಕಣ್ಣು ಹೋಗುವವರೆಗೂ ನೀಲಿಯ ಕಡಲು ಅಲೆ ತುಳುಕಿಸುತ್ತಾ ಹರಡಿದೆ. ಅಲೆ ಅಲೆಯನ್ನು ಹೊಯ್ಯುವಲ್ಲಿ, ಅಲ್ಲಲ್ಲಿ ಸಮುದ್ರದ ನಡುವೆ ಹಿಂಜಿದ ಹತ್ತಿಯನ್ನು ಹರಡಿದಂತೆ ಕಾಣುತ್ತಿದೆ....ದೂರದಲ್ಲೊಂದು ಬೆಸ್ತರ ದೋಣಿ ಸೋಮಾರಿಯಂತೆ ನಿಧಾನವಾಗಿ ತೇಲುತ್ತಿದೆ....

ಬಿಡುವಿನ ದಿನವಲ್ಲವಾದುದರಿಂದ, ಮಧ್ಯಾಹ್ನದ ಹೊತ್ತಾದುದರಿಂದ ಬೀಚೂ ಜನವಿಹೀನವಾಗಿದೆ. ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ಇದ್ದಾರೆ. ಬಣ್ಣ ಬಣ್ಣದ ಪಟ್ಟಿಗಳ ಅರಳಿಸಿದ ಕೊಡೆಯ ನೆರಳಿನಲ್ಲಿ, ಅರೆಬೆತ್ತಲು ಮೈಯ ಹೆಂಗಸೊಬ್ಬಳು ಮಲಗಿದ್ದಾಳೆ. ಮತ್ತೊಬ್ಬಳು ಒಲ್ಲದ ಮಗುವನ್ನು ನೀರಿಗಿಳಿಸಲು ಯತ್ನಿಸುತ್ತಿದ್ದಾಳೆ. ತೂಗಿ ಬಂದ ಅಲೆ ಅವಳ ನಗ್ನ ತೊಡೆಗಳನ್ನಪ್ಪಳಿಸಿ ತುಂತುರಾಗಿ ಸಿಡಿಯುತ್ತದೆ. ಆಕೆ ಸ್ವಲ್ಪ ತೂಗಾಡಿ ಗಟ್ಟಿಯಾಗಿ ನಗುತ್ತಾಳೆ. ಬೀಚಿನಲ್ಲಿ ಕುಳಿತ ಗಂಡಸು ಅದನ್ನು ನೋಡಿ ನಗುತ್ತಾನೆ....

ನಾಯಿಯೊಂದು ಯಜಮಾನನ ಕೈಯಿಂದ ಬಿಡುಗಡೆಯಾಗಿ, ಸರಪಳಿಯನ್ನೆಳೆಯುತ್ತಾ ಬೀಚಿನಲ್ಲಿ ಸುತ್ತುತ್ತಿದೆ. ಆಗಾಗ ಅದು, ಮರಳನ್ನು ಮೂಸಿನೋಡಿ, ಮುಂಗಾಲಿನಿಂದ ಮರಳನ್ನು ಬಗೆಯುತ್ತದೆ, ಸುತ್ತಮುತ್ತ ದಿಟ್ಟಿಸಿ ನೋಡಿ ಮತ್ತೆ ಬಗೆಯುತ್ತದೆ ಮರಳನ್ನು....

ಏನು ವಾಸನೆ, ಏನು ಬಗೆಯುತ್ತಿರಬಹುದು....

ಏನು ?....

................

"ಪ್ರಭಾ....ಮೊದಲದನ್ನು ದೂರ ಹಾಕು."

ದಾದರಿನ ಕಲ್ಲು ಮರಳು ತುಂಬಿದ ಬೀಚಿನಲ್ಲಿ ಇಬ್ಬರೂ ಮಾತಾಡುತ್ತಾ ಕುಳಿತಿದ್ದರು, ಫ್ಲೋರಾ-ಪ್ರಭಾವತಿ. ಪ್ರಭಾವತಿ ಹೊತ್ತು ಹೋಗದೆ, ಅಲ್ಲೇ ಬಿದ್ದಿದ್ದ ಕಡ್ಡಿಯ ತುಂಡಿನಿಂದ ಮರಳನ್ನು ಕೆದರುತ್ತಿದ್ದಳು. ಸಿಗರೇಟು ತುಂಡು, ಸೋಡಾ ಸೀಸೆಯ ಮುಚ್ಚಳ, ಕಡಲೆಕಾಯಿ ಸಿಪ್ಪೆ, ಕಾಗದದ ಚೂರು-ಏನೇನೋ ಬರುತ್ತಿತ್ತು ಕೆದರಿದ ಮರಳಿನಿಂದ.

ಹಾಗೇ ಕೆದರುತ್ತಿದ್ದಳು....ಮುದುರಿ ಅಸ್ತವ್ಯಸ್ತವಾದ ಹೊಲಸು ಹಳದಿಯ ಬಣ್ಣದ ನಿಪ್ಪಲ್‌ನಂತ ರಬ್ಬರಿನ ಚೀಲವೊಂದು ಕಾಣಿಸಿತು. ಏನಿರಬಹುದು ಇದು ?

" ಫ್ಲೋರಾ – ಇದೇನಿರಬಹುದು ?"

" ಪ್ಲೀಸ್, ಪ್ಲೀಸ್, ದೂರ ಹಾಕು ಈ ಹೊಲಸನ್ನು."

" ಇದೇನು ಫ್ಲೋರಾ ?"

" ಮೊದಲು ಬಿಸಾಕು. ಆಮೇಲೆ ಹೇಳುತ್ತೇನೆ."

ಕಡ್ಡಿಯ ತುದಿಯಿಂದ ಜೋಲಾಡುತ್ತಿದ್ದ ಅದನ್ನು ದೂರ ಬಿಸುಟಳು ಪ್ರಭಾ. ಫ್ಲೋರಾ ನಗುತ್ತಿದ್ದಳು –

" ಥ್ಯಾಂಕ್ ಗಾಡ್! ನೀನು ಅದನ್ನು ಕಡ್ಡಿಯಲ್ಲಿ ಎತ್ತಿದ್ದನ್ನು ಯಾರೂ ನೋಡಲಿಲ್ಲ. ಇಲ್ಲವಾದರೆ ಬೀಚಿನ ಜನವೆಲ್ಲಾ ನಿನ್ನನ್ನೇ ನೋಡುತ್ತಿತ್ತು."

" ಏಕೆ ? ಅದೇನು ಫ್ಲೋರಾ ?"

" ಎಂಥ ಮುಗ್ಧ ಹುಡುಗಿ ನೀನು. ಅದೇನು ಗೊತ್ತಿಲ್ಲವೇ ?"

" ಊಹೂ."

" ಎಫ್ – ಎಲ್."

ಹಾಗೆಂದರೇನೆಂದು ಫ್ಲೋರಾ ವಿವರಿಸಿದಾಗ, ಪ್ರಭಾವತಿಯ ಮೈ ಜರಿ ಹರಿದಂತೆ ಮುದುರಿಕೊಂಡಿತು.

" ಬೊಂಬಾಯಿನಲ್ಲಿ ಬೀಚೆಂದರೇನೆಂದು ನಿನಗೆ ಗೊತ್ತಿಲ್ಲ ಪ್ರಭಾ – ಇದು ಬಿಟ್ಟಿ ಬೆಡ್ ರೂಂ ಬಹಳ ಜನಕ್ಕೆ."

ಮನೆಗೆ ಬಂದು ಹತ್ತು ಹತ್ತು ಸಾರಿ ಸೋಪು, ಡೆಟ್ಟಾಲ್ ಹಾಕಿ ಕೈ ತೊಳೆದುಕೊಂಡಳು ಪ್ರಭಾವತಿ.

" ಇಶ್ಶಿ " ಎಂದು ಅವಳ ಮನಸ್ಸು ಮುಖ ಮುದುಡಿಕೊಳ್ಳುತ್ತಿತ್ತು....

................

ಬಣ್ಣ ಬಣ್ಣದ ಕೊಡೆಯಡಿಯಲ್ಲಿ, ಬಿಗಿಯಾದ ಬೇತಿಂಗ್ ಸೂಟ್ ಹಾಕಿದ ಹೆಂಗಸು ಏನೋ ಓದುತ್ತಾ ಮಲಗಿದ್ದಾಳೆ, ಮೈ ಚಾಚಿ. ಅವಳ ಮುಖ ಕಾಣದು – ಸ್ತನ ದ್ವಯ ಎದ್ದು ಕಾಣುತ್ತಿದೆ....

ತೊಡೆಗೆ ತೆರೆಯಪ್ಪಳಿಸಿ ತುಂತುರಾಗುತ್ತಿದೆ ಕಡಲ ಅಲೆ....ಹೆಂಗಸು ತೂಗಾಡುತ್ತಾಳೆ, ಗಂಡಸು ನಗುತ್ತಾನೆ....

ನಾಯಿ ಏನೋ ವಾಸನೆ ಕಂಡು,'ಅತ್ತಿತ್ತ ಯಾರಾದರೂ ತನ್ನನ್ನು ನೋಡು ವರೇನೋ ಎಂದು ನೋಡಿ, ಮುಂಗಾಲಿನಿಂದ ಮರಳು ಬಗೆಯುತ್ತಿದೆ....

ಏನು ನೋಡುತ್ತಿರಬಹುದು ಅದು ?....

ಮರಳಿನಾಳದಲ್ಲಿ ಹುದುಗಿದ ಯಾರ ಕಾಮುಜೀವನವನ್ನು ಅದು ಮುಂಗಾಲಿನಿಂದ ಕೆದಕಿ ಹೊರಗೆಳೆಯುತ್ತಿರಬಹುದು –

ಪ್ರಭಾವತಿಗೆ ಏಕೋ ಆ ನಾಯಿಯ ಮೇಲೆ ಸಿಟ್ಟು ಬಂತು. ಕಲ್ಲಿನಿಂದ ಹೊಡೆದು ಓಡಿಸಬೇಕೆನ್ನಿಸಿತು. 'ಅದನ್ನು ಓಡಿಸಿ' ಎಂದು ಚೀರಬೇಕೆನ್ನಿಸಿತು.

ತೆಳು ಅಲೆಗಳ ನೀಲಿಯ ಕಡಲು ಪಳಪಳ ಹೊಳೆಯುತ್ತಿತ್ತು ಬಿಸಿಲಿನಲ್ಲಿ. ಅಲೆ ಅಲೆಯನ್ನು ಚುಂಬಿಸಿದೆಡೆಯಲ್ಲಿ, ಹಿಂಜಿದ ಹತ್ತಿಯನ್ನು ತೇಲಿ ಬಿಟ್ಟಂತೆ, ನೊರೆ ತೇಲುತ್ತಿತ್ತು....

"ಎಫ್ – ಎಲ್....ಎಫ್. ಎಲ್....ಸಿಫ್‌ಲಿಸ್....ಮೀನಾಕ್ಷಿ.... ಕಡಲಿನಲ್ಲಿ ಕೊಳೆಯುತ್ತಿದ್ದ, ಊದಿಕೊಂಡ, ಮೀನು ತಿಂದ ವಿಕಾರವಾದ ಹೆಣ – ಕಡಲಿನಲ್ಲಿ....

ತೆಳು ಅಲೆಗಳ ನೀಲಿಯ ಕಡಲು, ಹಿಂಜಿದ ಹತ್ತಿಯಂಥ ನೊರೆಯನ್ನು ಅಲ್ಲಲ್ಲಿ ಹೊತ್ತು ತುಳುಕುತ್ತಿತ್ತು....

ಆ ಕಡಲನ್ನು ಕುಳಿತು ನೋಡುವುದಾಗಲಿಲ್ಲ ಪ್ರಭಾವತಿಗೆ. ಎದ್ದು ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡಳು.

ಬರಿದಾದ ಮನಸಿನಲ್ಲಿ ಕಾಣದ ಬೆಂಕಿ ಹೊಗೆಯಾಡುತ್ತಿತ್ತು, ಹಾಗೇ ಕಣ್ಣು ಮುಚ್ಚಿದಳು....

ಅವಳ ಮೈ ಬಿರುಗಾಳಿಗೆ ಸಿಕ್ಕಂತೆ ಕಂಪಿಸುತ್ತಿತ್ತು.

ಯಾರೋ ಅವಳ ಮಿದುಳಿನಲ್ಲಿ ಚೀರಿ ಹೇಳುತ್ತಿದ್ದರು –

"ಈ ಬೊಂಬಾಯಿ ಭಯಂಕರ ಪಟ್ಟಣ. ನಿನ್ನಂಥ ಮುಗ್ಧೆಯರಿಗಲ್ಲ."

## ೨೫

ಮೃದುವಾಗಿ ಬಾಗಿಲು ತಟ್ಟಿದ ಸದ್ದಾಯಿತು. ಪ್ರಭಾವತಿ ಎದ್ದು ಹೋಗಿ ಬಾಗಿಲು ತೆರೆದಳು.

ಬಾಗಿಲಲ್ಲಿ ಲೀಲಾವತಿ ಫ್ಲೋರಾ ಇಬ್ಬರೂ ನಿಂತಿದ್ದರು – ಒಂದು ಗಳಿಗೆ ಲೀಲಾವತಿಯ ಮುಖವನ್ನು ದಿಟ್ಟಿಸಿ ನೋಡಿದಳು. ಮರುಗಳಿಗೆ ಅವಳೆದುರು

ನಿಲ್ಲಲಾಗದೆ, ಹಿಂದಕ್ಕೆ ತಿರುಗಿ ಹೋಗಿ ಮಂಚದ ಮೇಲೆ ಬಿದ್ದು, ಮುಖ ಮುಚ್ಚಿಕೊಂಡಳು.

ಲೀಲಾವತಿ ಮಾತನಾಡಿಸದೆ, ಮಂಚದ ಬಳಿ ಸಾಗಿ, ಅವಳ ಪಕ್ಕದಲ್ಲಿ ಕುಳಿತು, ಅವಳ ತಲೆಗೂದಲನ್ನು, ಬೆನ್ನನ್ನು ಮೃದುವಾಗಿ ನೇವರಿಸಿ ಅವಳನ್ನು ನೋಡಿದಳು. ಅವಳ ಕಣ್ಣಲ್ಲಿ ಘೋರ ಯಾತನೆ ಬೀಡು ಬಿಟ್ಟು, ಕಣ್ಣು ವಿಶಾಲವಾಗಿದ್ದವು.

ಲೀಲಾವತಿಯ ಕೈ ಸೋಂಕಿಗೆ ಜೀವ ಬಂದಂತೆ, ಹಾಸಿಗೆಯಲ್ಲಿ ಹೊರಳಿ, ಪ್ರಭಾವತಿ ಅವಳ ತೊಡೆಯಲ್ಲಿ ಮುಖ ಮುಚ್ಚಿಕೊಂಡು –

"ಲೀಲಾ .... ಲೀಲಾ .... ಎಲ್ಲಾ ಮುಗಿದುಹೋಯಿತು ಲೀಲಾ," – ಎಂದು ಕರುಳು ಕಿತ್ತಂತೆ ಕೂಗಿದಳು ಪ್ರಭಾವತಿ. ಅವಳ ಮೈ ಸುಮ್ಮನೆ ನಡುಗುತ್ತಿತ್ತು.

"ಷ್. ಸುಮ್ಮನಿರು, ಮಾತಾಡಬೇಡ. ನನಗೆಲ್ಲಾ ಗೊತ್ತಿದೆ. ಫ್ಲೋರಾ ಹೇಳಿದಳು, ಅಳಬೇಕೆನಿಸಿದರೆ ಅತ್ತುಬಿಡು, ಪ್ರಭಾ – ಬೇಕೆನಿಸಿದಷ್ಟು ಅತ್ತು ಬಿಡು. ಅಳುವನ್ನೆಂದೂ ಹೃದಯದಲ್ಲಿ ಹುದುಗಿಡಬಾರದು."

"ನನಗೂ ಹಾಗೇ ಅನಿಸುತ್ತದೆ ಲೀಲಾ – ಹಗಲೆಲ್ಲಾ ಅತ್ತೆ. ಆದರೆ ಈಗ ಅಳಲೂಲಾರೆ, ಅದೇ ಬೆಂಕಿಯಾಗಿ ಸುಡುತ್ತಿದೆ."

ಅವಳ ಮಾತು ಕೇಳಿ ತಾಯಿ ಬೆಕ್ಕು ತನ್ನ ಮರಿಯುನ್ನು ತಬ್ಬಿಕೊಳ್ಳು ವಂತೆ ಲೀಲಾವತಿ, ಪ್ರಭಾವತಿಯನ್ನು ತಬ್ಬಿಕೊಂಡಳು. ಇಬ್ಬರೂ ಒಬ್ಬರ ನ್ನೊಬ್ಬರು ನೋಡಿದರು–ಒಂದು ಕಣ್ಣು ಭಯಂಕರ ಯಾತನೆಯ ಅಗ್ನಿಕುಂಡ, ಇನ್ನೊಂದು ಘೋರ ನಿರಾಶೆಯ ರುದ್ರ ಶ್ಮಶಾನ. ಎರಡು ಮುಖಗಳಿಂದಲೂ ರಕ್ತವನ್ನು ಹಿಂಡಿ ತೆಗೆದುಬಿಟ್ಟಂತಿತ್ತು.

ಫ್ಲೋರಾ ಅವರಿಬ್ಬರನ್ನೂ ನೋಡಲಾರದೆ, ಕಿಟಕಿಯಬಳಿ ನಿಂತು ಸಿಗರೇಟು ಸೇದುತ್ತಿದ್ದಳು.

ಸ್ವಲ್ಪ ಹೊತ್ತು ಮೂವರೂ ನೀರವವಾಗಿದ್ದರು.

"ಸ್ವಲ್ಪ ಟೀ ತರುವಂತೆ ಹೇಳಲೇ?" ಯಾತನೆಯನ್ನು ಹೆಚ್ಚಿಸುವ ಮೌನದ ಯಾತನೆಯನ್ನು ತಾಳಲಾರದೆ ಮುರಿದು ಕೇಳಿದಳು ಫ್ಲೋರಾ.

"ಟೀ – ಹೂ. ಆದರೆ ಪ್ರಭಾ, ನಿನಗೆ ಟೀ ಬೇಕೋ, ಕಾಫಿ ಬೇಕೋ...." ಲೀಲಾ ಪ್ರಭಾವತಿಯುನ್ನು ಕೇಳಿದಳು.

"ಏನಾದರೂ ತರಿಸಿ, ನನಗೇನೂ ಬೇಡ."

"ಫ್ಲೋರಾ, ಅವಳಿಗೆ ಕಾಫಿ ಹೇಳು. ನನಗೆ ಯಾವುದಾದರೂ ಆಗುತ್ತದೆ."

ಹಾಗಾದರೆ ಮೂವರಿಗೂ ಕಾಫಿಯನ್ನೇ ಹೇಳುತ್ತೇನೆ."

"ಯಾವುದೋ ಆಡಬೇಕಾದ ವಿಷಯವನ್ನು ತಪ್ಪಿಸಿಕೊಳ್ಳಲು, ಕಾಫಿ-ಟೀಗಳ ಚರ್ಚೆ ಮಾಡುತ್ತಿದ್ದಂತಿತ್ತು, ಅವರು. ಅಟೆಂಡರನ್ನು ಕರೆದು, ಕಾಫಿ ತರಲು ಹೇಳಿ ಬಂದು ಫ್ಲೋರಾ ನಗುತ್ತಾ –

"ಕ್ಷುಲ್ಲಕ ವಿಷಯಗಳಿಗೂ ಕೆಲಬಾರಿ ನಾವು ಋಣಿಯಾಗಬೇಕಾಗುತ್ತದೆ," ಎಂದಳು.

ಲೀಲಾವತಿ ಮೌನವಾಗಿ ತಲೆಹಾಕಿ, ಅವಳ ಮಾತಿಗೆ ತನ್ನ ಸಮ್ಮತಿಯನ್ನು ಸೂಚಿಸಿದಳು. ಮತ್ತೆ ಮೂವರೂ ಸುಮ್ಮನೆ ಕುಳಿತರು. ಸ್ವಲ್ಪ ಹೊತ್ತಿನಲ್ಲೇ ಅಟೆಂಡರು ಕಾಫಿಯನ್ನು ತಂದಿತ್ತ. ಮೂವರಿಗೂ ತಾನೇ ಕಾಫಿಯನ್ನು ಸರಿಮಾಡಿದಳು ಫ್ಲೋರಾ.

"ನನಗೆ ಬೇಡ ಫ್ಲೋರಾ. ನೀವಿಬ್ಬರೂ ಕುಡಿಯಿರಿ," ಪ್ರಭಾವತಿ ಹೇಳಿದಳು.

"ಡೋಂಟ್ ಬಿ ಫೂಲಿಷ್. ಇದು ಅನಗತ್ಯ ದ್ವೇಷ. ಕಾಫಿ ನಿನಗೇನೂ ಮಾಡಿಲ್ಲ ಕುಡಿ," ಫ್ಲೋರಾ ಬಲವಂತ ಮಾಡಿದಳು.

"ಖಂಡಿತವಾಗಿಯೂ ನನಗೆ ಬೇಡ ಫ್ಲೋರಾ – ನಿಮ್ಮಿಬ್ಬರಿಗೂ ನನ್ನಿಂದ ಎಷ್ಟು ತೊಂದರೆ."

"ಒಬ್ಬರಿಗೊಬ್ಬರು ತೊಂದರೆ ಕೊಡದಿದ್ದರೆ ಮನುಷ್ಯರಾಗಿ ಹುಟ್ಟಿದ್ದಕ್ಕೇನು ಸಾರ್ಥಕ. ಹುಟ್ಟಿದಾಗ ತಾಯಿಗೆ – ಸತ್ತಾಗ ಹೆಣ ಹೊರುವವನಿಗೆ, ಇದ್ದಾಗ ಎಲ್ಲರಿಗೂ ತೊಂದರೆ ಕೊಡಲೆಂದೇ ನಾವಿರುವುದು. ತೊಂದರೆ ಕೊಡದವರನ್ನು ಜಗತ್ತು ಲಕ್ಷಿಸುವುದಿಲ್ಲ ಪ್ರಭಾ."

"ನನ್ನಿಂದ ಯಾರಿಗೇನು ಉದ್ಧಾರ. ನನ್ನಲ್ಲಿ ಆಸೆ ಇಟ್ಟುಕೊಂಡವರೆಲ್ಲರ ಎದೆಗೂ ದುಃಖ ಕೊಟ್ಟೆ – ಲೀಲಾ, ನಿನ್ನ ಸ್ನೇಹಕ್ಕೆ ತಕ್ಕವಳಾಗಲಿಲ್ಲ ನಾನು. ನೀನು ಏನಾಗಬಾರದೆಂದು ಬಯಸಿದೆಯೋ ಅದೇ ಆಯಿತು ನಾನೂ ಪ್ರಯತ್ನಪಟ್ಟೆ ಲೀಲಾ, ತುಂಬಾ – ಆದರೂ ಸಾಧ್ಯವಾಗಲಿಲ್ಲ." ಅಪರಾಧಿಯಂತೆ ವಿಹ್ವಲಳಾಗಿ ಹೇಳಿದಳು ಪ್ರಭಾವತಿ.

"ಈಗ ಆ ಪಶ್ಚಾತ್ತಾಪದಿಂದೇನು ಉಪಯೋಗ ಪ್ರಭಾ ಡಿಯರ್. ಕೆಟ್ಟ ಕನಸಿನಂತೆ ಅದನ್ನು ಮರೆತುಬಿಡು. ಮುಂದೇನು ಮಾಡಬೇಕೆಂದು ಯೋಚಿಸು" – ಫ್ಲೋರಾ ಹೇಳಿದಳು.

"ನೀನೇ ಹೇಳು ಫ್ಲೋರಾ, ನಾನೇನು ಮಾಡಲಿ?"

"ನಾನೂ ಹೇಳಲಾರೆ ಪ್ರಭಾ. ಬಹಳ ಯೋಚಿಸಿದೆ, ನನಗೇನೂ ತೋಚಲಿಲ್ಲ. ಏನಾದರೂ ದಾರಿ ತೋರಿದರೆ ಲೀಲಾವತಿ ಹೇಳಬೇಕು."

ಪ್ರಭಾ ಕಡೆದ ವಿಗ್ರಹದಂತೆ ಮೌನವಾಗಿ ಕುಳಿತ ಲೀಲಾವತಿಯನ್ನು ನೋಡಿದಳು.

"ನಾನು – ನಾನು ಹೇಳುವುದೇ? ನಾನೇನು ಹೇಳಲಿ ಪ್ರಭಾ. ಏಕೋ ನನಗೆ ನನ್ನಲ್ಲಿದ್ದ ನಂಬಿಕೆಯೇ ಸಡಲಿಹೋಗಿದೆ, ಹೀಗೆ ಮಾಡಿದರೆ ಹೀಗಾಗುತ್ತದೆ ಎಂದು ಏನೋ ಲೆಕ್ಕ ಹಾಕಿದ್ದೆ. ಆದರೆ ನನ್ನ ಲೆಕ್ಕಾಚಾರ, ನಂಬಿಕೆಗಳು ಯಾವುದೂ ಸರಿಯಲ್ಲವೇನೋ ಎನಿಸುತ್ತದೆ. ಸಂಸಾರ – ಪ್ರೇಮ – ತಾಳ್ಮೆ – ಏನೇನೋ ಹುಚ್ಚು ನಂಬಿಕೆ ಇಟ್ಟುಕೊಂಡಿದ್ದೆ. ಆದರೆ ನನಗೆ ಮಾತ್ರವೇ ಅವು ಸರಿಯೇನೋ. ನಮ್ಮ ನಂಬಿಕೆಗಳನ್ನು ಬೇರೆಯವರಿಗೆ ಉಪದೇಶ ಮಾಡುವುದು ಭಯಂಕರ ಅಪರಾಧವೆಂದೇ ಕಾಣುತ್ತೆ ಪ್ರಭಾ – ಎರಡು ಸಾರಿ ಪ್ರಯತ್ನಪಟ್ಟೆ, ಎರಡು ಬಾರಿಯೂ ವಿಫಲಳಾದೆ. ಕಡೆಗೆ ಇವತ್ತು ಶಾಲಿನಿ ಹೇಳುವುದೇ ಸರಿಯೇನೋ ಅನಿಸುತ್ತದೆ."

"ಏನು ಹೇಳಿದಳು ನಿಮ್ಮ ಶಾಲಿನಿ?" – ಫ್ಲೋರಾ ಕೇಳಿದಳು.

"ಗಂಡು–ಹೆಣ್ಣಿನ ಈ ಸಮಸ್ಯೆ ತೀರಬೇಕೆಂದರೆ ಈ ಹಳೆಯ ಜಗತ್ತಿಗೇ ಬೆಂಕಿ ಹಚ್ಚಿ ಹೊಸ ಜಗತ್ತು ಕಟ್ಟಬೇಕು. ಪ್ರೇಮ, ಸ್ನೇಹ, ಸಂಸಾರ ಎಲ್ಲವೂ ಈಗಿನ ಸಮಾಜ ರೀತಿಯಲ್ಲಿ ಬರೀ ಬೇಡಿಗಳಂತೆ."

"ಹದಿನಾರಣೆಯ ಸತ್ಯ ಆ ಮಾತು. ಬೆಂಕಿ ಹಚ್ಚುವ ಕೆಲಸ ಯಾರಾದರೂ ಮಾಡುವುದಿದ್ದರೆ ಅದಕ್ಕೆ ನಾನೂ ಸಿದ್ಧವಾಗಿದೇನೆ," – ಫ್ಲೋರಾ ಉತ್ಸಾಹದಿಂದ ಹೇಳಿದಳು.

ಅವಳ ಮಾತು ಕೇಳಿ ಲೀಲಾವತಿಗೆ ಯಾತನೆಯಾದಂತೆ ಕಂಡಿತು. ಅದನ್ನು ಗಮನಿಸಿ ಫ್ಲೋರಾ,

"ನನ್ನ ಮಾತಿನಿಂದ ನಿಮಗೆ ನೋವಾಗುವುದೇನೋ. ನಿಮ್ಮ ಶಾಲಿನಿ ಆ ಮಾತು ಏಕಾಡಿದಳೋ ನಾನರಿಯೆ. ಆದರೆ ಇಷ್ಟು ನಿಜ – ನಾವು ಯಾವುದು

ಒಳ್ಳೆಯದು ಎಂದು ನಂಬಿದ್ದೇವೊ, ಅದನ್ನೆಲ್ಲಾ ಗಂಡು ನಂಬಿದಂತೆ ನಟಿಸಿ, ಆಚರಣೆಯಲ್ಲಿ ಪಾಲಿಸಿದೆ, ಅದನ್ನು ಬಂಧನವಾಗಿ ನಮ್ಮ ಮೇಲೆ ಹೇರಿದ್ದಾನೆಂಬುದು ನಿಜ. ಅಲ್ಲದೆ ಸುಡುವುದು ಕೆಟ್ಟದೇನೂ ಅಲ್ಲ, ಲೀಲಾವತಿ, ಕಾಡು ಬೆಳಸಬೇಕಾದರೆ ಸುಟ್ಟೇ ಮತ್ತೆ ಬೆಳಸುತ್ತಾರೆ. ಈ ಅಗ್ನಿಚಿಕಿತ್ಸೆ ನಮ್ಮ ಸಮಾಜಕ್ಕೂ ಆಗಬೇಕು." – ತನ್ನ ಮಾತನ್ನು ವಿವರಿಸಿದಳು.

"ನೀನೂ ಹಾಗೇ ಹೇಳುತ್ತೀಯಾ? ಶಾಲಿನಿಯೊಬ್ಬಳೇ ಹಾಗೆ ಹೇಳುವುದೆಂದಿದ್ದೆ."

"ನಾನು ಹೇಳದೆ, ಆಕೆ ಮಾತ್ರ ಹೇಳಿದರೆ ಸರಿಯೆ?"

"ನನ್ನನ್ನು ತಪ್ಪು ತಿಳಿದುಕೊಳ್ಳಬೇಡ ಫ್ಲೋರಾ. ಶಾಲಿನಿ ಈ ಜೀವನದಲ್ಲಿ ಪಡಬಾರದ ಕಷ್ಟ ಅನುಭವಿಸಿದ್ದಳು. ಅವಳು ಅನುಭವಿಸಿದಷ್ಟು ಚಿತ್ರಹಿಂಸೆ, ಯಮಯಾತನೆಯನ್ನು ನಾನೂ ಅನುಭವಿಸಿದ್ದರೆ, ನಾನೂ ಹಾಗೇ ಹೇಳುತ್ತಿದ್ದೆನೋ ಏನೋ! ಗಂಡ, ಅತ್ತೆ, ಓರಗಿತ್ತಿಯರು ಎಲ್ಲರೂ ಸೇರಿಕೊಂಡು ಒಂದಾಗಿ ಬೇಟೆಯಾಡಿದರು ಅವಳನ್ನು– ಹೋಗಲಿ ಬಿಡು, ಎಲ್ಲಿಯ ಮಾತು ಈ ಹೊತ್ತಿನಲ್ಲಿ. ಇಲ್ಲಿರುವ ದುಃಖವೇ ಎಲ್ಲರೂ ಹಂಚಿಕೊಳ್ಳುವಷ್ಟಿದೆ" – ಲೀಲಾವತಿ ನಿಟ್ಟುಸಿರಿಟ್ಟು ಹೇಳಿದಳು.

"ಸಂತೋಷವಿರುವುದು – ಇತರರ ದುಃಖ ಕೇಳುವುದರಲ್ಲಿಯೇ ಅಲ್ಲವೇ ಪ್ರಭಾ? ಅವಳು ಬೇಡವೆಂದರೆ ಹೇಳಬೇಡ." – ಫ್ಲೋರಾ ಹೇಳಿದಳು.

"ಅದೇನು ಹೇಳು ಲೀಲಾ."

"ನಮ್ಮ ಮನೆಯಿದೆಯಲ್ಲಾ – ಅದರ ಮೇಲಂತಸ್ತಿನಲ್ಲಿ ಒಂದು ಗುಜರಾತಿ ಸಂಸಾರವಿದೆ. ಉಳಿದವರೆಲ್ಲಾ ಈಗಲೂ ಇದಾರೆ, ಶಾಲಿನಿ ಮಾತ್ರ ಇಲ್ಲ. ಎಲ್ಲರೂ ಪಶುಗಳೇ. ಯಾರಿಗೂ ಎಳ್ಳುಕಾಳು ಮುಳ್ಳು ಮೊನೆಯಷ್ಟಾದರೂ ಸಂಸ್ಕಾರವಿಲ್ಲ. ಅವರಲ್ಲಿ ಎರಡನೆ ಮಗ ನಾಥೂರಾಮನ ಹೆಂಡತಿ ಶಾಲಿನಿ. ಅತ್ತೆ ಎನ್ನಿಸಿಕೊಂಡವಳು, ಈ ಹುಡುಗಿಯನ್ನು ಮನೆಗೆ ತಂದುಕೊಳ್ಳುವಾಗ ಎಷ್ಟು ಉತ್ಸಾಹವಾಗಿದ್ದಳು ಎಂತ. ಮದುವೆಯಾದ ಮೇಲೂ ಅಷ್ಟೆ – ನನ್ನ ಸೊಸೆ ಹಾಗೆ, ಹೀಗೆ. ಅಂಥ ಹುಡುಗಿ ಸಾವಿರಕ್ಕೊಬ್ಬರು ಸಿಕ್ಕುವುದಿಲ್ಲ. ನನ್ನ ಮಗನ ಪುಣ್ಯ ಬಹಳ ದೊಡ್ಡದು ಎಂತೆಲ್ಲಾ ಹೇಳುತ್ತಿದ್ದವಳಿಗೆ, ಸೊಸೆ ಮನೆಗೆ ಬಂದ ಮೇಲೆ ಏನಾಯಿತೋ, ಆ ಹುಡುಗಿಯ ಮೇಲೆ ದ್ವೇಷ ಸಾಧಿಸಲಾರಂಭಿ

ಸಿದಳು. ಈ ಹುಡುಗಿ ನಿಂತರೆ ತಪ್ಪು, ಕೂತರೆ ತಪ್ಪು. ದಿನಕ್ಕೆ ನಾಲ್ಕು ಸಲ ಸೊಸೆಯ ಮೇಲೆ ದೂರು ಹೇಳಲು ಬರುತ್ತಿದ್ದಳು ನನ್ನ ಹತ್ತಿರ.

"'ನಿನ್ನ ಸೊಸೆ ಅಷ್ಟು ಒಳ್ಳೆಯವಳು ಎನ್ನುತ್ತಿದ್ದೆಯಲ್ಲಾ, ಇಷ್ಟು ಬೇಗ ಕೆಟ್ಟವಳಾದಳೇ ?' ಅಂದರೆ, –'ನನ್ನ ಸೊಸೆ ಶುದ್ಧ ಚಂಡಾಲಿ ಲೀಲಾ ಬಹೆನ್, ಮನೆಗೆ ಬರೋಕೆ ಮುಂಚೆ ಬೆಕ್ಕಿನ ಹಾಗಿದ್ದಳು. ಈಗ ಗಂಡನ್ನ ತನ್ನ ಬಲೆಯಲ್ಲಿ ಹಾಕಿಕೊಂಡು, ನನ್ನ ಮೇಲೇ ಮಗನ್ನ ಎತ್ತಿ ಕಟ್ಟುತ್ತಾಳೆ. ಮಾರೀನ ಮನೆಗೆ ತಂದ ಹಾಗಾಯಿತು' ಎನ್ನುತ್ತಿದ್ದಳು ಅಳುತ್ತಾ.

"ನನಗಾಗ ಶಾಲಿನಿಯ ಪರಿಚಯುವಿರಲಿಲ್ಲ. ಎಂಥೆಂಥ ಹೆಂಗಸರೋ ಇರುತ್ತಾರೆ. ಇವಳೂ ಅಂಥವಳೊಬ್ಬಳಿರಬೇಕು. ಅವರ ಸಂಸಾರ ಹೇಗಾದರೆ ನನಗೇನು ಅಂತ ಸುಮ್ಮನಿದ್ದುಬಿಟ್ಟೆ.

"ನಾಲ್ಕು ದಿನವಾದ ಮೇಲೆ ಶಾಲಿನಿಯ ಪರಿಚಯವೂ ಆಯಿತು. ಅವಳ ಪರಿಚಯುವಾದ ಮೇಲೆ, ಅವಳ ಅತ್ತೆ ಹೇಳಿದ ಯಾವ ಮಾತೂ ನಿಜವಲ್ಲವೆಂದು ನನಗೇ ಮನವರಿಕೆಯಾಯಿತು. ಶಾಲಿನಿ ತುಂಬಾ ಒಳ್ಳೆ ಹುಡುಗಿ. ಗಂಡನ ಮೇಲೆ ಇನ್ನಿಲ್ಲದಷ್ಟು ಪ್ರೀತಿ, ದೇವರು ಎನ್ನುವಷ್ಟು ಭಕ್ತಿ. ಗಂಡ ಕಾಲಿನಲ್ಲಿ ತೋರಿದ್ದನ್ನು ತಲೆಯ ಮೇಲೆ ಹೊತ್ತು ಮಾಡಲು ಸಿದ್ಧವಿದ್ದಳು. ಅತ್ತೆ, ಓರಗಿತ್ತಿ, ತನ್ನ ಗಂಡನ ಅಣ್ಣ, ಅವರ ಮಕ್ಕಳು ಎಲ್ಲರಲ್ಲೂ ಪ್ರೀತಿಯೇ. ಅವರನ್ನೂ ಒಲಿಸಿಕೊಳ್ಳಲು ಬೇಕಾದದ್ದು ಮಾಡಲು ಸಿದ್ಧವಿದ್ದಳು. ಆದರೆ ಅವರಿಗೆಲ್ಲಾ ಅವಳ ಪ್ರೀತಿ, ವಿಶ್ವಾಸದ ಬೆಲೆಯೇ ಇದ್ದಂತಿರಲಿಲ್ಲ. ಕತ್ತೆಯ ಹಾಗೆ ಚಾಕರಿ ಮಾಡಿಸುತ್ತಿದ್ದರು. ಅಡಿಗೆ, ಕಸ–ಮುಸುರೆ, ಬಟ್ಟೆ ಒಗೆಯುವುದು, ನೀರು ತುಂಬುವುದು, ಅವರಿಗೆ ಬೇಕಾದದ್ದನ್ನು ಮಾಡುವುದು–ಎಲ್ಲಕ್ಕೂ ಅವಳೇ. ಕೆಲಸಕ್ಕೆ ಸೋಮಾರಿತನ ಮಾಡುವ ಹೆಣ್ಣಲ್ಲ ಶಾಲಿನಿ. ಅಷ್ಟಲ್ಲ, ಇನ್ನಷ್ಟು ಕೆಲಸ ಮಾಡಲಿಕ್ಕೂ ಸಿದ್ಧವಾಗಿದ್ದಳು. ಅವಳಿಗೊಂದೇ ದುಃಖ—

"ಎಷ್ಟು ಕೆಲಸ ಬೇಕಾದರೂ ಮಾಡಿಸಲಿ, ಅದಕ್ಕೇ ಅಲ್ಲವೇ ನಾನಿರೋದು. ಆದರೆ ಸುಮ್ಮಸುಮ್ಮನೆ ಇಲ್ಲದ ಚಾಡಿ ಹೇಳಿ, ನನ್ನ ಗಂಡನಿಗೆ ನನ್ನನ್ನು ಕಂಡರೆ ಆಗದ ಹಾಗೆ ಮಾಡುತ್ತಾರೆ. ನಾನೇನು ಮಾಡಲಿ ಬಹೆನ್' ಎಂದು, ಕಣ್ಣೀರಿನಲ್ಲಿ ಕರಗಿಹೋಗುತ್ತಿದ್ದಳು.

"'ನಿನ್ನ ಗಂಡ ಅವರ ಮಾತೇಕೆ ನಂಬುತ್ತಾನೆ, ಅವನಿಗೆ ಕಣ್ಣಿಲ್ಲವೇ ?

ಅವರು ಏನಾದರೂ ಹೇಳಲಿ, ನಿನ್ನನ್ನು ಕೇಳಿದರೆ ನಿಜ ಗೊತ್ತಾಗುವುದಿಲ್ಲವೇ ?' ಎಂದರೆ-

"'ಅವರಿಗೆ ಅದಕ್ಕೆಲ್ಲಾ ಎಲ್ಲಿ ಬಿಡುವು ಬಹೆನ್. ಹಗಲು ಹೋದರೆ ಕತ್ತೆ ಹಾಗೆ ದುಡಿದು ರಾತ್ರಿ ಮನೆಗೆ ಬರುತ್ತಾರೆ. ಬಂದ ಕೂಡಲೇ ಇವರು ಏನಾದರೂ ಹೇಳಿ ಅವರನ್ನು ರೇಗಿಸುತ್ತಾರೆ. ಅತ್ತೆ ಚಾಡಿ ಹೇಳಿ ಅಳುತ್ತಾರೆ. ದುಡಿದು ಬೇಸತ್ತು ಮನೆ ಕಂಡರೆ ಸಾಕು ಅಂತ ಬಂದ ಅವರು ನನ್ನ ಮೇಲೆ ರೇಗಿ, ಹೊಡೆಯುತ್ತಾರೆ. ಅದೊಂದೇ ಅವರಿಗೆ ತಿಳಿಯುವುದು ಬಹೆನ್.'

"'ನಿನ್ನ ಗಂಡ ಮನುಷ್ಯನಲ್ಲ, ಪಶು' ಎಂದರೆ, 'ಅಲ್ಲ ಲೀಲಾ ಬಹೆನ್, ಅವರು ದೇವರಂಥವರು, ಅವರೇನು ಮಾಡಬೇಕು ಹೇಳು, ಕಷ್ಟಪಟ್ಟು ಬಂದವರಿಗೆ ಒಂದು ಗಳಿಗೆ ಹಾಯಾಗಿರಲೂ ಬಿಡದಿದ್ದರೆ. ದಿನಾ ಹೀಗಾದರೆ ಯಾರಿಗೆ ರೇಗುವುದಿಲ್ಲ? ಅವರು ಯಾರ ಮೇಲೆ ತಮ್ಮ ಸಿಟ್ಟು ತೋರಿಸಬೇಕು, ನನ್ನ ಮೇಲೇ ತಾನೇ ? ಅದಕ್ಕೇ ಹಾಗೆ ಮಾಡುತ್ತಾರೆ.' ಹೀಗೆಂದು ಗಂಡನ ಪರ ವಾದ ಮಾಡುತ್ತಿದ್ದಳು

"'ನಿನ್ನ ಓರಗಿತ್ತಿ ಎಂಥ ಹೆಂಗಸು. ಅವಳೂ ಹೆಂಗಸಲ್ಲವೇ ? ಅವಳು ಹೇಗೆ ಸುಮ್ಮನಿರುತ್ತಾಳೆ, ಇದೆಲ್ಲಾ ನೋಡಿಕೊಂಡು, ಎಂದರೆ,

"'ಆಕೆ ಏನು ಕಡಮೆ ಉರಿದಿದಾಳೇ ಈ ಅತ್ತೆ ಕೈಲಿ, ಲೀಲಾ ಬಹೆನ್. ಈಗ ನಾನು ಬಂದ ಮೇಲೆ, ಅವಳನ್ನು ಕಾಡಿಸುವುದು ಕಡಮೆ ಆಗಿದೆ. ಈಗ ನನ್ನ ಪರ ವಹಿಸಿದರೆ, ಮತ್ತೇನು ಗ್ರಹಚಾರವೋ ಅಂತ, ಅವರು ಹೇಳಿದ್ದಕ್ಕೆ ಹೂಗುಟ್ಟುತ್ತಾಳೆ. ನನ್ನನ್ನು ಉರಿಸಿದರೆ, ಅತ್ತೆಯವರಿಗೆ ಸಂತೋಷವಾಗುತ್ತೆ ಅಂತ, ಅವಳೂ ಆದಷ್ಟು ಕಾಡಿಸುತ್ತಾಳೆ. ಯಾರನ್ನು ಅಂದೇನು ಫಲ-ಬಹೆನ್, ನನ್ನ ಅದೃಷ್ಟ ಕೆಟ್ಟದು. ಒಳ್ಳೆ ಗಂಡನನ್ನು ಕಟ್ಟಕೊಂಡರೂ, ಸುಖಪಡೋದು ನನ್ನ ಹಣೇಲಿ ಬರೀಲಿಲ್ಲ' ಅಂತ ಕಣ್ಣೀರು ಹಾಕುತ್ತಿದ್ದಳು.

"ಅದಿರಲಿ-ಆ ಗಂಡ ಅನ್ನಿಸಿಕೊಂಡವನು ಆ ಹುಡುಗಿಯನ್ನು ಹೊಡೆಯುವುದು ಎಂದರೇನು-ನಾನೂ ನೋಡಿದೇನೆ ಪ್ರಭಾ-ಗಂಡಂದಿರು ಸಿಟ್ಟನಲ್ಲಿ ಒಂದು ಏಟು ಹಾಕಬಹುದು ಅನ್ನು, ಆದರೆ ಹಾಗೆ ಹೊಡೆಯುವುದನ್ನು ಮಾತ್ರ ನಾನೆಲ್ಲೂ ಕಂಡಿಲ್ಲ. ಹೊಡೆದರೆ ದನಕ್ಕೆ ಹೊಡೆದ ಹಾಗೆ. ಒಂದು ದಿನ ಹೊಡೆದರೆ, ಬಾಸುಂಡೆ ಮೂರು ಮೂರು ದಿನ ಮಾಯುತ್ತಿರಲಿಲ್ಲ. ಜೇರೆಯವನು

ಯಾರಾದರೂ ಹಾಗೆ ಏಟು ತಿಂದಿದ್ದರೆ, ವಾರಗಟ್ಟಲೆ ಹಾಸಿಗೆ ಬಿಟ್ಟೇ ಮೇಲೇಳುತ್ತಿರಲಿಲ್ಲ. ಅಂಥ ಏಟು ಶಾಲಿನಿಗೆ ದಿನ ಬಿಟ್ಟು ದಿನವಾದರೂ ಬೀಳುತ್ತಿತ್ತು. ಹಾಗೂ ಬಾಯಿ ಮುಚ್ಚಿಕೊಂಡು ದುಡೀತಾ ಇದ್ದಳು.

"ಎಷ್ಟಾದರೂ ಅವಳೂ ಮನುಷ್ಯಳು ತಾನೇ. ಒಂದೊಂದು ದಿನ ಆ ವ್ಯಥೆ ತಡೆಯಲಾರದೆ–'ಬಹೆನ್' ನಾನಿಲ್ಲಿ ಬದುಕಲಾರೆ. ಎಲ್ಲಾದರೂ ಓಡಿ ಹೋಗಿ ಪ್ರಾಣ ಕಳೆದುಕೊಳ್ಳುತ್ತೇನೆ'" ಎಂದು ಗೋಳಾಡುವಳು.

"ಅಂಥ ಹೊತ್ತಿನಲ್ಲಿ ನಾನೇ ಅವಳಿಗೆ ಸಮಾಧಾನ ಹೇಳುತ್ತಾ ಇದ್ದೆ–'ಹಾಗೆಲ್ಲಾದರೂ ಮಾಡಿಕೊಂಡೀಯ, ದುಃಖದ ಹೊತ್ತಿನಲ್ಲಿ. ಎಷ್ಟು ದಿನ ಹೀಗಿರುತ್ತೆ? ಇಷ್ಟು ದಿನ ಅನುಭವಿಸಿ ಈಗ ಪ್ರಾಣ ಬಿಟ್ಟರೆ ಏನು ಬಂದ ಹಾಗಾಯಿತು? ನಾಲ್ಕು ದಿನ ಕಾಲ ಹಾಕು. ನಿಮಗೂ ಮಕ್ಕಳು ಮರಿ ಅಂತ ಆದರೆ, ನಿನ್ನ ಗಂಡ ತಾನೇ ದಾರಿಗೆ ಬರುತ್ತಾನೆ, ಅಂತ ಪ್ರಭಾಗೆ ಹೇಳಿದ ಹಾಗೇ, ಅವಳಿಗೂ ತಾಳ್ಮೆಯ ಉಪದೇಶ ಮಾಡಿದೆ ಫ್ಲೋರಾ. ಆದರೆ ಆಗಲೂ ಅದರಿಂದ ಉಪಯೋಗವಾಗಲಿಲ್ಲ.

"ನನಗಂತೂ ಆ ಹುಡುಗಿಯ ಗೋಳು ಕೇಳಿ ಸಾಕಾಗಿಹೋಯಿತು. ಕಡೆಗೊಂದು ದಿನ ತಡೆಯಲಾರದೆ ಅವಳ ಅತ್ತೆ ಗೋಧೂಬಾಯಿಯನ್ನು ಕರೆದು ಚೆನ್ನಾಗಿ ಛೀಮಾರಿ ಮಾಡಿದೆ. 'ನಿನಗೂ ಮಂಕುಬೂದಿ ಚಲ್ಲಿದಳೇ ಆ ಮಾಯಾಂಗನೆ' ಅಂತ ಬಡಿವಾರದ ಮಾತಾಡಿಕೊಂಡು ಹೋದಳು ಅವಳು. ಅವತ್ತಿನಿಂದ ಇದುರಿಗೇ ಕಂಡರೂ ಸುಮ್ಮನೆ ಮುಖ ನೋಡಿ, ಕಣ್ಣೀರು ಹಾಕಿಕೊಂಡು ಹೋಗುತ್ತಿದ್ದಳು ಶಾಲಿನಿ. ಅಷ್ಟು ವಿಶ್ವಾಸವಾಗಿದ್ದವಳು ಹೀಗೇ ಕಾದಳು ಅಂತ ಆಶ್ಚರ್ಯವಾಯಿತು. ಒಂದು ದಿನ ನಾನೇ ಕರೆದು, 'ಹೀಗೇಕೆ ಮಾಡುತ್ತಿ ಶಾಲಿನಿ?' ಅಂತ ಕೇಳಿದೆ. 'ನಿನ್ನ ಕೈಲಿ ಮಾತಾಡಕೂಡದು, ಮಾತಾಡಿದರೆ ನಾಲಿಗೆ ಸೀಳಿಬಿಡುತ್ತೇನೆ, ಅಂತ ಹೇಳಿದಾರೆ ಅತ್ತೆ. ನೀನು ನನ್ನ ಪರವಾಗಿ ಆಕೆಗೆ ಏನೋ ಅಂದಿಯಂತೆ. ಅವತ್ತು ರಂಪೋ ರಾಮಾಯಣ ವಾಗಿ ಹೋಯಿತು. ಕಂಡವರ ಮನೆಗೆ ಹೋಗಿ ಚಾಡಿ ಹೇಳುತ್ತೀಯಾ ಮುಂಡೆ–ಅಂತ ಕಾಲ ಮೇಲೆ ಬರೆ ಹಾಕಿದರು, ಬಹೆನ್. ನನ್ನ ತಪ್ಪು ತಿಳಿದುಕೊಳ್ಳ ಬೇಡಿ' ಅಂತ ಕಳ್ಳತನ ಮಾಡಿದವಳ ಹಾಗೆ ಹೆದರಿಕೊಂಡು ಓಡಿಹೋದಳು. ಅವತ್ತು ನನಗೆ ಬಂದ ಸಿಟ್ಟಿನಲ್ಲಿ ನಾನೂ ಜಗತ್ತಿಗೆ ಬೆಂಕಿ ಹಾಕುವುದಕ್ಕೆ ಸಿದ್ಧ ವಾಗಿದ್ದೆ. ಆದರೇನು ಮಾಡಲಿ–ಹಲ್ಲು ಕಡಿದು ಸುಮ್ಮನಾದೆ.

"ಹೀಗೇ ಅಷ್ಟು ದಿನ ಕಳೆಯಿತು.

"ನಲವತ್ತೆರಡರ ಚಳುವಳಿಯ ಕಾಲ ಬಂತು. ಬೊಂಬಾಯಿನಲ್ಲಿ ಬೀದಿ ಬೀದಿಗೂ ಸಭೆ, ಮೆರವಣಿಗೆ, ಲಾಠೀ ಛಾರ್ಜು, ಗೋಲೀಬಾರ್. ಗಾಂಧೀಜಿ ಹೆಸರು ಹೇಳಿದರೆ ಸಾಕು – ಜೈಲಿಗೆ ತುಂಬುತ್ತಿದ್ದರು. ಆ ಹೊತ್ತಿನಲ್ಲಿ ಶಾಲಿನಿಗೆ ಅದೇನು ಬುದ್ಧಿ ಬಂತೋ – ದೇವರೇ ಬಲ್ಲ. ಪೇಟೆಗೆ ಸಾಮಾನು ತರಲು ಹೋದವಳು, ತಾನೂ ಮೆರವಣಿಗೆಯ ಜೊತೆ ಹೋಗಿ, ಬಾವುಟ ಹಿಡಿದು ಜೈಲಿಗೆ ಹೋಗಿಬಿಟ್ಟಳು—"

"ಬಹಳ ಒಳ್ಳೆ ಕೆಲಸ ಮಾಡಿದಳು," ಎಂದು ಫ್ಲೋರಾ ಉತ್ಸಾಹದಿಂದ ಚಪ್ಪಾಳೆ ತಟ್ಟಿ ಹೇಳಿದಳು. "ಅತ್ತೆಯ ಕಾಟ ತಪ್ಪಿಸಲು ಅತ್ಯುತ್ತಮ ಉಪಾಯ. ಜೈಲಿಗಿಂತ ಉತ್ತಮ ರಕ್ಷಣೆಯ ಸ್ಥಳವೇ ಇಲ್ಲ ಈ ದೇಶದಲ್ಲಿ."

"ಅತ್ತೆ, ಗಂಡ, ಓರಗಿತ್ತಿ ಅವರೆಲ್ಲಾ ಏನು ಮಾಡಿದರು ಆಗ?" ಪ್ರಭಾ ಕೇಳಿದಳು.

"ಏನು ಮಾಡುತ್ತಾರೆ. ಅವಳ ಹೆಸರು ಹೇಳಲೂ ಅವರಿಗೆ ಹೆದರಿಕೆ. ತಮ್ಮನ್ನೆಲ್ಲಿ ಜೈಲಿಗೆ ಕೂಡಿಸುತ್ತಾರೋ ಎಂತ. ಅವಳನ್ನು ಬೈದರು, ಶಪಿಸಿದರು– ಸುಮ್ಮನಾದರು. ನಾಲ್ಕು ದಿನ ಕಳೆದ ಮೇಲೆ ಗೋಧೂಬಾಯಿ ತನ್ನ ಮಗನಿಗೆ ಇನ್ನೊಂದು ಮದುವೆ ಮಾಡಿ, ಸೇಡು ತೀರಿಸಿಕೊಂಡೆ ಎಂದು ತೃಪ್ತಳಾದಳು."

"ಆ ಸೊಸೆಯನ್ನೂ ಶಾಲಿನಿಯನ್ನು ಉರಿಸಿದ ಹಾಗೇ ಉರಿಸಿದರೋ?" ಪ್ರಭಾ ಕೇಳಿದಳು.

"ಇವರು ಉರಿಸಿದರೆ ಅವಳು ಉರಿಯಬೇಕಲ್ಲ. ಗಂಡ ಅತ್ತೆಯ ಮಾತು ಕೇಳಿ ಹೊಡೆಯಲು ಬಂದಾಗ 'ನನ್ನ ಮೈ ಮೇಲೆ ಕೈಹಾಕಿದರೆ ನಿನ್ನೆದುರಿಗೇ ಬೇರೆಯವನನ್ನು ಕಟ್ಟಿಕೊಳ್ಳುತ್ತೇನೆ' ಎಂದಳು. ಗಂಡ ಬಾಯಿ ಮುಚ್ಚಿಕೊಂಡ. ಅತ್ತೆ ಸೌಟು ಹಿಡಿದರೆ, ಇವಳು ಪೊರಕೆ ತೆಗೆದುಕೊಂಡಳು. ಆಗ– ಗೋಧೂಬಾಯಿಯೂ ಮೆತ್ತಗಾದಳು. ಈಗ ಯಾವಾಗಲಾದರೂ ಒಂದೊಂದು ಸಲ ಗೋಧೂಬಾಯಿ ಮನೆಗೆ ಬರುತ್ತಾಳೆ. 'ಹೊಸ ಸೊಸೆ ಹೇಗಿದಾಳೆ ಗೋಧೂ ಬಾಯಿ' ಎಂದರೆ 'ಬಂಗಾರದಂಥ ಸೊಸೆ. ಆ ಪೀಡೆ ಹೋದದ್ದೇ ಒಳ್ಳೆಯ ದಾಯಿತು' ಎನ್ನುತ್ತಾಳೆ. ಅವಳ ಮಾತು ಕೇಳಿ ನನಗೆ ನಗು ಬರುತ್ತದೆ."

"ಆಮೇಲೆ – ಶಾಲಿನಿಯದೇನಾಯಿತು ಲೀಲಾ?"–ಫ್ಲೋರಾ ಕುತೂಹಲ ವನ್ನು ತಡೆಯಲಾರದೆ ಕೇಳಿದಳು.

"ಅದಾದ ಮೇಲೆ ನಾಲ್ಕೈದು ತಿಂಗಳ ಕಾಲ ನನಗೂ ಸಿಕ್ಕಿರಲಿಲ್ಲ. ಆಮೇಲೆ ಒಮ್ಮೆ ಅಕಸ್ಮಾತ್ತಾಗಿ ಪೇಟೆಯಲ್ಲಿ ಸಿಕ್ಕಿದಳು. ತುಂಬಾ ಬದಲಾಯಿಸಿ ಹೋಗಿದ್ದಳು ಶಾಲಿನಿ. 'ಈಗ ಎಲ್ಲಿದೀಯ, ಏನು ಮಾಡುತ್ತಿದೀಯ ?'-ಅಂತ ವಿಚಾರಿಸಿದೆ. 'ಖಟಾವ್ ಬಟ್ಟೆ ಗಿರಣಿಯಲ್ಲಿ ಪ್ರಿಂಟಿಂಗ್ ಶಾಖೆಯಲ್ಲಿ ಕೆಲಸ ಮಾಡುತ್ತಿದೀನಿ' ಅಂದಳು. 'ಜೈಲಿನಿಂದ ಯಾವಾಗ ಬಂದೆ, ಅಲ್ಲೇನಾಯಿತು' ಅಂತ ಕೇಳಿದೆ. ತನ್ನ ಕಥೆಯೆಲ್ಲಾ ಹೇಳಿದಳು. ಜೈಲಿನಲ್ಲಿದ್ದಾಗ ಅವಳಿಗೆ ಅಲ್ಲಿದ್ದ ಒಬ್ಬ ಕಮ್ಯುನಿಸ್ಟ್ ಖೈದಿಯ ಪರಿಚಯವಾಯಿತಂತೆ. ಆತ ಇವಳ ಕಥೆಯನ್ನೆಲ್ಲಾ ಕೇಳಿ 'ಇದು ನಿನ್ನೊಬ್ಬಳ ಅವಸ್ಥೆಯೇ ಅಲ್ಲ, ಹಿಂದೂದೇಶದಲ್ಲಿ ಲಕ್ಷಾಂತರ ಜನ ಹೆಂಗಸರು ಹೀಗೇ ಕಷ್ಟಪಡುತ್ತಿದ್ದಾರೆ. ಅತ್ತೆ ಮಾವ, ಬೇಡದ ಗಂಡಂದಿರ ಸಮಸ್ಯೆಯೊಂದೇ ಅಲ್ಲ,ನೂರಾರು ಬೇರೆ ಸಮಸ್ಯೆಗಳೂ ಹೆಂಗಸರಿಗಿದೆ. ಮುಖ್ಯವಾಗಿ ಇದು ಹಣಕ್ಕೆ ಸಂಬಂಧಿಸಿದ್ದು. ತಾನು ದುಡಿಯುತ್ತೇನೆ ಎಂಬ ಬಲದ ಮೇಲೆ, ಗಂಡಸು, ಹಣ ಗಳಿಸುವ ಸಾಧನವನ್ನೆಲ್ಲಾ ತಾನೇ ವಶಪಡಿಸಿ ಕೊಂಡು, ಹೆಂಗಸನ್ನೂ ಗುಲಾಮಳನ್ನಾಗಿ ಮಾಡಿದ್ದಾನೆ. ಹೆಂಗಸರ ಹಾಗೇ, ಕೂಲಿಗಾರರು, ರೈತರು ಎಲ್ಲರೂ ನರಳುತ್ತಿದಾರೆ. ಇದು ಎಲ್ಲಾ ಒಟ್ಟಿಗೇ ತೊಲಗ ಬೇಕು. ಅದಕ್ಕೆ ಕ್ರಾಂತಿಯಾಗಿ, ಇವತ್ತು ಜನರ ಮೇಲೆ ಅತ್ಯಾಚಾರ ಮಾಡುತ್ತಿರುವವರನ್ನೆಲ್ಲಾ ನಿರ್ಮೂಲ ಮಾಡಿಬಿಡಬೇಕು. ಅದಕ್ಕೆ ದುಡಿಯು ತ್ತೀಯಾ?' ಎಂದು ಕೇಳಿದನಂತೆ. ಶಾಲಿನಿಗೂ ಮೊದಮೊದಲು ಅರ್ಥವಾಗ ದಿದ್ದರೂ, ಆತ ಎಲ್ಲಾ ವಿವರಿಸಿ ಹೇಳಿದ ಮೇಲೆ, ಅವಳಿಗೂ ಆತ ಹೇಳಿದುದು ಸರಿ ಎನಿಸಿತಂತೆ. ಜೈಲಿನಿಂದ ಬಂದ ಮೇಲೆ, ಆ ಪಾರ್ಟಿಯಲ್ಲಿ ಸೇರಿ ಕೆಲಸ ಮಾಡುತ್ತಿದಾಳೆ. ಈಗ ಗಂಡಸು ಅಂದರೆ ಕೆಂಡ ಕೆಂಡವಾಗುತ್ತಾಳೆ ಶಾಲಿನಿ. ಆದರೆ ಹೃದಯ ಮಾತ್ರ ಬೆಣ್ಣೆ."

"ಅವಳ ಮಾತು ನಿನಗೇನನ್ನಿಸಿತು ಲೀಲಾ ?"-ಕುತೂಹಲದಿಂದ ಕೇಳಿದಳು ಪ್ರಭಾವತಿ.

"ಅವಳು ಹೇಳೋದು ಅರ್ಧ ನಿಜ-ಅರ್ಧ ಸರಿಯಲ್ಲ ಎನಿಸಿತು."

"ಏಕೆ?"

"ಗಂಡಸು ಹೆಂಗಸನ್ನು ಕಾಣಬೇಕಾದ ಹಾಗೆ ಕಾಣುತ್ತಿಲ್ಲ, ಅದು ತಪ್ಪಬೇಕು, ಹೆಂಗಸೂ ಮನುಷ್ಯಳಾಗಿ ಬಾಳಬೇಕು ಅನ್ನೋದು ನಿಜ. ಅಷ್ಟು ನಾನೂ ಒಪ್ಪಿಕೋತೀನಿ ಪ್ರಭಾ. ಆದರೆ ಅವಳ ದಾರಿ-ರಕ್ತಪಾತ ಮಾಡಿ

ಬದಲಾಯಿಸಬೇಕು ಅನ್ನೋದು ಹಿಡಿಯೋಲ್ಲ."

"ಹಾಗಾಗದಿದ್ದರೆ ಈ ಗಂಡಸು ಗೂಳಿ ದಾರಿಗೆ ಬರುತ್ತಾನೆಯೇ?" ಫ್ಲೋರಾ ಕೇಳಿದಳು.

"ಹಾಗಾದರೆ ಗಂಡಸರನ್ನೆಲ್ಲಾ ಕೊಂದುಬಿಟ್ಟರೆ ಈ ಪ್ರಪಂಚ ಉದ್ಧಾರವಾಗುತ್ತೆಯೇ? ಈ ಪ್ರಪಂಚ ನಡೆಯಲಿಕ್ಕೆ ಗಂಡಸು-ಹೆಂಗಸು ಇಬ್ಬರೂ ಬೇಕಲ್ಲವೇ? ಗಂಡಸರನ್ನು ಬಿಟ್ಟರೆ ಹೆಂಗಸಿಗೆ ನಡೆಯೋಲ್ಲ, ಹೆಂಗಸನ್ನು ಬಿಟ್ಟರೆ ಗಂಡಸಿಗೆ ನಡೆಯೋಲ್ಲ. ಇಬ್ಬರೂ ಇದ್ದರೇ, ಹೊಂದಿಕೊಂಡು ನಡೆದರೇ ಪ್ರಪಂಚ-ಹಾಗಿರೋವಾಗ ಗಂಡಸು ಶತ್ರು ಅಂತ ಕೆಂಡ ಕಾರಿದರೆ ಏನಾಗುತ್ತೆ ಪ್ರಭಾ. ಏನು ಕ್ರಾಂತಿಯಾದರೂ, ಆಮೇಲಾದರೂ ಗಂಡಸು ಹೆಂಗಸು ಕೂಡಿಕೊಂಡೇ, ಮನಸುಗಳನ್ನು ಹೊಂದಿಸಿಕೊಂಡೇ ನಡೆಯಬೇಕಲ್ಲ. ಹಾಗಿರುವಾಗ ಈ ರಕ್ತಪಾತ, ಕ್ರಾಂತಿ ಯಾವುದೂ ಇಲ್ಲದೆ, ಒಬ್ಬರನ್ನೊಬ್ಬರು ಅರಿತು ನಡೆದು, ಸಂಸಾರ ಸುಖವಾಗಬೇಕು ಅಂತ ನನ್ನ ಆಸೆ."

"ಆ ಆಸೆ ಎಲ್ಲರಿಗೂ ಇದೆ. ಆದರೆ ಆಸೆ ಇರುವುದೇ ವಿಫಲತೆಗಾಗಿ. ಅಲ್ಲವೇ?" ಫ್ಲೋರಾ ಹೇಳಿದಳು-

"ಈ ಆಸೆ, ಬರೀ ಹೆಂಗಸಿಗೇ ಇದ್ದರೆ ಆಯಿತೆ? ಗಂಡಸಿಗೂ ಇರಬೇಡವೇ? ಗಂಡಸಿಗೆ ಈ ಬುದ್ಧಿ ಬಂದಿಲ್ಲ ಎನ್ನುವುದಕ್ಕೆ ಪ್ರಭಾ ಜೀವನವೇ ಸಾಕ್ಷಿಯಾಗಿಲ್ಲವೇ ಲೀಲಾ? ಕಮ್ಯುನಿಸಂ ಒಳ್ಳೆಯದೋ ಕೆಟ್ಟದೋ ಹೇಳಲಾರೆ. ಆದರೆ ಇಷ್ಟು ಮಾತ್ರ ಬಲ್ಲೆ ಈ ಗಂಡಸಿಗೆ ಪೆಟ್ಟು ಬೀಳದೆ ಬುದ್ಧಿ ಬರುವುದಿಲ್ಲ."

"ಅದಕ್ಕೇ ಫ್ಲೋರಾ ನಾನು ಆಗಲೇ ಹೇಳಿದ್ದು- ನನ್ನಲ್ಲೇ ನನಗೆ ನಂಬಿಕೆ ಸಡಲಿಹೋಗಿದೆ, ಎಂದದ್ದು. ಹೀಗಾಗಿಯೇ ಗಂಡಸಿಗೆ ಬುದ್ಧಿ ಬರಬೇಕೆಂದಿದ್ದರೆ ತಪ್ಪಿಸುವವರಾರು? ಹಾಗಾಗಬಾರದು, ಕೂಡಿದುದು ಒಡೆಯಬಾರದು, ಬೆಸುಗೆ ಬಿಚ್ಚಬಾರದು ಎಂದು ಬಯಸಿದೆ. ಆಗಲಿಲ್ಲ. ನನ್ನ ಮಾತು ನಂಬಿ ಪ್ರಭಾ ಹೆಚ್ಚು ಬಳಲಲು ಕಾರಣವಾಯಿತು. ಪ್ರಭಾ ನನ್ನ ಮಾತು ನಂಬದೆ, ಮೊದಲೇ ಬಿಗಿಯಾಗಿದ್ದರೆ ಸರಿಹೋಗುತ್ತಿತ್ತೋ ಏನೋ-ನಾನೇನೂ ಹೇಳಲಾರೆ, ನನ್ನ ಮತಿಯೇ ಮಸಳಿಸಿಹೋಗಿದೆ. ಹೀಗಾಗುವುದೆಂದಿರಲಿಲ್ಲ ನನಗೆ....ತೀರಾ ಅನಿರೀಕ್ಷಿತ."

ಮತ್ತೆ ಮಾತು ಆರಂಭವಾದಲ್ಲಿಗೇ ಬಂದಿತು. ಶಾಲಿನಿಯ ಕಥೆ, ಕಮ್ಯುನಿಸಂ ಚರ್ಚೆ ಪ್ರಭಾವತಿಯ ದುಃಖದ ಉದ್ವೇಗವನ್ನು ಕೊಂಚ ಕಡಮೆ ಮಾಡಿತ್ತು.

"ಗಂಟೆ ಎರಡಾಯಿತು. ನಿನ್ನ ಗಂಡ ಈ ವೇಳೆಗೆ ಬರಬೇಕಾಗಿತ್ತಲ್ಲವೇ ?" ಎಂದಳು ಫ್ಲೋರಾ ಕೈ ಗಡಿಯಾರ ನೋಡಿಕೊಂಡು.

"ಬರಬಹುದು-ಅಂದ ಹಾಗೆ ಪ್ರಭಾ, ಊಟ ಮಾಡಿದೆಯೇನು ?"

"ಇಲ್ಲ."

"ನಾನು ಹೋಗುವಾಗಲೇ ಊಟ ತರಿಸಿ, ಅದನ್ನು ಮುಗಿಸು ಎನಲಿಲ್ಲವೇ ? ಹೊಟ್ಟೆಗೆ ಅನ್ನ ಹಾಕಬೇಕು. ಹಸಿದು ಯಾರೂ ಲೋಕೋದ್ಧಾರ ಮಾಡುವುದಿಲ್ಲ. ನಾನು ಹೋಗಿ ಊಟ ತೆಗೆಸಿಕೊಂಡು ಬರುತ್ತೇನೆ."

"ನಿನ್ನದು ಊಟವಾಯಿತೇ ?"—ಪ್ರಭಾ ಕೇಳಿದಳು.

"ಲೀಲಾವತಿಯ ಮನೆಯಲ್ಲೇ ಮಾಡಿದೆ."

"ಆ ಊಟ ನಿನಗೆ ಹಿಡಿಸಿತೆ ?"

"ನನಗೆ ಹಿಡಿಸದಿರುವುದು ಜಗತ್ತಿನಲ್ಲಿ ಯಾವುದೂ ಇಲ್ಲ. 'ಬೇಡ' ಎನ್ನುವುದರ ಭಯಂಕರ ಶತ್ರು 'ನಾನು'"-ಎಂದು ಫ್ಲೋರಾ ಊಟಕ್ಕೆ ಹೇಳಲು ಹೋದಳು.

"ವಿಚಿತ್ರ ಹೆಂಗಸು ಇವಳು. ಅಲ್ಲವೇ ಲೀಲಾ? ನಿಮ್ಮಿಬ್ಬರಿಗೂ ಪರಿಚಯ ಮಾಡಿಸಬೇಕೆಂದಿದ್ದೆ. ಆ ಪರಿಚಯ ಹೀಗಾಗಬೇಕಿತ್ತು," ಎಂದು ನಿಟ್ಟುಸಿರುಬಿಟ್ಟಳು ಪ್ರಭಾ.

"ಫ್ಲೋರಾ ವಿಚಿತ್ರ ಹೆಂಗಸಲ್ಲ, ತುಂಬಾ ಸೊಗಸಾದ ಹೆಂಗಸು. ಅಂಥವಳ ಸ್ನೇಹ ಜನ್ಮದ ಭಾಗ್ಯ."

"ಅಂದ ಹಾಗೆ-ನಿನ್ನ ಗಂಡನಿಗೂ ನನ್ನ ಬಾಳಿನ ನಗೆಪಾಟಲು ಹೇಳಿದೆಯೇನು ?"

"ಹೂ. ಅವರಿಗೆ ಫೋನ್ ಮಾಡಿ ಬರಬೇಕೆಂದದ್ದರಿಂದಲೇ ತಡವಾಯಿತು."

"ಸದಾನಂದ್ ಏನು ಹೇಳಿದರು ?"

"ಅವರೂ ತುಂಬಾ ನೊಂದುಕೊಂಡರು. ಆಫೀಸಿನಲ್ಲಿ ರಜಾ ತೆಗೆದು

ಕೊಂಡು, ಹಾಗೇ ನಿನ್ನ ಗಂಡನನ್ನು ನೋಡಿ ಮಾತಾಡಿಕೊಂಡು ಬರುತ್ತೀನಿ, ಹೀಗಾಗಲು ಬಿಡಬಾರದು–ಎಂದರು."

"ನನಗಾಗಿ ಮಾತಾಡಲು ಅವರ ಬಳಿ ನಿನ್ನ ಯಜಮಾನರು ಹೋಗ ಬಾರದಾಗಿತ್ತು."

"ಅದರಲ್ಲಿ ತಪ್ಪೇನು ಪ್ರಭಾ?"

"ತಪ್ಪಲ್ಲ, ಅದು ನಿನ್ನ ಯಜಮಾನರಿಗೆ ಅವಮಾನ. ಅವರಿಂದ ಆಗ ಬೇಕಾದುದೇನೂ ಉಳಿದಿಲ್ಲ ಲೀಲಾ."

"ಸಿಟ್ಟಿನ ಹೊತ್ತಿನಲ್ಲಿ ಅವರು ಹೆಚ್ಚು ಕಡಮೆ ಮಾತಾಡಿರಬಹುದು ಪ್ರಭಾ, ಆದರೆ ಅವರು ಕೆಟ್ಟವರಲ್ಲ. ನೀನು ಹೀಗೆ ಬಂದಿರುವುದು ತಿಳಿದರೆ ಅವರೂ ಪಶ್ಚಾತ್ತಾಪಪಡಬಹುದು. ಎಷ್ಟಾದರೂ ನೀವು ಒಬ್ಬರನ್ನೊಬ್ಬರು ಪ್ರೀತಿಸಿದವರಲ್ಲವೇ ಪ್ರಭಾ. ಪ್ರೇಮವಿದ್ದಲ್ಲಿ ಪಶ್ಚಾತ್ತಾಪ, ಪುನಸ್ಸಮಾಗಮಕ್ಕೂ ಎಡೆಯಿದೆ."

"ಅದೇ ಈಗ ನನಗೆ ಅನುಮಾನವಾಗಿದೆ ಲೀಲಾ."

"ಯಾವುದು?"

"ನಮ್ಮಿಬ್ಬರನ್ನು ಕೂಡಿಸಿದುದು ಪ್ರೇಮವೇ ಎಂದು."

"ಅದು ತಿಳಿಯಲಿಕ್ಕೆ ಇದು ಕಾಲ. ಈಗ ನಿನಗೆ ಏನು ಹೇಳಲೂ ನನಗೆ ಬಾಯಿಲ್ಲ ಪ್ರಭಾ, ಆದರೂ ಒಂದು ಮಾತು ಬೇಡುತ್ತೇನೆ."

"ಲೀಲಾ....ಲೀಲಾ....ಎಷ್ಟು ಸಾರಿ ಬೇಡಬೇಕು ನಿನಗೆ? ನೀನು ನನ್ನನ್ನು ಬೇಡುವುದು ನನಗೆ ಶ್ರೇಯಸ್ಕರವಲ್ಲ."

"ಅಷ್ಟು ವಿಶ್ವಾಸಕ್ಕೆ ನಾನು ಅರ್ಹಳಲ್ಲ. ಆದರೂ ಹೇಳುತ್ತೇನೆ– ಶಾಂತಾರಾಂ ಪಶ್ಚಾತ್ತಾಪಪಟ್ಟು ಬಂದರೆ, ನೀನು ಬಿಗಿಯಾಗಿ ನಿಲ್ಲಬೇಡ. ಮತ್ತೊಮ್ಮೆ ಈ ಸಂಸಾರ ಸೇರಲು ನನಗಾಗಿ ಅವಕಾಶ ಕೊಡು. ನಿನ್ನ ಸಂಸಾರ ಗೆದ್ದು ಸುಖವಾದುದನ್ನು ನೋಡಬೇಕೆಂಬುದೇ ನನಗಿರುವ ಆಸೆ. ಅಷ್ಟು ನಡಸಿ ಕೊಡುತ್ತೀಯಾ?"

"ಎಲ್ಲವನ್ನು ಅರಿತೂ ಮತ್ತೆ ಅವನೊಂದಿಗೆ ಸಂಸಾರ ಮಾಡೆನ್ನು ತ್ತೀಯಾ ಲೀಲಾ?" ತುಟಿ ಕಚ್ಚಿ ತಡೆತಡೆದು ಹೇಳಿದಳು ಪ್ರಭಾವತಿ.

"ಹೂ ಪ್ರಭಾ, ಎಲ್ಲವನ್ನೂ ನಾನು ಬಲ್ಲೆ. ಆದರೂ ಹೇಳುತ್ತೇನೆ."

"ನನ್ನ ಮೇಲೆ ಅವನು ಮಾಡಿದ ಆಪಾದನೆ ಗೊತ್ತೇ ಲೀಲಾ?"

"ಏನು ?"

"ಸಾಕಷ್ಟು ಅನ್ನವಿಲ್ಲವೆಂದು, ನಾನು ಹೆಚ್ಚಿನ ಅನ್ನಕ್ಕಾಗಿ ಫ್ಲೋರಾ ಜೊತೆ ಸೇರಿ ವ್ಯಭಿಚಾರಕ್ಕಿಳಿದಿದ್ದೇನಂತೆ."

"ಆ ! ಹೀಗೆಂದನೇ !" ದಿಗ್ಭ್ರಾಂತಿಯಲ್ಲಿ ಚಲ್ಲಾಪಿಲ್ಲಿಯಾಗಿ ಕೇಳಿದಳು ಲೀಲಾವತಿ.

"ಹೂ. ಚಾಯಾರ ಹೇಳಿದನು."

"ಈ ವಿಷಯ ಫ್ಲೋರಾ ನನಗೆ ಹೇಳಲಿಲ್ಲ. ಬಹುಶಃ ನಾಚಿರಬೇಕು."

"ಊಹೂ. ಅವಳಿಗಿದು ತಿಳಿಯದು. 'ನನ್ನ ಗಂಡ ಬೀದಿಯ ಬಸವಿ, ಕುಂಟಲಗಿತ್ತಿ ಎಂದು ನಿನಗೆ ಹೆಸರಿಟ್ಟ' ಎಂದು ಯಾವ ಮೋರೆ ಇಟ್ಟುಕೊಂಡು ಅವಳಿಗೆ ಹೇಳಲಿ. ಹೇಳಲು ಬಾಯಿ ಬರಲಿಲ್ಲ."

"ಒಳ್ಳೆಯದೇ ಮಾಡಿದೆ. ವೃಥಾ ನೊಂದುಕೊಳ್ಳುತ್ತಿದ್ದಳಾಕೆ."

"ಈಗ ಹೇಳು ಲೀಲಾ—ಈಗಲೂ ಅವಕಾಶ ಕೊಡಬೇಕೇ ? ಆ ಮಾತು ನೆನೆದರೇ ಮೈ ತಪ್ತವಾಗುತ್ತದೆ."

ಪ್ರಭಾವತಿಯ ಮಾತು ಕೇಳಿ ಲೀಲಾವತಿ ಎರಡು ನಿಮಿಷ ಗರ ಬಡಿದವಳಂತೆ ಕುಳಿತಿದ್ದಳು. ಬಳಿಕ ಹೇಳಿದಳು—

"ಈಗಲೂ, ಈಗಲೂ ಅವಕಾಶ ಕೊಡೆಂದು ನಾನು ಹೇಳಿದರೆ ಸಿದ್ಧವಾಗಿದೀಯಾ ಪ್ರಭಾ, ಕುರುಡು ಸಿಟ್ಟು ಏನೂ ಮಾತಾಡಿಸಬಹುದು."

ಒಂದು ಗಳಿಗೆ ಏನೂ ಮಾತಾಡದೆ, ಕಿಟಕಿಯಾಚೆಯ ಮುಗಿಲಿನಲ್ಲಿ ತೇಲುವ ಬಿಳಿ ಮೋಡದ ತುಂಡನ್ನೇ ನೋಡುತ್ತಾ ಇದ್ದು, ಬಳಿಕ ಶುಷ್ಕ ಸ್ವರದಲ್ಲಿ ಹೇಳಿದಳು ಪ್ರಭಾವತಿ—

"ನಿನಗಾಗಿ ನಾನು ಏನು ಬೇಕಾದರೂ ಮಾಡುತ್ತೇನೆ ಲೀಲಾ."

"ಪ್ರಭಾ, ನೀನು ನನ್ನನ್ನು ದೇವತೆ ಎಂದೆ. ದೇವತೆ ನಾನಲ್ಲ ನೀನು." ಅಭಿಮಾನದಿಂದ ಪ್ರಭಾವತಿಯನ್ನು ಆಲಂಗಿಸಿ ಹೇಳಿದಳು ಲೀಲಾವತಿ.

"ಜಗತ್ತಿನಲ್ಲಿನ್ನೂ ಗಂಡಸರು ಬದುಕಿರುವಾಗ ಹೆಂಗಸರು ಹೆಂಗಸರನ್ನು ಆಲಂಗಿಸುವುದು ಅಪರಾಧ"—ಎಂದು ನಗೆಯಾಡುತ್ತಾ, ಊಟ ತೆಗೆಸಿಕೊಂಡು ಬಂದಳು ಫ್ಲೋರಾ.

## ೨೫

ಎರಡು ಗಂಟೆಯ ವೇಳೆಗೆ ಬರುತ್ತೇನೆಂದ ಸದಾನಂದ, ಅಲ್ಲಿಗೆ ಬರುವಾಗ ನಾಲ್ಕು ಗಂಟೆಯಾಗಿತ್ತು. ಅವನ ಮಂಕಾದ ಮುಖವೇ ಅವನು ಹೋದ ಕೆಲಸ ಯಶಸ್ವಿಯಾಗಲಿಲ್ಲವೆಂದು ಸೂಚಿಸುವಂತಿತ್ತು. ಅವನು ಬರುವುದನ್ನೇ ಕಾಯುತ್ತಾ ಕುಳಿತ ಲೀಲಾವತಿ–

"ಇದೇನು ಒಬ್ಬರೇ ಬಂದಿರಿ. ಶಾಂತಾರಾಂ ಬರಲಿಲ್ಲವೇ?"–ಎಂದು ಕೇಳಿದಳು.

"ಅವನ ವಿಚಾರ ಹಾಗಿರಲಿ, ಪ್ರಭಾ ಹೇಗಿದಾಳೆ?" ಎಂದು, ಮಂಚದ ಮೇಲೇ ಮಲಗಿದ್ದು, ತಾನು ಬಂದುದನ್ನು ಕಂಡು ಮೇಲೇಳಲೆತ್ನಿಸುತ್ತಿದ್ದ ಪ್ರಭಾವತಿಗೆ–"ಏಳಬೇಡ, ಮಲಗಬೇಕೆನಿಸಿದರೆ ಮಲಗಿಕೋ. ನಾನೇನೂ ಪರಕೀಯನಲ್ಲವಲ್ಲ....ನಿಮ್ಮೆಲ್ಲರದೂ ಕಾಫಿ ಆಯಿತೆ?" ಎಂದು ಕೇಳಿದ.

"ನಾನು ಕಾಫಿಗೆ ಹೇಳಿ ಬರುತ್ತೇನೆ. ತಿನ್ನಲು ಏನಾದರೂ ಬೇಕಿತ್ತೇನು?" ಎಂದಳು ಫ್ಲೋರಾ.

ಫ್ಲೋರಾ ಪರಿಚಯವಿರದೆ ಲೀಲಾವತಿ, ಪ್ರಭಾವತಿಯರಿಂದ ಆಕೆಯ ಹೆಸರು ಕೇಳಿದ್ದ ಸದಾನಂದ.

"ಫ್ಲೋರಾ ಫರ್ನಾಂಡೆಜ್ ನೀವೇ ಇರಬೇಕಲ್ಲವೇ? ಇವರಾರೂ ನಿಮಗೆ ನನ್ನ ಪರಿಚಯ ಮಾಡಿಸಲಿಲ್ಲ, ಕಾಡುಜನ, ಕ್ಷಮಿಸಿ." ಎಂದ, ಇಲ್ಲದ ನಗೆ ತಂದುಕೊಂಡು ನಗುತ್ತಾ.

"ಹಾಗಾದರೆ ನಾನೇ ಫ್ಲೋರಾ ಎಂತ ನಿಮಗಾರು ಹೇಳಿದರು?"

"ಯಾರೇನು ಹೇಳಬೇಕು, ನಿಮ್ಮ ಮುಖ ನೋಡಿದಾಗ ನೀವೇ ಇರಬೇಕು ಎನಿಸಿತು. ರೂಪಕ್ಕೆ ತಕ್ಕ ಹೆಸರು ನಿಮ್ಮದು ಮಿಸ್ ಫರ್ನಾಂಡೆಜ್."

"ಸ್ನೇಹಿತರಿಗೆ ನಾನು ಮಿಸ್. ಫರ್ನಾಂಡೆಜ್ ಅಲ್ಲ, ಫ್ಲೋರಾ ಮಾತ್ರ."

"ಥ್ಯಾಂಕ್ಸ್-ಫ್ಲೋರಾ."

"ಲೀಲಾ, ಎಚ್ಚರಿಕೆಯಾಗಿರು, ಏಕೋ ಸದಾನಂದ್ ಫ್ಲೋರಾನ ಬಹಳ ಮಾತಾಡಿಸಿ ಪರಿಚಯ ಮಾಡಿಕೊಳ್ಳುತ್ತಿದ್ದಾರೆ...." ಪ್ರಭಾವತಿಯೂ ನಗೆಯಲ್ಲಿ ಭಾಗವಹಿಸಲೆತ್ನಿಸಿದಳು.

"ಆ ಹೆದರಿಕೆಯೇ ನನಗಿಲ್ಲ."–ಲೀಲಾವತಿ ಹೇಳಿದಳು.

"ಏಕೆ?" ಪ್ರಭಾವತಿ ಪ್ರಶ್ನೆ ಮಾಡಿದಳು.

"ಅವರ ರೂಪಕ್ಕೆ ಮರುಳಾದ ನಾನೇ ಎಷ್ಟೋ ವೇಳೆ ಹೆದರಿ ತಾಯಿತ ಕಟ್ಟಿಸಿಕೊಳ್ಳಬೇಕಾಗುತ್ತೆ. ಇನ್ನು ಹೊಸಬರ ಪಾಡೇನು?"

"ಲೀಲಾ ಇಷ್ಟು ಅಪಮಾನ ಮಾಡಬಾರದು." ಸದಾನಂದ ತೋರಿಕೆಯ ಅಸಮಾಧಾನವನ್ನು ನಟಿಸಿ ಹೇಳಿದ.

"ಹೆದರಬೇಡಿ, ಮಿಸ್ಟರ್ ಸದಾನಂದ್, ನಾನು ಆಗಲೇ ಹೇಳಿದೇನೆ–ಬೇಡ ಎನ್ನುವುದರ ಭಯಂಕರ ವೈರಿ ನಾನು. ನಿಮಗೆ ಕಾಫಿಗೆ ಹೇಳಿ ಬರುತ್ತೇನೆ," ಎಂದು ನಗುತ್ತಾ ಕಾಫಿಗೆ ಹೇಳಲು ಹೋದಳು ಫ್ಲೋರಾ.

"ಒಳ್ಳೆ ಹುಡುಗಿ, ತುಂಬಾ ಒಳ್ಳೆ ಹುಡುಗಿ–ಈ ಹುಡುಗಿಯಲ್ಲಿ ಕೆಟ್ಟುದನ್ನು ಕಾಣುವವರನ್ನು ಗುಂಡಿನಿಂದ ಹೊಡೆಯಬೇಕು"–ಎಂದು ತನಗೆ ತಾನೇ ಹೇಳಿಕೊಂಡಂತೆ ಆಡಿದ ಸದಾನಂದ.

"ಅದೆಲ್ಲಾ ಹೋಗಲಿ. ನೀವು ಹೋದ ಕೆಲಸವೇನಾಯಿತು ಹೇಳಿ, ಶಾಂತಾರಾಂ ಏಕೆ ಬರಲಿಲ್ಲ?"–ತನ್ನ ಆತುರವನ್ನು ತಡೆಯಲಾರದೆ ಕೇಳಿದಳು ಲೀಲಾವತಿ.

"ಶಾಂತಾರಾಂ ಬರಲಿಲ್ಲ."

"ನೀವು ಒಂಟಿಯಾಗಿ ಬಂದಾಗಲೇ ಅದು ಗೊತ್ತಾಯಿತು. ಏಕೆ ಬರಲಿಲ್ಲ?"

"ನಿನ್ನ ಫೋನ್ ಸುದ್ದಿ ಬಂದ ಕೂಡಲೇ, ನಾನು ಅವನನ್ನು ಹುಡುಕಿಕೊಂಡು ಹೊರಟೆ- ಆಫೀಸಿನಲ್ಲಿ ಸಿಕ್ಕಿದ. ಹೊರಗೆ ಕರೆದುಕೊಂಡು ಹೋಗಿ ನಡೆದುದನ್ನು ಹೇಳಿದೆ. ನೀನು ಮನೆ ಬಿಟ್ಟು ಬರುವುದು ಅವನಿಗೆ ತಿಳಿದಿರಲಿಲ್ಲ ಪ್ರಭಾ."

"ಊಹೂ. ಹೇಳಿರಲಿಲ್ಲ. ಸಂಜೆಗೆ ಮನೆಗೆ ಬಂದು ನೋಡಿದಾಗ ತಾನೇ ಗೊತ್ತಾಗುತ್ತದೆಂದು ಬಂದುಬಿಟ್ಟೆ."

"ಕಾಗದವನ್ನೂ ಬರೆದಿಡಲಿಲ್ಲವೆ?"

"ಏನನ್ನೂ ಬರೆದಿಡಲಿಲ್ಲ. ಒಂದು ಗಳಿಗೆ ಆ ಮನೆಯಲ್ಲಿದ್ದರೆ ಎಲ್ಲಿ ಉಸಿರು ಕಟ್ಟಿ ಸಾಯುತ್ತೇನೋ ಅನಿಸಿತು. ಬಂದುಬಿಟ್ಟೆ."

"ನೀವು ಹೇಳಿದ್ದನ್ನು ಕೇಳಿ ಏನು ಹೇಳಿದ? ಅವನಿಗೆ ಅದರಿಂದ ತುಂಬಾ ಆಶ್ಚರ್ಯವಾಗಿರಬೇಕು."–ಲೀಲಾವತಿ ಕೇಳಿದಳು

"ಆಶ್ಚರ್ಯ–ಹೂ. ಕೇಳಿದಾಗ ಒಂದು ಗಳಿಗೆ ಆಶ್ಚರ್ಯವಾಯಿತು. ಬಳಿಕ 'ಇದು ಹೀಗಾಗಬಹುದೆಂದಿದ್ದೆ. ಆದದ್ದೇ ಒಳಿತಾಯಿತು, ಎಂದ."

"ನಿಜವಾಗಿಯೂ ಹಾಗೆಂದನೇ?"–ಆ ಮಾತನ್ನು ನಂಬಲಾರದವಳಂತೆ ಕೇಳಿದಳು ಪ್ರಭಾವತಿ.

"ಏನು ಹೇಳಿದ?"–ಆಗತಾನೇ ಕಾಫಿಯನ್ನು ತೆಗೆಸಿಕೊಂಡು ಬಂದ ಫ್ಲೋರಾ ಕೊನೆಯ ಮಾತನ್ನು ಮಾತ್ರ ಕೇಳಿ, ಪ್ರಶ್ನೆ ಮಾಡಿದಳು. ಅಟೆಂಡರು ಹೋಗುವವರೆಗೂ ಸುಮ್ಮನಿದ್ದು, ಬಳಿಕ ಹೇಳಿದ ಸದಾನಂದ–

"ಫ್ಲೋರಾ, ನಾನೀಗ ಒಂದು ದೊಡ್ಡ ಸಂದಿಗ್ಧದಲ್ಲಿದ್ದೇನೆ."

"ಏನು ಹೇಳಿ. ಏನೂ ಸಂಕೋಚಪಡಬೇಡಿ."

"ನೀವೀಗ ಶಾಂತಾರಾಂ 'ಏನು ಹೇಳಿದ?' ಎಂದು ಕೇಳಿದಿರಿ. ಅವ ನಾಡಿದ ಮಾತು ನಿಮಗೂ ಸಂಬಂಧಿಸಿದ್ದು. ಅಸೂಯೆ, ಸಿಟ್ಟಿನಲ್ಲಿ ಮನುಷ್ಯ ಪಶುವಾಗಬಲ್ಲ ಎಂದು ನಿಮಗೆ ಗೊತ್ತಿರಬೇಕು. ಆದ್ದರಿಂದ ಮನಸ್ಸಿಗೆ ಏನೂ ತಿಳಿದುಕೊಳ್ಳಬಾರದು."

"ನನ್ನ ಮುಂದೆ ಹೇಳಲು ನಿಮಗೆ ಇಚ್ಛೆ ಇಲ್ಲದಿದ್ದರೆ ಬೇಡ. ಆದರೆ ನನ್ನ ವಿಷಯ ಅವರು ಏನು ಹೇಳಿದ್ದರೂ ಹೇಳಬಹುದು."

"ಥ್ಯಾಂಕ್ಸ್ – ಅವನು ಕೊಟ್ಟ ಉತ್ತರ – ನಾನು ಮುಖ ಮುಚ್ಚಿಕೊಳ್ಳು ವಂತೆ ಮಾಡಿತು ಲೀಲಾ...."

"ಅದು ಏನು ಹೇಳಿದನೋ ಹೇಳಿ."

"ನೀನು ಕೇಳು ಲೀಲಾ, ನಾನು ಕೇಳಲಾರೆ" – ಎಂದು ಪ್ರಭಾವತಿ ಮುಸುಗೆಳೆದುಕೊಂಡಳು.

"'ಫ್ಲೋರಾ ಜೊತೆಗೆ ಸೇರಿದ ಅವಳು ಕೆಟ್ಟ ದಾರಿಗೆ ಬಿದ್ದಿದ್ದಾಳೆಂದು ನನಗೆ ಅನುಮಾನವಿತ್ತು. ಇಂದಲ್ಲ ಒಂದು ದಿನ ಹೀಗೆ ಮಾಡಬಹುದೆಂದೇ ತಿಳಿದಿದ್ದೆ. ನನ್ನ ಊಹೆ ನಿಜವಾಯಿತು. ನಿನ್ನೆ ರಾತ್ರಿ ನಾನೇ ಅವಳನ್ನು ಆ ಪ್ರಶ್ನೆ ಕೇಳಿದೆ. ಅದಕ್ಕಾಗ ಉತ್ತರ ಕೊಡಲಿಲ್ಲ. ಬಹುಶಃ ಈಗ ಮುಖ ತೋರಿಸಲು ಸಾಧ್ಯವಿಲ್ಲದೆ ಮನೆ ಬಿಟ್ಟಿರಬೇಕು. ಒಳ್ಳೆಯದಾಯಿತು ಎಂದ." ಸದಾನಂದ ಹೇಳಿದುದನ್ನು ಕೇಳಿ ಮುಸುಗಿನಲ್ಲಿಯೂ ಪ್ರಭಾವತಿ ಏಟು ತಿಂದವ

ಳಂತೆ ಮಿಸುಕಾಡಿದಳು. ಫ್ಲೋರಾ ಮುಖ ಬೆಳ್ಳಗಾಗಿ, ಅವಳು ತನ್ನ ಉದ್ವೇಗ ವನ್ನು ತಡೆದುಕೊಳ್ಳಲು, ಸಿಗರೇಟು ಹಚ್ಚಿ –

"ಮುಂದೆ ಹೇಳಿ. ತುಂಬಾ ಕುತೂಹಲಕರವಾಗಿದೆ" ಎಂದಳು.

"ಕೆನ್ನೆಗೆ ಒಂದೇಟು ತಟ್ಟಬೇಕಿತ್ತು ಆ ಮಾತಾಡಿದಾಗ." – ತಾನೂ ತಾಳ್ಮೆ ತಪ್ಪಿ ಹೇಳಿದಳು ಲೀಲಾವತಿ.

"ನನಗೂ ಹಾಗೇ ಅನಿಸಿತು. ಆದರೆ ಅದರಿಂದೇನು ಪ್ರಯೋಜನ ಎಂದುಕೊಂಡು ಸುಮ್ಮನಾದೆ. 'ಸಿಟ್ಟಿನಲ್ಲಿ ಹೀಗೆ ಹೇಳಬಾರದು. ಅನ್ಯರ ಮೇಲೆ ವೃಥಾ ಅಪವಾದ ಹೊರಿಸುವುದು ಸಾಭ್ಯಸ್ತಿಕೆಯಲ್ಲ. ಅಲ್ಲದೆ ನಿನಗಾಗಿ ತಂದೆ – ತಾಯಿ ಎಲ್ಲರನ್ನು ಬಿಟ್ಟು, ದೂರದೂರಿಗೆ ಬಂದ ಹೆಣ್ಣಿನ ಮೇಲೆ ಇಂಥ ಸಂಶಯ ಪಡುವುದು ಲಜ್ಜೆಗೇಡಿತನ. ಪ್ರಭಾ ತಪ್ಪುದಾರಿ ತುಳಿದಳೆಂಬು ದಕ್ಕೆ ನಿನಗೇನಾದರೂ ಆಧಾರವಿದೆಯೇ?' ಎಂದು ಕೇಳಿದೆ. ಆದಕ್ಕವನು 'ಅವಳು ಫ್ಲೋರಾಳ ಸಂಗಮಾಡಿ, ಅವಳೊಂದಿಗೆ, ತನಗೆ ಹೇಳದೆ ಕೇಳದೆ ಬೇಕಾದಲ್ಲಿ ತಿರುಗುವುದೇ ಸಾಕ್ಷಿ. ಮರ್ಯಾದೆಗೆ ಹೆದರುವವಳಾದರೆ ಅಂಥವಳ ಜೊತೆ ಓಡಾಡುತ್ತಿರಲಿಲ್ಲ. ಮೊದಲ ಬಾರಿಗೆ ಅವರಿಬ್ಬರನ್ನು ಕಂಡಾಗ ದಾಮೋದರ ಎಚ್ಚರಿಸಿದ. ನಾನಾಗ ನಂಬಲಿಲ್ಲ. ಆದರೆ ನಾನೆಷ್ಟು ಬೇಡ ವೆಂದರೂ ಇವಳು ಫ್ಲೋರಾ ಸಂಗ ಬಿಡದದ್ದನ್ನು ಕಂಡು ದಾಮೋದರನ ಮಾತು ನಂಬಬೇಕಾಯಿತು. ಪ್ರಸಂಗ ಬೆಳೆದಿದ್ದರೆ, ನಾನೇ ಅವಳಿಗೆ ಮನೆ ಬಿಟ್ಟು ಹೋಗು ಎಂದು ಹೇಳಬೇಕೆಂದಿದ್ದೆ. ಈಗ ಅದನ್ನು ಅವಳೇ ಮಾಡಿ ದಳು' ಎಂದ. 'ಹಾಗಲ್ಲ, ನೀನು ನಂಬುವುದೂ, ಬಿಡುವುದೂ ಬೇರೆ – ಪ್ರಭಾ ಅಂತ ಹುಡುಗಿ, ನಿನಗಾಗಿ ಎಲ್ಲವನ್ನೂ ಬಿಟ್ಟು ಬಂದವಳು ಹೀಗೆ ಮಾಡಬಹುದೇ ಎಂದು ಯೋಚಿಸಬೇಕಾಗಿತ್ತು.' ಎಂದೆ. 'ಅವಳು ಹಾಗೆ ಹೋಗಿರಬಹುದೆನ್ನುವ ಅನುಮಾನಕ್ಕೆ ನನಗೂ ಕಾರಣವಿತ್ತು ಸದಾನಂದ. ಶ್ರೀಮಂತಿಕೆಯಲ್ಲಿ ಬೆಳೆದವಳು, ಏನೋ ಮೋಹದಿಂದ ಹಿಂದೆ ಬಂದಳು. ಬಡತನ ಅರಿವಾದಾಗ, ತನ್ನ ಸುಖದ ದಾರಿ ತಾನು ನೋಡಿಕೊಳ್ಳುವುದಿಲ್ಲವೇ? ಅವಳನ್ನು ನಂಬಿ ಬಂದುದು ನನ್ನ ಮುಠ್ಠಾಳತನವಾಯಿತು. ಇವಳು ಹೀಗೆ ಮಾಡಬಹುದೆಂದು, ಇವಳು ಮನೆಗೆ ಕಾಲಿಟ್ಟ ದಿನವೇ ಎಚ್ಚರಿಸಿದಳು. ಆದರೆ ನಾನಾಗ ಕುರುಡಾಗಿದ್ದೆ. ಒಮ್ಮೆ ಪೆಟ್ಟು ತಿಂದ ನಾನು ಎಚ್ಚರವಾಗಿರಬೇಕಾ ಗಿತ್ತು. ನನ್ನದು ಮೂರ್ಖತನವಾಯಿತು. ಹೆಣ್ಣು ಜಾತಿಯೇ ಹೀಗೆ – ನಂಬಿಕೆ

ಗನರ್ಹ. ನನ್ನ ತ್ಯಾಗ, ದುಃಖ, ನಾನು ಪಟ್ಟ ಕಷ್ಟ ಎಲ್ಲವೂ ವ್ಯರ್ಥ ವಾಯಿತು' ಎಂದ...."

"ಹೆಂಗಸಿನ ಮೇಲೇಕೆ ಅಷ್ಟು ದ್ವೇಷ ಆತನಿಗೆ-?"....ಲೀಲಾವತಿ ಕೇಳಿದಳು.

"ಮಂಗಳೂರಿನಲ್ಲಿ ಕಾಲೇಜಿನಲ್ಲಿ ಓದುವಾಗ ನಮ್ಮ ಜೊತೆಗೆ ಕುಮುದಿನಿ ಎಂಬ ಒಂದು ಹುಡುಗಿ ಓದುತ್ತಿತ್ತು. ಶುದ್ಧ ಚೊಲ್ಲುಬಡಕ ಹುಡುಗಿ. ಅದಕ್ಕೇನೂ ತಿಳಿಯದು. ಕಂಡ ಕಂಡ ಹುಡುಗರನ್ನೆಲ್ಲಾ ಕಣ್ಣರಳಿಸಿ ನೋಡು ತ್ತಿತ್ತು. ಇವನಿಗೂ ಅವಳ ಮೇಲೆ ಕಣ್ಣು ಬಿತ್ತು-ಇವರಿಬ್ಬರ ನಡುವೆ ಅದೇನೇನಾಯಿತೋ. ಹುಡುಗಿ ಬೇರೆಯವರನ್ನು ಮದುವೆಯಾದಳು. ಇವನು ಎರಡು ದಿನ ಸಮುದ್ರಕ್ಕೆ ಹಾರುತ್ತೀನಿ, ಬೆಟ್ಟದಿಂದ ಬೀಳುತ್ತೀನಿ ಎಂದು ಹಾರಾಡಿ, ಕೊನೆಗೆ ಸುಮ್ಮನಾದ. ಅಂದಿನಿಂದ ಸ್ತ್ರೀ ದ್ವೇಷ. ತೆನಾಲಿರಾಮನ ಬಿಸಿಹಾಲು ಕುಡಿದ ಬೆಕ್ಕು. ಅದಕ್ಕಾಗೇ ಅವನು ಮಂಗಳೂರಿನಿಂದ ಬೆಂಗಳೂ ರಿಗೆ ಹೋದದ್ದು."

"ಹೀಗೋ ಇವನ ಕಥೆ, ಇದೆಲ್ಲಾ ನನಗೆ ತಿಳಿದಿರಲಿಲ್ಲ. ಆ ದ್ವೇಷ ಈಗ ಪ್ರಭಾವತಿಯ ಮೇಲೆ ತೀರಿಸಿಕೊಂಡನೇನೋ."-ಲೀಲಾವತಿ ಹೇಳಿದಳು.

"ಇವನು ಪ್ಯಾಥಾಲಿಜಿಸ್ಟರಿಗೆ ಒಳ್ಳೆಯ ವಿಷಯ," ಎಂದಳು ಫ್ಲೋರಾ.

"ಸರಿ-ಮುಂದೆ?" ಲೀಲಾವತಿ ಮಾತು ಮುಂದುವರಿಸಿದಳು.

"ನಾನೂ ಹೇಳಿದೆ-'ನೀನು ಮಾಡಿದ ತ್ಯಾಗವೇ ದೊಡ್ಡದೆಂದು ಕೊಚ್ಚ ಬೇಡ. ಅವಳೂ ತ್ಯಾಗ ಮಾಡಿದಾಳೆ. ನಿನಗಿಂತ ಹೆಚ್ಚಿನ ತ್ಯಾಗ ಮಾಡಿ ದಾಳೆ. ಅದನ್ನು ಯೋಚಿಸು' ಎಂದೆ. 'ಬೇಕಾಗಿತ್ತು ಬಂದಳು-ಬೇಡ ವಾಗಿತ್ತು ಹೋದಳು' ಎಂದ ತಾತ್ಸಾರವಾಗಿ. ನಾನೂ ನೂರೆಂಟು ಚರ್ಚೆ ಮಾಡಿದೆ. ಏನೇನೋ ಸಮಾಧಾನ ಹೇಳಿದೆ-'ತಾನಾಗಿ ಮನೆ ಬಿಟ್ಟ ಹೆಣ್ಣು ನನಗೆ ಬೇಕಾಗಿಲ್ಲ. ಅವಳಿಗೆ ತಾನು ಹೆಣ್ಣು ಹೆಂಗಸು. ಗಂಡಸು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರಬೇಕೆಂಬ ಅರಿವೂ ಇಲ್ಲ. ಅಂಥವಳು ಸಂಸಾರ ಮಾಡಿ ಯಾಳೆ? ಹೇಗೂ ಫ್ಲೋರಾ ಜೊತೆ ಸಿಕ್ಕಿತು. ಹಾಯಾಗಿರುತ್ತಾಳೆ. ಆದರೆ ನನ ಗಿನ್ನು ಅವಳು ಬೇಕಾಗಿಲ್ಲ. ಅವಳಿಗೆ ಬೇಕಾದರೆ, ಕರೆತಂದ ತಪ್ಪಿಗಾಗಿ ತಿಂಗಳಿ ಗಿಷ್ಟು ಹಣ ಕೊಡುತ್ತೇನೆ' ಎಂದ. ಅವನ ಕೈಲಿ ಮತ್ತೆ ಹೆಚ್ಚು ಮಾತಾಡುವುದಕ್ಕೆ ನನಗೆ ಮನಸ್ಸಾಗಲಿಲ್ಲ. ಎದ್ದು ಬಂದುಬಿಟ್ಟೆ. ವೃಥಾ ಕಂಠಶೋಷಣೆ

ಯಾಯಿತು. ಫ್ಲೋರಾ ವಿಷಯದಲ್ಲಷ್ಟು ಅವಾಚ್ಯ ಶಬ್ದಗಳನ್ನು ಕೇಳಿದ್ದಾಯಿತು."

ಹಾಸಿಗೆಯ ಮೇಲೆ ಮುಸುಗು ಹೊದ್ದು ಮಲಗಿದ ಪ್ರಭಾ, ಕೊರಡಿನಂತೆ ಮಿಸುಗಾಡದೆ ಮಲಗಿದ್ದಳು. ಲೀಲಾವತಿ ಗರ ಬಡಿದವಳಂತಾಗಿದ್ದಳು. ಫ್ಲೋರಾ, ಮುಗಿಯಬಂದ ಸಿಗರೇಟಿನಿಂದ ಮತ್ತೊಂದು ಸಿಗರೇಟು ಹೊತ್ತಿಸಿಕೊಂಡಳು – ಅವಳ ಕಣ್ಣುಗಳಲ್ಲಿ ಕೆಣಕಿದ ಪಶು ಇಣುಕಿ ನೋಡುತ್ತಿತ್ತು.

"ನನಗೂ ಒಂದು ಸಿಗರೇಟಿದ್ದರೆ ಕೊಡಿ, ನನ್ನದು ಮುಗಿದುಹೋಗಿದೆ. ಬರುವಾಗ ತರುವುದು ನೆನಪಾಗಲಿಲ್ಲ."

ಫ್ಲೋರಾ ಮರು ಮಾತಾಡದೆ ಸದಾನಂದನಿಗೆ ಸಿಗರೇಟು ಕೊಟ್ಟಳು. ಸದಾನಂದನೂ ಸಿಗರೇಟು ಹೊತ್ತಿಸಿಕೊಂಡು –

"ಪ್ರಭಾ, ಹೀಗಾಯಿತೆಂದು ನೀನು ಚಿಂತಿಸಬೇಡ. ನಿನ್ನ ಭಾರ ನನ್ನ ಮೇಲೆ ಹಾಕು." – ಎಂದ.

"ಇನ್ನು ನನ್ನ ಭಾರ ಹೊರುವ ಚಿಂತೆ ನನಗಿರಲಿ, ಬೇರಾರಿಗೂ ಬೇಡ. ಹೀಗೆಂದೆನೆಂದು ತಪ್ಪು ತಿಳಿದುಕೊಳ್ಳಬೇಡಿ" – ಎಂದಳು, ಸದಾನಂದನ ಮಾತು ಕೇಳಿ ತಟಕ್ಕನೆ ಮುಸುಕು ತೆಗೆದ ಪ್ರಭಾವತಿ. ಉರಿ ಹೊತ್ತಿದ ಒಣ ಹುಲ್ಲಿನಂತೆ ಉರಿಯುತ್ತಿತ್ತು, ಅವಳ ಬತ್ತಿಹೋದ ಮುಖದಲ್ಲಿ ಕಣ್ಣುಗಳು.

"ಲೀಲಾ – ನೀನು ಕೊಟ್ಟ ಮಂಗಲಸೂತ್ರವನ್ನು ರಕ್ಷಿಸುವ ನನ್ನ ಜವಾಬ್ದಾರಿ ಮುಗಿಯಿತು. ಇಗೋ ಮತ್ತಿದನ್ನು ನಿನ್ನ ವಶಕ್ಕೇ ಕೊಟ್ಟಿದೇನೆ. ನನ್ನಂಥ ಅಪಾತ್ರರಿಗೆ ಮತ್ತಿದನ್ನು ಕೊಡುವ ತಪ್ಪು ಮಾಡಬೇಡ," ಎಂದವಳೇ ಕತ್ತಿನಲ್ಲಿದ್ದ ಮಂಗಲಸೂತ್ರವನ್ನು ಕಿತ್ತು ಲೀಲಾವತಿಯ ಮುಂದೆ ಹಾಕಿ, ಅಲ್ಲಿರಲಾರದೆ, ಭೂತ ಬೆನ್ನಟ್ಟಿದವಳಂತೆ ವೇಗವಾಗಿ ಹೋಗಿ, ವರಾಂಡಾದಲ್ಲಿ ಕೈ ಪಿಡಿಯನ್ನು ಹಿಡಿದು ಕಡಲನ್ನು ನೋಡುತ್ತಾ ನಿಂತಳು. ಅವಳು ಕೈ ಪಿಡಿಯನ್ನು ಹಿಡಿದ ಬಿಗಿ, ಯಾರದೋ ಕತ್ತು ಹಿಸುಕಲು ಬಿಗಿದ ಮುಷ್ಟಿಯಂತಿತ್ತು.

ಫ್ಲೋರಾ, ಲೀಲಾವತಿ, ಸದಾನಂದ್ ಒಬ್ಬರ ಮೊಗವನ್ನೊಬ್ಬರು ದಿಟ್ಟಿಸುತ್ತಾ ಕುಳಿತರು. ಎಲ್ಲರ ಮುಖಗಳೂ ಯಾತನಾಮಯವಾದ ಚಿಂತೆಗೆ ಹಿಡಿದ ಕನ್ನಡಿಯಂತಾಗಿದ್ದವು.

ಪ್ರಭಾವತಿ ಕಿತ್ತು ಚೆಲ್ಲಿದ ಮಂಗಳಸೂತ್ರ ಮಣಿ ಕಿತ್ತು ದಿಕ್ಕು ತಪ್ಪಿದ ಅನಾಥ ಹೆಣದಂತೆ ಬಿದ್ದಿತ್ತು ನೆಲದ ಮೇಲೆ.

## ೨೬

"ನನ್ನ ಪಾಡಿಗೆ ನನ್ನನ್ನು ಇವತ್ತು ಬಿಟ್ಟುಬಿಡು" – ಎಂದಳು ಪ್ರಭಾವತಿ ಬಹಳ ಹೊತ್ತಿನ ಮೇಲೆ ತನ್ನನ್ನು ಮಾತಾಡಿಸಿದ ಲೀಲಾವತಿಗೆ.

"ನಿನ್ನ ಪಾಡಿಗೆ ನಿನ್ನನ್ನು ಇವತ್ತು ಬಿಡಲಾರೆ ಪ್ರಭಾ. ನಾನೂ ಹೆಣ್ಣು, ನನಗೂ ಹೃದಯವಿದೆ; ನನಗೂ ಅರ್ಥವಾಗುತ್ತದೆ. ಅದಕ್ಕೇ ಹೇಳುವುದು – ಇವತ್ತು ಇಲ್ಲಿರುವುದು ಬೇಡ. ನನ್ನ ಜೊತೆ ಬಾ."

"ನೀವು ಹೋಗಿ ಲೀಲಾ, ನನಗಾರದೂ ಭಯವಿಲ್ಲ."

"ನಿನಗೆ ಯಾವದೂ ಭಯವಿಲ್ಲ ಪ್ರಭಾ, ನನಗಿರುವುದು ನಿನ್ನ ಭಯ."

ಪ್ರಭಾವತಿಗೆ ಲೀಲಾವತಿಯ ಮಾತು ಅರ್ಥವಾಯಿತು. ವಿಕಾರವಾದ ಒಣನಗೆ ನಕ್ಕು ಹೇಳಿದಳು –

"ನಾನೇನಾದರೂ ಆತ್ಮಹತ್ಯ ಮಾಡಿಕೊಳ್ಳಬಹುದೆಂದೇ? ಖಂಡಿತ ಆ ಭಯ ಇಟ್ಟುಕೊಳ್ಳಬೇಡ. ಹಿಂದೆ, ಬಹು ಹಿಂದೆ ಅವನಿಗಾಗಿ ಸಾಯಲು ಸಿದ್ಧವಿದ್ದೆ, ಪ್ರೀತಿಯು ಮುಂಕು ಕವಿದಿದ್ದಾಗ. ಈಗ ಖಂಡಿತ ಅವನ ಮಾತಿಗಾಗಿ ಸಾಯುವುದಿಲ್ಲ. ಈಗ ನನ್ನ ಕಣ್ಣು ತೆರೆದಿದೆ ಲೀಲಾ. ಈಗ ನನಗೆ ಸಾಯುವಾಸೆಯಿಲ್ಲ, ಬದುಕಿನ ದಾಹ....ಇಷ್ಟು ದಿನ ನಾನು ಬದುಕಿದ್ದುದು ಬದುಕಲ್ಲ, ಇದ್ದ ಸಾವು; ಈಗ ಇನ್ನು ಮೇಲೆ ಬದುಕುತ್ತೇನೆ. ಹೇಗೆ ಬೇಕೋ ಹಾಗೆ ಬದುಕುತ್ತೇನೆ....ಲೀಲಾ....ನನಗೀಗ ಬದುಕಿನ ದಾಹ.... ಬದುಕಿನ ದಾಹ....ವಿಚಿತ್ರ ಬದುಕಿನ ದಾಹ....ಆ ಸಮುದ್ರವನ್ನೇ ಕುಡಿದು ಬಿಡುತ್ತೇನೆ....ಫ್ಲೋರಾ....ಫ್ಲೋರಾ . .ಆ ನಾಯಿ ಮರಳಿನಲ್ಲೇನೋ ಕೀಳುತ್ತಿದೆ ನೋಡು....ನಾಯಿ....ನಾಯಿಯಂತೆ ನಾಯಿ....ನೀನು ಹಾಕುವ ಅನ್ನ ನನ್ನ ಮನೆಯಲ್ಲಿ ಆಲ್‌ಸೇಷಿಯನ್ ನಾಯಿ ತಿನ್ನುತ್ತಿತ್ತು....ಊಹೂ....ಊಹೂ.... ನನ್ನಿಂದ ಸಾಧ್ಯವಿಲ್ಲ ಲೀಲಾ....ಆ ಮಂಗಳಸೂತ್ರ ಕಾಪಾಡಲಾರೆ....ಐ ಹೇಟ್ ಇಟ್....ಐ ಹೇಟ್ ಇಟ್...." – ಎಂದು ವ್ಯಥೆ ಉಲ್ಬಣಿಸಿ, ಕಣ್ಣೀರುಗರೆಯುತ್ತಾ ನಗಲಾರಂಭಿಸಿದಳು.

ಲೀಲಾವತಿಗೆ ಅದನ್ನು ನಿಂತು ನೋಡುವುದಾಗಲಿಲ್ಲ. ಗಂಡನನ್ನು ತಬ್ಬಿ ಮೊಗ ಮುಚ್ಚಿ ಅಳಲಾರಂಭಿಸಿದಳು. ಸದಾನಂದನ ಕಣ್ಣಲ್ಲೂ ನೀರು ನಿಂತಿತ್ತು.

"ಪೂರ್ ಪ್ರಭಾ....ಪೂರ್ ಪೂರ್ ಪ್ರಭಾ...." ಎಂದ ನಡುಗುವ ತುಟಿಯನ್ನು ಹಲ್ಲಿನಿಂದ ಕಡಿದು.

"ಷ್. ಹನಿ, ಮಾತನಾಡಬೇಡ." ತಟಕ್ಕನೆ ಪ್ರಭಾವತಿಯ ಕೆನ್ನೆಗೆ ಬಲವಾಗಿ ಹೊಡೆದು – "ಬಾ ಇಲ್ಲಿ" ಎಂದು ಫ್ಲೋರಾ ಪ್ರಭಾವತಿಯನ್ನು ಎಳೆದುಕೊಂಡು ಹೋಗಿ ಬಲವಂತವಾಗಿ ಹಾಸಿಗೆಯ ಮೇಲೆ ಮಲಗಿಸಿ, "ಒಂದು ಗಳಿಗೆ ಇವಳನ್ನು ನೋಡಿಕೊಂಡಿರು" ಎಂದು ಲೀಲಾವತಿಗೆ ಹೇಳಿ, ಅಟೆಂಡರನ್ನು ಕೂಗಿ –

"ಒಂದು ಬಡಾಪೆಗ್ ಬರ್ಗಂಡಿ ವೈನ್ ತೆಗೆದುಕೊಂಡು ಬಾ. ಬೇಗ. ಒಂದು ನಿನಿಷದಲ್ಲಿ ಇಲ್ಲಿರಬೇಕು," ಎಂದಳು.

ಅಟೆಂಡರ್ ಓಡುತ್ತಾ ಹೋಗಿ ವೈನ್ ತಂದುಕೊಟ್ಟ.

"ಪ್ರಭಾ, ಡಾರ್ಲಿಂಗ್, ಎಲ್ಲಿ ಬಾಯಿ ತೆಗೆ."

"ಏನದು ?"

"ಏನಾದರಾಗಲಿ, ಇದನ್ನು ಕುಡಿ."

"ನನಗೆ ಬೇಡ."

"ಕಮ್ ಆನ್, ಹನಿ. ಹಟ ಮಾಡಬೇಡ, ಡ್ರಿಂಕ್ ದಿಸ್" – ಎಂದು ಬಲವಂತವಾಗಿ ಪ್ರಭಾವತಿಯ ಬಾಯಿ ಬಿಡಿಸಿ, ವೈನನ್ನು ಪೂರಾ ಕುಡಿಸಿ –

"ಮಲಗಿಕೋ. ಸ್ಲೀಪ್....ಸ್ಲೀಪ್ ಸ್ವೀಟ್ ಬೇಬಿ, ಸ್ಲೀಪ್" – ಎಂದು ಮಗುವಿನಂತೆ ಪ್ರಭಾವತಿಯ ಮೈ, ಹಣೆಯನ್ನು ತಟ್ಟಿದಳು. ನಿಧಾನವಾಗಿ ಪ್ರಭಾವತಿ ಮಲಗಿದಳು. ಏನೋ ಮಾತಾಡುವಂತೆ ಅಲುಗಾಡುತ್ತಿದ್ದ ಅವಳ ತುಟಿಯ ಚಲನೆ ನಿಧಾನವಾಗಿ ತುಟಿ ಮುಚ್ಚಿತು.

ಹತ್ತು ನಿಮಿಷ ಎಲ್ಲರೂ ಉಸಿರು ಬಿಗಿ ಹಿಡಿದಂತಿದ್ದರು. ಪ್ರಭಾವತಿ ನಿದ್ರೆ ಮಾಡಿದಳೆಂದು ನಂಬಿಕೆಯಾದ ಮೇಲೆ, ಫ್ಲೋರಾ ಅವಳ ಪಕ್ಕ ಬಿಟ್ಟು ಎದ್ದಳು. ಎದ್ದಾಗ ಯಾವುದೋ ಹೊರಲಾಗದ ಭಾರ ಹೊತ್ತಂತೆ ಅವಳ ಮೈ ತೂಗುತ್ತಿತ್ತು. ತಟಕ್ಕನೆ ಸಡಿಲವಾದ ಧ್ವನಿಯಲ್ಲಿ ಮಾತನ್ನು ತೂಗಿಸುತ್ತಾ ಹೇಳಿದಳು –

" ಇನ್ನು ಭಯವಿಲ್ಲ. ನೀನು ಹೇಳಿದಾಗ ಅತ್ತಿದ್ದರೆ ಹೀಗಾಗುತ್ತಿರಲಿಲ್ಲ. ತನಗೆ ಇದನ್ನು ಭರಿಸುವ ಧೈರ್ಯವಿದೆ ಎಂದು ತೋರಲೆತ್ನಿಸಿದಳು. ಪೂರ್ ಕಿಡ್. ಆದರೆ ಆ ಭಾರ ಮನುಷ್ಯರು ಹೊರುವಂಥದಲ್ಲ."

" ಯಾರಾದರೂ ಡಾಕ್ಟರಿಗೆ ಹೇಳಿಕಳಿಸೋಣವೇ ?" ಎಂದು ಕೇಳಿದಳು ಲೀಲಾವತಿ.

" ಡಾಕ್ಟರು ಮಾಡುವುದನ್ನೇ ನಾನು ಮಾಡಿದ್ದು, ಆದರೆ ಬಿಲ್ ಕೇಳ ಲಿಲ್ಲ. ಇನ್ನು ಭಯವಿಲ್ಲ ಲೀಲಾ, ಈಗ ಮಲಗಿದವಳು ಬೆಳಗಿನವರೆಗೂ ಏಳುವು ದಿಲ್ಲ – ಎದ್ದಾಗ ಸರಿಹೋಗುತ್ತಾಳೆ."

" ಹೇಗಾದರಾಗಲಿ, ನಾನೂ ಇಲ್ಲೇ ಇದ್ದುಬಿಡುತ್ತೇನೆ."

" ಬೇಕಾದರೆ ಇರು. ಆದರೆ ಇರಬೇಕಾದುದಿಲ್ಲ, ನಾನು ಅವಳ ಪಕ್ಕ ಬಿಟ್ಟು ಕದಲುವುದಿಲ್ಲ. ಎರಡು ದಿನ ಈ ಚಿಂತೆಯಲ್ಲಿ ಶಾಂತವಾಗಿರಲೆಂದೇ ಈ ಹೋಟಲಿಗೆ ಕರೆತಂದದ್ದು. ಅವಳಿಗೆ ಬೇಕಾದುದೆಲ್ಲಾ ಶಾಂತಿ, ಅಷ್ಟೆ."

" ಅವಳಿಗೆ ಶಾಂತಿ ಸಿಗುವವರೆಗೂ ಇಲ್ಲಿರಲಿ. ಎಷ್ಟು ಹಣವಾದರೂ ನಾನು ಕೊಡುತ್ತೇನೆ." – ಎಂದ ಸದಾನಂದ.

" ಹಣಕ್ಕೆ ತೊಂದರೆಯಾದರೆ ಖಂಡಿತ ಹೇಳುತ್ತೇನೆ. ಸದ್ಯಕ್ಕಾಗು ವಷ್ಟು ನನ್ನ ಬಳಿ ಇದೆ." ಫ್ಲೋರಾ ಹೇಳಿದಳು.

" ತಪ್ಪು ತಿಳಿದುಕೊಳ್ಳಬೇಡಿ."

" ಖಂಡಿತವಾಗಿಯೂ ಇಲ್ಲ. ಯು ಆರ್ ಟೂ ಗುಡ್ ಟು ಮಿಸ್ಟೇಕ್."

ಸ್ವಲ್ಪ ಹೊತ್ತು ಮೂವರೂ ಮಾತಾಡುತ್ತಾ ಕುಳಿತಿದ್ದರು – ಬಳಿಕ ಸದಾನಂದ ಲೀಲಾವತಿ ಹೊರಡಲು ಸಿದ್ಧವಾದರು. ಅವರು ಹೋಗುವಾಗ ಫ್ಲೋರಾ ಹೇಳಿದಳು –

" ಆಗಲೇ ನಿಮಗೊಂದು ಮಾತು ಹೇಳಬೇಕೆಂದಿದ್ದೆ. ಆ ಶಾಂತಾರಾಂ ಪ್ರಭಾವತಿಯ ನಡತೆಯ ವಿಷಯವಾಗಿ ಹೇಳಿದುದು ಪೂರಾ ಸುಳ್ಳು."

" ನೀನು ಆ ಭರವಸೆ ಕೊಡಬೇಕಾದುದಿಲ್ಲ ಫ್ಲೋರಾ – ಭಗವಂತನೇ ಬಂದು ಹೇಳಿದರೂ ನಿಮ್ಮಿಬ್ಬರನ್ನು ನಾನು ಶಂಕಿಸುವುದಿಲ್ಲ" – ಎಂದಳು ಲೀಲಾವತಿ. ಸದಾನಂದನೂ ಅದಕ್ಕೆ ಸಮ್ಮತಿ ಸೂಚಿಸಿ ತಲೆ ಹಾಕಿದ.

## ೨೭

ಮರು ಬೆಳಿಗ್ಗೆ ಪ್ರಭಾವತಿ ಎದ್ದಾಗ ಒಂಭತ್ತು ಗಂಟೆಯಾಗಿತ್ತು. ಸಣ್ಣಗೆ ತಲೆ ನೋಯುತ್ತಿತ್ತು. ಅವಳು ಕಣ್ತೆರೆದುದನ್ನು ಅವಳ ಮಂಚದ ಬಳಿಯ ಕುರ್ಚಿಯ ಮೇಲೆ ಕುಳಿತು ಪೇಪರ್ ಓದುತ್ತಿದ್ದ ಫ್ಲೋರಾ ನೋಡಿ –

" ಸುಖವಾಗಿ ನಿದ್ರೆಯಾಯಿತೆ, ಪ್ರಭಾ ?" ಎಂದು ಕೇಳಿದಳು.

" ಹೂ. ಏಕೋ ಸಣ್ಣಗೆ ತಲೆನೋವು."

" ಏಕೆ, ಗೊತ್ತಿಲ್ಲವೇ ?"

" ಏಕೋ ನನಗಷ್ಟು ನೆನಪಿಲ್ಲ."

" ಹೋಗಲಿ ಬಿಡು. ಒಂದೆರಡು ಕಪ್ ಸ್ಟ್ರಾಂಗ್ ಕಾಫಿ ಕುಡಿ. ತಲೆ ನೋವು ಸರಿಹೋಗುತ್ತದೆ. ಮುಖ ತೊಳೆಯುತ್ತೀಯೇನು ? ಹಾಗೇ ಕುಡಿಯುವುದಾದರೆ, ತರಿಸುತ್ತೇನೆ."

" ಊಹೂ, ಮೊದಲು ಮುಖ ತೊಳೆಯಬೇಕು."

ಫ್ಲೋರಾ ಅವಳನ್ನು ಕೈ ಹಿಡಿದು ಸ್ನಾನದ ಕೋಣೆಗೆ ಕರೆದೊಯ್ದು, ಅವಳು ಹಲ್ಲುಜ್ಜಿ ಮುಖ ತೊಳೆದ ಕೂಡಲೇ ಟವಲು ಕೊಟ್ಟು, ಮುಖ ಒರಸಿಕೊಂಡ ಕೂಡಲೇ, ಮತ್ತೆ ಕರೆತಂದು ಕೂಡಿಸಿ, ಅಟೆಂಡರಿಗೆ ಹೇಳಿ ಕಾಫಿ ತರಿಸಿ, ಅವಳು ಕಾಫಿ ಕುಡಿದಾದ ಮೇಲೆ ಕರೆದೊಯ್ದು, ಕಡಲಿಗಿದಿರಾಗಿದ್ದ ಕೈಸಾಲೆಯಲ್ಲಿ ಕುರ್ಚಿಯ ಮೇಲೆ ಕೂಡಿಸಿ –

" ಚಳಿಯಾಗುತ್ತದೆಯೇ ಹನಿ. ರಗ್ಗು ತರಲೆ ?" ಎಂದಳು.

" ಊಹೂ. ಚಳಿಯಿಲ್ಲ, ಹಿತವಾಗಿದೆ ಬಿಸಿಲು" – ಎಂದು ಪ್ರಭಾವತಿ ಹೇಳಿದ ಮೇಲೆ ತಾನೂ ಅವಳ ಮಗ್ಗುಲ ಕುರ್ಚಿಯ ಮೇಲೆ ಕುಳಿತಳು.

ಪ್ರಭಾವತಿಗೆ ಫ್ಲೋರಾ ಮಾಡುತ್ತಿದ್ದ ಉಪಚಾರ ನೋಡಿ ನಗು ಬಂತು. ಇರುಳು ಹಾಯಾಗಿ ಕಳೆದು, ಮನಸ್ಸಿನ ಹೊಯ್ದಾಟ ಕಡಮೆಯಾಗಿ ಮನಸ್ಸು ಶಾಂತವಾಗಿತ್ತು. ಮೆದುವಾಗಿ ನಗುತ್ತಾ ಕೇಳಿದಳು –

" ಇದೇನು ಉಪಚಾರ ಫ್ಲೋರಾ, ನಾನು ಮಗುವೇ, ರೋಗಿಯೇ ?"

" ಸದ್ಯಕ್ಕೆ ನೀನು ಎರಡೂ."

" ನಿನ್ನ ಕೈಗೆ ಸಿಕ್ಕಮೇಲೆ, ಅಷ್ಟೇ ತಾನೇ.... ನಿನ್ನೆ ಏನಾಯಿತು

ಫ್ಲೋರಾ? ಸದಾನಂದ್, ಲೀಲಾವತಿ ಯಾವಾಗ ಹೋದರು? ನನಗಂತೂ ಒಂದೂ ನೆನಪಿಲ್ಲ."

ಫ್ಲೋರಾ ಹಿಂದಿನ ಸಂಜೆ ನಡೆದುದೆಲ್ಲವನ್ನೂ ತಿಳಿಸಿ –

"ಇನ್ನು ಹಾಯಾಗಿರು ಪ್ರಭಾ. ನಾಲ್ಕು ದಿನ ಯಾವುದನ್ನೂ ಯೋಚನೆ ಮಾಡಬೇಡ. ಮನಸ್ಸಿನ ಹೊಯ್ದಾಟ ಕಡಮೆಯಾದ ಮೇಲೆ ಏನು ಬೇಕಾದರೂ ಯೋಚಿಸುವಿಯಂತೆ," ಎಂದಳು.

"ನನಗೀಗ ಇನ್ನಾವ ಯೋಚನೆಯೂ ಇಲ್ಲ, ಫ್ಲೋರಾ...."

"ಬಾಯಲ್ಲಿ ಯೋಚನೆ ಇಲ್ಲ ಎನ್ನುತ್ತಿ. ಆದರೆ ಮಾತಿನ ಮೇಲೆ ಮಾತ್ರ ಮಣ ಭಾರ."

"ಆದರೆ ಒಂದು ಕೊರಗು ಇದೆ ಫ್ಲೋರಾ –"

"ಏನದು?"

"ಅವನು ನನ್ನನ್ನು ಏನಂದರೂ ಚಿಂತೆಯಿಲ್ಲ. ನನ್ನಿಂದಾಗಿ ನೀನು ವೃಥಾ ಅಪವಾದಕ್ಕೆ ಗುರಿಯಾಗಬೇಕಾಯಿತಲ್ಲಾ...."

"ಅದು ಅಷ್ಟು ಕೊರಗಾಗಿದೆಯೇ?"

"ನಿಜವಾಗಿಯೂ ನಿನಗೆ ಮುಖ ತೋರಿಸಬೇಕೆಂದರೆ ನಾಚಿಕೆಯಾಗುತ್ತದೆ ಫ್ಲೋರಾ...."

ಪ್ರಭಾವತಿಯ ಮಾತು ಕೇಳಿ ಫ್ಲೋರಾ ಮುಳ್ಳು ತುಳಿದಂತೆ ಮಿಡುಕಿದಳು. ಅವಳ ಮುಖ ಗಂಭೀರವಾಯಿತು.

"ನಿನ್ನೆಯೇ, ನಿನ್ನ ಗಂಡ ನನ್ನಿಂದಾಗಿ ನಿನ್ನಲ್ಲಿ ಸಂಶಯ ತಾಳಿದನೆಂದಾಗಲೇ ನಿನಗೆ ಒಂದು ವಿಷಯ ಹೇಳಬೇಕೆಂದಿದ್ದೆ. ಮಾತು ನಾಲಗೆಯ ತುದಿಯವರೆಗೂ ಬಂದಿತ್ತು. ಆದರೆ ನೀನದನ್ನು ಕೇಳಿ ಮತ್ತೆಲ್ಲಿ ಇನ್ನಷ್ಟು ಕುಗ್ಗಿಹೋಗುತ್ತೀಯೋ ಎಂದು ತಿಳಿದು ಸುಮ್ಮನಾಗಿದ್ದೆ. ಈಗ ನೀನಾಗಿ ಕೇಳುತ್ತಿದ್ದೀಯ. ಏನು ಹೇಳಿದರೂ ಕೇಳಿ ಸಹಿಸುವ ಸ್ಥೈರ್ಯವಿದೆಯೇ ನಿನಗೆ – ಯೋಚಿಸಿ ಹೇಳು ಪ್ರಭಾ. ಉಗ್ರ ಆಘಾತದಿಂದ ನಿನ್ನ ಮನಸ್ಸು ದುರ್ಬಲವಾಗಿದೆ."

ಅವಳ ಮಾತು ಕೇಳಿ ಪ್ರಭಾವತಿ ಒಂದು ಗಳಿಗೆ ಚಿಂತಿಸಿ –

"ನೀನು ಹೇಳಲಿರುವುದು ಅಷ್ಟು ಭಯಂಕರವಾದ, ಕರಾಳ ವಿಷಯವೇ?" ಎಂದಳು.

"ಕರಾಳತೆಯೇ ಜೀವನದ ನಿಜವಾದ ಸೌಂದರ್ಯ. ಆದರೆ ನೀನು ಅದನ್ನು ಅರ್ಥ ಮಾಡಿಕೊಳ್ಳಲಾರೆಯೋ ಇಲ್ಲವೋ ನಾನರಿಯೆ."

"ಅದೇನಾದರೂ ಆಗಲಿ ಹೇಳಿಬಿಡು ಫ್ಲೋರಾ – ನಿನ್ನಿಂದ ನನಗೆಂದೂ ಕೆಡುಕಾಗದೆಂಬ ನಂಬಿಕೆ ನನಗಿದೆ."

"ನಿನ್ನೆ ಆ ದೇವತಾಸ್ತ್ರೀ ಲೀಲಾವತಿಯೂ ಅದನ್ನೇ ಹೇಳಿದಳು – ಆದರೆ ನಾನು ನಿಮ್ಮ ಆ ನಂಬಿಕೆಗೆ ಪಾತ್ರಳಲ್ಲ ಪ್ರಭಾ. ನಿನ್ನೆಯ ದಿನ ನಿನ್ನ ಗಂಡ ನಿನ್ನ ಬಗ್ಗೆ ಆಡಿದುದು ಸುಳ್ಳು, ಆದರೆ ನನ್ನ ಬಗ್ಗೆ ಆಡಿದುದು ಸುಳ್ಳಲ್ಲ."

"ಆ! ನಾನಿದನ್ನು ನಂಬಲಾರೆ ಫ್ಲೋರಾ...."

"ನೀನು ನಂಬುವುದೆಲ್ಲಾ ಸತ್ಯವಲ್ಲ, ನೀನು ನಂಬದಿದ್ದುದೆಲ್ಲಾ ಅಸತ್ಯವೂ ಅಲ್ಲ, ಆದರೆ ನಾನು ಹೇಳಿದುದು ಸುಳ್ಳಲ್ಲ. ನಾನು ನಿನ್ನ ಗಂಡ ಹೇಳಿದಂತೆ ಕುಲಟೆಯಲ್ಲ, ಜಾರಿಣಿಯಲ್ಲ. ಆದರೆ ಪುರುಷಸುಖವರಿಯದ ಅಚ್ಚ ಕನ್ನೆಯೂ ಅಲ್ಲ. ಆದರೆ ಎಂದೂ ನಾನಾಗಿ ಯಾವ ಪುರುಷನ ಬಳಿಯೂ ಹೋಗಿಲ್ಲ, ತಾನಾಗಿ ಬಂದವನಿಗೂ ನನ್ನ ಮೈ ನೀಡಿಲ್ಲ. ನನ್ನ ಮನ ಒಪ್ಪಿದವ ನನ್ನು ಹಣ ಕೊಟ್ಟು ಪಡೆದಿದ್ದೇನೆ."

"ಆ....ಅಂದರೆ.—"

"ಈಗ ನಾನು ಹೇಳುವುದು ನಿನಗೆ ಅರ್ಥವಾಗುವುದಿಲ್ಲ ಪ್ರಭಾ. ಸಂಜೆಯಾಗುವವರೆಗೂ ತಡೆ, ಒಂದು ದೃಶ್ಯ ತೋರಿಸುತ್ತೇನೆ. ಆಮೇಲೆ ನಾನು ಹೇಳುವುದು ನಿನಗೆ ಅರ್ಥವಾಗುತ್ತದೆ. ನಾನು ಹೇಳಿದುದನ್ನು ಕೇಳಿ ನಿನಗೆ ನನ್ನ ಮೇಲೆ ಜುಗುಪ್ಸೆಯುಂಟಾಗಿರಬಹುದು, ನನ್ನಿಂದ ದೂರವಾಗಬೇಕೆಂದೂ ನಿನಗನಿಸಬಹುದು. ಆದರೆ ಸಂಜೆಯವರೆಗೆ ನಿನ್ನ ತೀರ್ಮಾನವನ್ನು ತಡೆಹಿಡಿ. ನನಗಾಗಿ ಅಷ್ಟು ಮಾಡಬಲ್ಲೆಯಾ?"

ಫ್ಲೋರಳ ಬೇಡಿಕೆಯಲ್ಲಿ ದೈನ್ಯವಿರಲಿಲ್ಲ, ಪ್ರಾರ್ಥನೆಯಿರಲಿಲ್ಲ, ಅಚಲ ಗಾಂಭೀರ್ಯವಿತ್ತು.

"ತೀರ್ಮಾನ....ನಿನ್ನ ಮೇಲೆ ನಾನು ತೀರ್ಮಾನ ಕೊಡುವುದೇ ಫ್ಲೋರಾ. ಆ ಮಾತು ಆಡಬೇಡ." ಪ್ರಾರ್ಥನೆ ಕೇಳಿ ತತ್ತರಿಸಿದ ಪ್ರಭಾವತಿ ಹೇಳಿದಳು.

"ನೀನೊಬ್ಬಳೇ ಅಲ್ಲ, ನಿನ್ನನ್ನು ನೋಡಲು ಮಧ್ಯಾಹ್ನ ಲೀಲಾವತಿಯೂ ಬರುತ್ತಾಳೆ. ಇಬ್ಬರೂ ಸೇರಿ ತೀರ್ಮಾನ ಕೊಡಿ."

"ಲೀಲಾವತಿಯನ್ನು ಕೇಳು ಫ್ಲೋರಾ, ಆದರೆ ನಾನಾರು? ಜಗತ್ತಿನ ದೃಷ್ಟಿಯಲ್ಲಿ ನಾನೂ ಒಬ್ಬ ಮನೆ ಬಿಟ್ಟ ಹೆಂಗಸು."

"ನೋಡು – ನಾನಾಗಲೇ ಹೇಳಿದೆ, ಈಗ ಯಾವ ಮಾತೂ ಆಡಬೇಡ. ಸಂಜೆಯವರೆಗೆ ಅದನ್ನು ಮರೆತು ಸುಮ್ಮನಿರು. ನೀನು ಮನಸ್ಸಿಗೆ ಕೊರಗು ಹಚ್ಚಿಕೊಳ್ಳಬಾರದೆಂದು ಇಷ್ಟು ಹೇಳಿದೆ. ಹಾಗಾಗದೆ ನೀನು ಇನ್ನೂ ಕೊರಗಿದರೆ ನನ್ನದು ಅಪರಾಧವಾಗುತ್ತದೆ."

"ಹಾಗೇ ಆಗಲಿ ಫ್ಲೋರಾ. ನನಗಿಷ್ಟು ಸಮಾಧಾನವಿದೆ–ನೀನು ಏಂಜಲ್."

"ಥ್ಯಾಂಕ್ಸ್, ಈಗ ನಿನಗೆ ಏನಾದರೂ ಉಪಾಹಾರ ತರಿಸಲೇನು? ರಾತ್ರಿಯೂ ಊಟವಿರಲಿಲ್ಲ, ಹಸಿವಾಗುತ್ತಿರಬೇಕು."

"ನಿನ್ನ ಬ್ರೇಕ್‌ಫಾಸ್ಟ್ ಆಯಿತೇನು?"

"ಹೂ. ನಾನು ಹೊಟ್ಟೆ ಮುಂದಾಗಿ ಹುಟ್ಟಿದವಳು. ಏನಾದರೂ ಹೊಟ್ಟೆಯನ್ನು ಬಳಲಿಸುವುದಿಲ್ಲ."

"ನಿನ್ನದೇ ಸರಿಯಾದ ದಾರಿ–ಬರೀ ಅಷ್ಟು ಟೋಸ್ಟ್ ತರಿಸು. ನನ್ನ ಜೊತೆಗೆ ನೀನೂ ಕೊಂಚ ತೆಗೆದುಕೋ."

"ಬೇಡ ಎನ್ನುವ ಶಬ್ದವೇ ನನ್ನ ನಿಘಂಟಿನಲ್ಲಿಲ್ಲ."

"ಆದರೆ ನಿನ್ನನ್ನು ನೋಡಿದರೆ, ನಿನ್ನ ನಿಘಂಟಿನಲ್ಲಿ ಇಲ್ಲದಿರುವ ಶಬ್ದವನ್ನು ನಿನ್ನ ಆಫೀಸಿಗೆ ಬಳಸಿರುವಂತಿದೆ. ಅದಕ್ಕೇನು ಎಳ್ಳು ನೀರು ಬಿಟ್ಟಿಯೇನು?"

"ಇಲ್ಲ, ಎರಡು ದಿನ ರಜಾ ಬೇಕೆಂದು ನಿನ್ನೆಯೇ, ಲೀಲಾವತಿಯನ್ನು ಕರೆತರಲು ಹೋದಾಗ ಫೋನ್ ಮಾಡಿದ್ದೆ, ಹಾಗೇ ಫಾರ್ಮಲ್ ಆಗಿ ಅರ್ಜಿ ಬರೆದೂ ಹಾಕಿದೇನೆ. ಆದ್ದರಿಂದ ಆ ಯೋಚನೆ ಇಲ್ಲ."

"ಏತಕ್ಕೆ ರಜಾ ತೆಗೆದುಕೊಂಡೆ? ಆಫೀಸಿಗೆ ಹೋಗಬಹುದಾಗಿತ್ತಲ್ಲಾ...."

"ಏಕೋ, ನಿನ್ನ ಮುದ್ದು ಮುಖ ನೋಡುತ್ತಿರಬೇಕೆಂದು ಮನಸ್ಸಾಯಿತು, ಅದಕ್ಕೆ." ಎಂದು ಉಪಾಹಾರಕ್ಕೆ ಹೇಳುವ ನೆಪಮಾಡಿಕೊಂಡು ಫ್ಲೋರಾ ಎದ್ದು ಹೋದಳು. ಪ್ರಭಾ ಹಾಗೇ ಕುರ್ಚಿಗೊರಗಿ ಕಣ್ಣು ಮುಚ್ಚಿದಳು.

## ೨೮

ಸಂಜೆ ಐದರ ವೇಳೆಗೆ ಲೀಲಾವತಿ ಪ್ರಭಾವತಿಯನ್ನು ನೋಡಲು ಬಂದಳು. ಪ್ರಭಾವತಿ ಎದ್ದು ಫ್ಲೋರಾ ಜೊತೆಯಲ್ಲಿ ಮಾತಾಡುತ್ತಾ ಕುಳಿತಿದ್ದುದನ್ನು ಕಂಡು, ಅವಳ ಮನಸ್ಸಿನ ಭಾರ ಮುಕ್ಕಾಲು ಇಳಿದುಹೋಯಿತು.

"ಹೇಗಿರುತ್ತೀಯೋ ಅಂತ ಗಾಬರಿಯಾಗಿದ್ದೆ ಪ್ರಭಾ. ನಿನ್ನೆ ಸಂಜೆ ಪೂರಾ ಗಾಬರಿ ಮಾಡಿಬಿಟ್ಟದ್ದೆ. ಸದ್ಯ-ಹುಷಾರಾಗಿದೀಯಲ್ಲ ಅದೇ ಸಂತೋಷ."

ಲೀಲಾವತಿಯ ಪ್ರೀತಿಯ ಆತುರ-ಕಾತರವನ್ನು ಕಂಡು ಪ್ರಭಾವತಿಯ ಎದೆ ಮಿದುವಾಯಿತು.

"ನಿನ್ನೆ ಸಂಜೆಯಾದುದನ್ನು ಫ್ಲೋರಾ ಹೇಳಿದಳು. ಅದನ್ನು ನೆನೆದರೆ ನನಗೇ ನಾಚಿಕೆಯಾಗುತ್ತೆ. ಸದಾನಂದ್ ತಂದ ಫಲಿತಾಂಶವನ್ನೇ ನಾನು ನಿರೀಕ್ಷಿಸಿದ್ದೆ. ಆದರೆ ನಾನು ಅಂದಕೊಂಡಷ್ಟು ಶಕ್ತಳಲ್ಲವೋ ಏನೋ. ಆ ಗಳಿಗೆಯಲ್ಲಿ ನನ್ನ ಮೇಲೆ ನನಗೆ ಹತೋಟಿ ತಪ್ಪಿಹೋಯಿತು."

"ನೀನಾಗುವ ಹೊತ್ತಿಗೆ ಅಷ್ಟಾದರೂ ಎದೆ ಗಟ್ಟಿಮಾಡಿಕೊಂಡಿದ್ದೆ. ನಾನಾಗಿದ್ದರೆ ಏನಾಗುತ್ತಿದ್ದೆನೋ!"

"ಈಗಲೂ ಸ್ವಲ್ಪ ಎದೆ ಗಟ್ಟಿಮಾಡಿಕೊಂಡಿರು ಲೀಲಾ, ಬಲವಾದ ಮತ್ತೊಂದು ಆಘಾತ ಕಾದಿದೆ." ಎಂದಳು, ಅದುವರೆಗೂ ಸುಮ್ಮನಿದ್ದ ಫ್ಲೋರಾ.

"ಏನು ಆಘಾತ?" ಗಾಬರಿಯಾಗಿ ಕೇಳಿದಳು ಲೀಲಾವತಿ.

"ಆ ಸುದ್ದಿ ಕೇಳೀ ಗಾಬರಿಯಾಗಿಬಿಟ್ಟರೆ ಹೇಗೆ? ನೋಡುವುದು, ಕೇಳುವುದು ಇನ್ನೂ ಬೇಕಾದಷ್ಟಿದೆ."

"ಏನು ನೋಡುವುದು, ಏನು ಕೇಳುವುದು?"

"ಒಂದು ಜಗದ್ಭವ್ಯ ದೃಶ್ಯ ನೋಡುವುದು, ನನ್ನ ಪವಿತ್ರ ಚರಿತ್ರೆ ಕೇಳುವುದು-ನಿನ್ನ ಬುದ್ಧಿ ಸರಿಯಾಗಿಲ್ಲ, ನೀನು ಅತಿ ಒಳ್ಳೆಯವಳು ಎಂದು ಸಿದ್ಧಮಾಡಿಕೊಡುವುದು-ಇದಿಷ್ಟೂ ಕಾದಿದೆ."

"ನಿನ್ನ ಮಾತೇ ನನಗೆ ಅರ್ಥವಾಗುವುದಿಲ್ಲ ಫ್ಲೋರಾ"

"ಫ್ಲೋರಾ ಶುದ್ಧ ಹುಚ್ಚಿ ಲೀಲಾ, ನಿನ್ನೆ ಆ ಪಶು, ಸದಾನಂದ್ ನುುಂದೆ ತನ್ನ ವಿಷಯವಾಗಿ ಹೇಳಿದುದನ್ನು ಹಚ್ಚಿಕೊಂಡು ಬೆಳಗಿನಿಂದ ಏನೇನೋ ಹೇಳುತ್ತಿದಾಳೆ." ಪ್ರಭಾವತಿ ಹೇಳಿದಳು.

"ಜನ ಅಸತ್ಯವನ್ನು ನಂಬುವಷ್ಟು ಬೇಗ, ಸತ್ಯವನ್ನು ನಂಬುವುದಿಲ್ಲ, ನಾನೇನು ಮಾಡಲಿ"–ಶುದ್ಧ ಅಸಹಾಯಕತೆಯ ಮೋರೆ ಮಾಡಿ ಫ್ಲೋರಾ— "ಆದರೆ ನಾನು ಜನರ ಮೂರ್ಖತೆಯ ಲಾಭ ಪಡೆಯುವಷ್ಟು ವ್ಯವಹಾರ ವಿದೆಯಲ್ಲ." ಎಂದಳು

"ನಾನು ಬಲ್ಲೆ, ನೀನು ಪ್ರಭಾವತಿಯ ಅಕ್ಕ"-ಎಂದಳು ಲೀಲಾವತಿ ನಗುತ್ತ.

"ನಮ್ಮಂಥ ಇಬ್ಬರು ತಂಗಿಯರನ್ನು ಪಡೆದ ನಿನ್ನ ಸೌಭಾಗ್ಯಕ್ಕೇನು ಹೇಳಬೇಕು, ಹೇಳು?"–ಫ್ಲೋರಾ ಸವಾಲಿಗೆ ಜವಾಬು ಕೊಟ್ಟಳು.

ಆರು ಗಂಟೆಯವರೆಗೂ ಮೂವರೂ ಬೀಚಿನಲ್ಲಿ ಸುತ್ತಾಡುತ್ತಿದ್ದರು. ಹೊತ್ತು ಸನೆದಂತೆ ಫ್ಲೋರಾಳಲ್ಲಿ ಏನೋ ಉದ್ವಿಗ್ನತೆ ಕಾಣತೊಡಗಿತು. ಸ್ವಲ್ಪ ಕತ್ತಲಾದ ಮೇಲೆ ಫ್ಲೋರಾ–

"ನಡೆಯಿರಿ, ಈಗ ಹೋಗೋಣ" ಎಂದಳು.

"ಎಲ್ಲಿಗೆ ಹೋಗುವುದು ಫ್ಲೋರಾ?" – ಲೀಲಾವತಿ ಕೇಳಿದಳು.

"ಮೊದಲೇ ಹೇಳಿದರೆ ನೀವು ಬರುವುದಿಲ್ಲ. ಅದಕ್ಕೆ ಕೇಳಬೇಡಿ."

ಎಂದು ಹೇಳಿ, ಬೀಚಿನ ಬಳಿಯಲ್ಲಿದ್ದ ಟ್ಯಾಕ್ಸಿಯೊಂದನ್ನು ಗೊತ್ತುಮಾಡಿ ಬಂದು–"ನಡೆಯಿರಿ" ಎಂದಳು.

ಟ್ಯಾಕ್ಸಿ ಸಂತಾಕ್ರೂಜ್‌ನಿಂದ ಹೊರಟು, ಫ್ಲೋರಾ ಹೇಳಿದ ರಸ್ತೆಗೆ ಬಂದಿತು.

"ಇಲ್ಲಿ ಇಳಿಯಿರಿ," ಎಂದು ಅವರನ್ನು ಇಳಿಸಿ, ಟ್ಯಾಕ್ಸಿಯವನಿಗೆ ರಸ್ತೆಯ ಕೊನೆಯಲ್ಲಿ ಕಾದಿರಲು ಹೇಳಿ–

"ಪ್ರಭಾ – ಕಣ್ಣು ತೆರೆದು ನೋಡುತ್ತಾ ಬಾ. ಈ ಮನೆಗಳ ಮೇಲು ಮಾಳಿಗೆಯನ್ನು ನೋಡು" ಎಂದಳು.

ಅದು ಟ್ರಾಮು, ಬಸ್ಸುಗಳು ಓಡಾಡುವ ರಸ್ತೆಯಾದರೂ ಬಹಳ ಇಕ್ಕಟ್ಟಾಗಿತ್ತು. ಜನಸಂದಣಿಯೂ ಹೆಚ್ಚಾಗಿತ್ತು. ಫ್ಲೋರಾ ಹೇಳಿದಂತೆ ಆ ಮನೆಗಳ ಮೇಲುಭಾಗವನ್ನು ದಿಟ್ಟಿಸುತ್ತಾ ನಡೆದಳು – ನೋಡಿ ಅವಳ ಕಣ್ಣು ಕವಿದು ಬರುವಂತಾಯಿತು.

ಒಂದು ಮನೆಯ ಕಿಟಕಿಯಲ್ಲಿ ಸುಮಾರು ವಯಸ್ಸಾದ ಹೆಂಗಸೊಬ್ಬಳು ಸೆರಗು ಜಾರಿದ ಎದೆ ತೆರೆದು, ಅರೆಬರೆ ಕವಿದ ಜಾಕೀಟಿನ ಮರೆಯಿಂದ ಜೋತು ಬಿದ್ದ ತನ್ನ ಸ್ತನಗಳನ್ನು ಪ್ರದರ್ಶಿಸುತ್ತಿದ್ದಳು; ಮತ್ತೊಂದು ಕಿಟಕಿಯಲ್ಲಿ ಇನ್ನೊಬ್ಬಳು ಆಗಾಗ 'ಆಯಿಯೇ, ಖುಷೀಕೆ ವಖ್ತ್' (ಬನ್ನಿ. ಸಂತೋಷದ ಹೊತ್ತು) ಎಂದು ಕೂಗುತ್ತಾ ಆಗಾಗ ತನ್ನ ಕೈಗೇ ಮುತ್ತಿಟ್ಟು ಕರೆಯುತ್ತಿದ್ದಳು; ಒಂದೊಂದು ಮನೆಯ ಕಿಟಕಿಯಲ್ಲೂ ಒಬ್ಬರು, ಇಬ್ಬರು, ಮೂವರು, ನಾಲ್ವರು ಹೆಂಗಸರು – ಒಬ್ಬೊಬ್ಬಳು ಒಂದೊಂದು ಅಶ್ಲೀಲ ಶೃಂಗಾರಭಂಗಿಯಲ್ಲಿ – ಬೀದಿಯ ಇಬ್ಬದಿಯಲ್ಲೂ ಅದೇ. ಕೆಂಪು ದೀಪ ತೂಗುಹಾಕಿದ ಆ ಮನೆಗಳ ಮುಂದೆ ಜನ ಸಾಲುಗಟ್ಟಿ ನಿಂತಿತ್ತು – ಸಿಳ್ಳು ಹಾಕುತ್ತಾ, ಸಣ್ಣ ದನಿಯಲ್ಲಿ ಹಾಡು ಕುರುಕುತ್ತಾ, ಅಶ್ಲೀಲ ಹಾಸ್ಯ ಮಾಡುತ್ತಾ, ಚರ್ಚೆ ಮಾಡುತ್ತಾ.

ಯಾರೋ ಒಂದಿಬ್ಬರು ಇವರನ್ನು ಹಿಂಬಾಲಿಸಿದ್ದರು. ಮೂರನೆಯವನೊಬ್ಬ ಬಂದು, ಫ್ಲೋರಾಳನ್ನು ನೋಡಿ –

"ಮೇಮ್ ಸಾಬ್, ಗಿರಾಕ್ ಮಾಂಗ್ತಾ ಹೈ?" (ಮೇಮ್ ಸಾಬ್‌ಗೆ ಗಿರಾಕಿ ಬೇಕೋ?) ಎಂದ.

"ಗೆಟೌಟ್ ಯು ಬ್ಲಡಿ ಪಿಂಪ್" (ತೊಲಗಾಚೆ ಹಾಳು ತಲೆಹಿಡುಕ) ಎಂದು ಗದ್ದರಿಸಿದಳು ಫ್ಲೋರಾ.

ಏಟು ತಿಂದ ನಾಯಿಯಂತೆ ಜುಣುಗಿದ ಅವನು ಬದಿಯ ಗಲ್ಲಿಯಲ್ಲಿ.

ಪ್ರಭಾವತಿ ದಿಗ್ಭ್ರಾಂತಳಾದಳು. ಲೀಲಾವತಿ ತಗ್ಗಿಸಿದ ಮೋರೆ ಮೇಲೆತ್ತಲಿಲ್ಲ. ಹಾಗೇ ನಡೆದು ಕಾದಿದ್ದ ಟ್ಯಾಕ್ಸಿಯ ಬಳಿ ಬಂದು ಕುಳಿತರು.

"ನೋಡಿನೆಯಾ ಪ್ರಭಾ – ಆ ಮನೆಗಳನ್ನ, ಮನೆಯ ಮೇಲಿನ ಹೆಂಗಸರನ್ನ, ಮುಂದೆ ಕಾದು ನಿಂತ ಜನರನ್ನ!"

"ಇದೇನು ಬೀದಿ, ಇದೇನು ಜನ...." – ದಿಕ್ಕರಿಯದಂತೆ ಕೇಳಿದಳು ಪ್ರಭಾವತಿ.

"ಇದು ಬೊಂಬಾಯಿನ ಅತ್ಯಂತ ಪ್ರಖ್ಯಾತ, ಅತ್ಯಂತ ಜನಪ್ರಿಯ ರಸ್ತೆ – ಫೋರಾಸ್ ಸ್ಟ್ರೀಟ್; ಸಾಮಾನ್ಯ ಜನರ ಮಾತಿನಲ್ಲಿ ಹೇಳಬೇಕೆಂದರೆ ಸೂಳೆಗೇರಿ; ಕಟುವಾಗಿ ಹೇಳಬೇಕೆಂದರೆ – ಹೆಣ್ಣುತನದ ಮಾರುಕಟ್ಟೆ; ನಿಜ

ಹೇಳಬೇಕೆಂದರೆ ಗಂಡು ಹೆಣ್ಣನ್ನು ಚರಂಡಿಗೆ ಹಾಕಿ ತುಳಿದ ಸ್ಥಳ." – ಫ್ಲೋರಾ ಕಟುವಾಗಿ ಮಾತು ಮಾತಿಗೂ ಉಳಿಯಿಂದ ಕೆತ್ತುವಂತೆ ಹೇಳಿದಳು–

"ನೀನೂ ಹೆಣ್ಣು. ಪ್ರತಿಯೊಬ್ಬ ಹೆಣ್ಣೂ ನೋಡಬೇಕಾದ ಸ್ಥಳ, ನೋಡಿದೆಯಾ ಲೀಲಾವತಿ?"

ಲೀಲಾವತಿ ತಗ್ಗಿಸಿದ ತಲೆ ಎತ್ತಿ ಫ್ಲೋರಾ ಮುಖ ನೋಡಿದಳು. ಅವಳ ಕಣ್ಣುಗಳೆರಡೂ ಕಣ್ಣೀರಿನ ಕೆರೆಗಳಾಗಿದ್ದವು. ಫ್ಲೋರಾ ಮುಖ, ಮಾತು, ಗಾಳಿ ಬೀಸಿದ ಬೆಂಕಿಯಂತೆ ಉರಿಯುತ್ತಿತ್ತು.

"ಈಗ ಹೇಳು ಲೀಲಾ – ಈ ಜಗತ್ತಿಗೆ ಬೆಂಕಿ ಹಚ್ಚಬೇಕೋ ಬೇಡವೋ. ಇದಕ್ಕಿಂತಲೂ ಹೊಲಸು ಸ್ಥಳಗಳಿವೆ ಬೊಂಬಾಯಿನಲ್ಲಿ. ಆದರೆ ಆ ವಿಚಾರ ಭಾಷಣ ಕೊಡಲಿಕ್ಕಲ್ಲ ನಾನು ಕರೆದುಕೊಂಡು ಬಂದದ್ದು. ನನ್ನ ಉದ್ದೇಶ, ಜನರ ದೃಷ್ಟಿಯಲ್ಲಿ ನಾನೇಕೆ ಜಾರಿಣಿಯಾದೆ ಎಂದು ತೋರಿಸಲು."

"ಫ್ಲೋರಾ....ಫ್ಲೋರಾ....ನಿನಗೂ ಈ ಬೀದಿಗೂ ಏನು ಸಂಬಂಧ?" – ಕಂಗಾಲಾಗಿ ಕೇಳಿದಳು ಪ್ರಭಾವತಿ.

"ನನ್ನ ದೃಷ್ಟಿಯಲ್ಲಿ ಏನೂ ಇಲ್ಲ, ಜನರ ದೃಷ್ಟಿಯಲ್ಲಿ ವೃತ್ತಿಸಂಬಂಧ." ಎಂದು ಕಠೋರವಾಗಿ ಹೇಳಿ ಫ್ಲೋರಾ, ಟ್ಯಾಕ್ಸಿಯವನಿಗೆ "ವಿಕ್ಟೋರಿಯಾ ಗಾರ್ಡನ್ಸ್‌ಗೆ ಬಿಡು" ಎಂದಳು.

ಮತ್ತೆ ವಿಕ್ಟೋರಿಯಾ ಗಾರ್ಡನ್ಸ್‌ನಲ್ಲಿ ಇಳಿದು ಟ್ಯಾಕ್ಸಿಯವನ ಹಣ ಕೊಟ್ಟು, ತೋಟದಲ್ಲಿ ಬಂದು ಕೂಡುವವರೆಗೂ ಫ್ಲೋರಾ ಏನೂ ಮಾತಾಡ ಲಿಲ್ಲ. ಉಳಿದಿಬ್ಬರ ಗಂಟಲೂ ಕಟ್ಟಿಹೋಗಿತ್ತು. ತೋಟದಲ್ಲಿ ಏಕಾಂತವಾದ ಸ್ಥಳವಾರಿಸಿ ಮೂವರೂ ಕುಳಿತರು.

"ಆ ಬೀದಿಯಲ್ಲಿ ನೀನು ನೋಡಿದೆಯಲ್ಲಾ ಪ್ರಭಾ, ಆ ಹೆಂಗಸರಿಗೂ ನನಗೂ ಇಷ್ಟೇ ವ್ಯತ್ಯಾಸ – ಅವರನ್ನು ಗಂಡಸರು ಕೊಳ್ಳುತ್ತಾರೆ, ನಾನು ಗಂಡಸನನ್ನು ಕೊಳ್ಳುತ್ತೇನೆ."

ಕುಳಿತ ಸ್ವಲ್ಪ ಹೊತ್ತಿನ ಮೇಲೆ, ಸಿಗರೇಟು ಹೊತ್ತಿಸಿ ಹೇಳಿದಳು ಫ್ಲೋರಾ.

"ನಾನು ಹೀಗೇಕೆ ಮಾಡುತ್ತೇನೆ ಎಂತ ಕೇಳಬಹುದು, ಪ್ರಭಾ – ಅದಕ್ಕೆ ನನ್ನ ಮನೆತನದ ಪರಿಸ್ಥಿತಿಯೇ ಕಾರಣ –

"ನಾನು ಗೋವಾದವಳು. ಶುದ್ಧ ರೋಮನ್ ಕ್ಯಾಥೆಲಿಕ್. ಆದರೆ ನನ್ನ ತಾಯಿ ವೇಶ್ಯೆ. ಪಾದ್ರಿಗಳೇ ಬರುತ್ತಿದ್ದರು ಅವಳ ಬಳಿ, ನನ್‌ಗಳು ಕೊಡುತ್ತಿದ್ದ ತೃಪ್ತಿ ಸಾಲದೆ. ನಾನು ಯಾರ ಮಗಳೋ ಕಾಣೆ. ಆದರೆ ನನ್ನ ತಂದೆ ಎನ್ನಿಸಿಕೊಂಡವನು, ನನ್ನ ತಾಯಿಗೆ ತಲೆಹಿಡುಕ ವೃತ್ತಿ ಮಾಡುತ್ತಿದ್ದ. ಹಣವಿದ್ದ ಗಂಡಸರು ಯಾರೂ ಅವಳ ಬಳಿ ಬರಬಹುದಾಗಿತ್ತು. ತಮ್ಮ ಕಾಮತೃಪ್ತಿಗಾಗಿ ಅವಳ ಬಳಿ ಬಂದವರೇ, ಅವಳನ್ನು ಸೂಳೆ ಎಂದು ಜರಿಯುತ್ತಿದ್ದರು. ಇರುಳು ಅವಳ ಮೈಯಲ್ಲಿ ತೃಪ್ತಿ ಪಡೆದ ಪಾದ್ರಿ, ಹಗಲು ಚರ್ಚಿನಲ್ಲಿ 'ಅವಳು ಸೈತಾನನ ದೂತಿ' ಎಂದು ಜರಿಯುತ್ತಿದ್ದ.

"ಹಗಲು ಅವರ ಕೈಲಿ ಉಗಿಸಿಕೊಂಡು, ಇರುಳು ಅವರ ಮುಂದೆ ನಗೆ ಬೀರಿ ಹೊಟ್ಟೆ ಹೊರೆಯುತ್ತಿದ್ದಳು – ಮತ್ತಾರೂ ಅಲ್ಲ ಲೀಲಾ, ನನ್ನ ಸಾಕ್ಷಾತ್ತು ತಾಯಿ. ಇದನ್ನು ನೋಡಿ ನೋಡಿ ಗಂಡಸೆಂದರೇ ದ್ವೇಷ ಹುಟ್ಟಿತ್ತು ನನಗೆ.

"ನನಗೊಬ್ಬ ಅಣ್ಣ ಇದ್ದ. ಈಗಲೂ ಇದಾನೆ ಪೂನಾದಲ್ಲಿ, ರೈಲ್ವೆ ಇಲಾಖೆಯಲ್ಲಿ. ಮದುವೆಯಾಗಿ ಮರ್ಯಾದೆಯಾಗಿದಾನೆ. ನಾನೂ ತನ್ನ ಹಾಗಾಗಬಾರದೆಂದು ಬಯಸಿ, ನನ್ನ ತಾಯಿ ನನ್ನನ್ನು ಅವನ ಬಳಿ ಬಿಟ್ಟಳು. ಉಳಿದಾವ ಹೆಚ್ಚಿನ ದೋಷವನ್ನು ಅವನಲ್ಲಿ ನಾನು ಕಾಣೆ. ಆದರೆ – ಅನನು ಸೂಳೆಬಡಕ. ತಾನೇ ಸೂಳೆಯ ಮಗನಾದರೂ, ಮದುವೆಯಾದ ಹೆಂಡತಿ ಇದ್ದರೂ, ಅವನಿಗೆ ಸೂಳೆಯ ಚಪಲ ತಪ್ಪಿರಲಿಲ್ಲ. ಕೆಲಸ ಮುಗಿಯಿತೆಂದರೆ ಬೀದಿ ಬೀದಿ ಹುಡುಕಿ ಅಲೆಯುತ್ತಿದ್ದ – ತನ್ನ ತಾಯಿಯೇ ಈ ವೃತ್ತಿಯ ಬಲಿ ಎಂದು ತಿಳಿದೂ. ಅವನಿಗೂ, ಆ ಘೋರ ನರಕವನ್ನರಿತೂ, ಅದನ್ನು ಪ್ರೋತ್ಸಾಹಿಸಬಾರದೆಂಬ ಬುದ್ಧಿ ಬರಲಿಲ್ಲ.

"ನಾನಾಗ ಕಾಲೇಜಿನಲ್ಲಿ ಓದುತ್ತಿದ್ದೆ. ನನ್ನ ಜೊತೆಯಲ್ಲಿ ಓದುತ್ತಿದ್ದ ಒಬ್ಬ ಸಹಪಾಠಿ ನನ್ನನ್ನು ಪ್ರೀತಿಸಿದ, ನಾನೂ ಅವನನ್ನು ಪ್ರೀತಿಸಿದೆ. ಇಬ್ಬರೂ ಆಗಾಗ ಎಲ್ಲಾದರೂ ಕಲೆತು ಹರಟೆ ಹೊಡೆಯುತ್ತಿದ್ದೆವು. ಎಂದೋ ಒಮ್ಮೆ ಅಪರೂಪವಾಗಿ ಸಿನಿಮಾಕ್ಕೆ ಹೋಗುತ್ತಿದ್ದೆವು. ಆದರೆ ನಮ್ಮ ಪತ್ರವ್ಯವಹಾರ. ಜೋರಾಗಿತ್ತು. ಅಂಚೆ ವ್ಯವಸ್ಥೆ ಇರುವುದೇ ನಮಗೇನೋ ಎಂಬ ಹಾಗಿತ್ತು.

"ಒಮ್ಮೆ ಈ ಕಾಗದಗಳು ಹೇಗೋ ನನ್ನ ಅಣ್ಣನ ಕೈಗೆ ಬಿತ್ತು. ಅವನು ಕೆರಳಿ ಬೆಂಕಿಯ ಮರಿಯಾದ. ನಿನ್ನ ಗಂಡ ನನ್ನ ಬಗ್ಗೆ ಉಪಯೋಗಿಸಿದ ಮಾತುಗಳನ್ನೆಲ್ಲಾ ಉಪಯೋಗಿಸಿದ ನನಗೂ ರೇಗಿತು.

"'ನೀನು ಹತ್ತು ಜನ ಹೆಂಗಸರ ಹತ್ತಿರ ಹೋಗಬಹುದಾದರೆ, ನಾನೇಕೆ ಮನ ಬಂದವನ ಜೊತೆ ಹೋಗಬಾರದು?' ಎಂದೆ.

"'ನಾನು ಗಂಡಸು, ಬೇಕಾದ್ದು ಮಾಡುತ್ತೇನೆ. ನೀನು ಹೆಂಗಸು, ಹಾಗೆ ಮಾಡುವುದು ತಪ್ಪು. ನಿನ್ನ ತಾಯಿ ವೇಶ್ಯೆಯಾಗಿರುವುದೇ ಸಾಕು. ನೀನೂ ಅದೇ ಜಾತಿಗೆ ಬೀಳಬೇಡ' ಎಂದ.

"'ಗಂಡಸು'– ಅವನಿಗೆ ತನ್ನ ತಾಯಿಯ ಬಗ್ಗೆಯೂ ಗೌರವವಿರಲಿಲ್ಲ. ದುಡಿಯುವ ಗಂಡಸು – ಅವನು ಮಾಡಿದ್ದು ಸರಿ, ಗುಲಾಮ ಹೆಣ್ಣು ಗಂಡಸಿಗೆ ಬೇಕಾದಾಗ ಹೆಂಡತಿಯಾಗಿ, ಬೇಕಾದಾಗ ಸೂಳೆಯಾಗಿ, ಅವನಿಗೆ ಹೇಗೆ ಬೇಕೋ ಹಾಗಿರಬೇಕು. ಹೆಂಗಸು ಹೆಂಗಸಾದುದರಿಂದ ಅವಳಿಗಾವ ಸ್ವಾತಂತ್ರ್ಯವೂ ಇಲ್ಲ. ಅವನು ಇಟ್ಟ ಎಡೆಯಲ್ಲಿ ದೇವಾಲಯ ಎಂದು ತೃಪ್ತಳಾಗಬೇಕು.

"ಅಂದಿನಿಂದ ನನ್ನ ಎದೆಯಲ್ಲಿ ಒಂದೇ ಬಯಕೆ; ಗಂಡಸು ಹೆಂಗಸನ್ನು ನಡೆಸಿಕೊಂಡಂತೆ, ನಾನು ಗಂಡಸನ್ನು ನಡೆಸಿಕೊಳ್ಳಬೇಕು. ಅವನಿಂದ ಕಾಮತೃಪ್ತಿ ಪಡೆದು ಅವನ ಮೋರೆಯ ಮೇಲೆ ಹಣ ಒಗೆದು ಹೋಗು ಎನ್ನಬೇಕು.

"ಹೀಗೆ ನಾನು ಮೊದಲು ಅಪಮಾನಿಸಿದ್ದು, ನನ್ನನ್ನು ಪ್ರೀತಿಸಿದವನನ್ನು, ನಾನು ಪ್ರೀತಿಸಿದವನನ್ನು. ಒಂದು ದಿನ ಅವನನ್ನು ರೇಗಿಸಿ, ಅವನು ನನ್ನನ್ನು ಅಂಗಲಾಚುವಂತೆ ಮಾಡಿ, ಕಾಮತೃಪ್ತಿ ಪಡೆದು, ಹತ್ತಿರವಿದ್ದ ಚಿಲ್ಲರೆ ಕಾಸನ್ನು ಅವನ ಮೋರೆಯ ಮೇಲೆ ಒಗೆದೆ–

"'ಇದು ನೀನು ನನಗೆ ಕೊಟ್ಟ ಕಾಮತೃಪ್ತಿಯ ಬೆಲೆ' ಎಂದು.

"ಆಗ ಅವನ ಮುಖ ನೋಡಬೇಕಾಗಿತ್ತು ಪ್ರಭಾ – ಪೆಟ್ರೋಲು ಸೋಕಿಸಿದರೆ ಹೊತ್ತಿ ಉರಿಯುತ್ತಿತ್ತು. ಅಂದು ನನ್ನ ಮನಸ್ಸಿಗೇನೋ ಒಂದು ಬಗೆಯ ಅಪೂರ್ವ ತೃಪ್ತಿ ದೊರೆಯಿತು.

"ಅಂದಿನಿಂದ ಇದನ್ನೇ ಮಾಡುತ್ತಿದ್ದೇನೆ. ದೇವರು ನನಗೆ ರೂಪ ಕೊಟ್ಟು ದೊಡ್ಡ ಉಪಕಾರ ಮಾಡಿದ, ಅದೊಂದಕ್ಕೇ ನಾನು ಅವನಿಗೆ ವಂದಿಸುವುದು. ನನ್ನ ರೂಪಕ್ಕೆ ಮರುಳಾಗಿ ಹತ್ತಾರು ಪಶು ಬರುತ್ತವೆ. ಅವರಲ್ಲಿ

ನನಗೆ ಬೇಕಾದವರನ್ನು ಆಯ್ದು, ಅವನ ಪಿತ್ತ ಕೆರಳಿಸಿ, ನಾನು ಹೇಳಿದ ಹಾಗೆ ಮಾಡುವ ಸ್ಥಿತಿಗೆ ತಂದು, 'ನನಗೆ ಕಾಮತೃಪ್ತಿ ಕೊಟ್ಟು ಹಣ ಪಡೆಯಬೇಕು' ಎಂದು ಷರತ್ತು ಹಾಕಿ, ಅವನು ಒಪ್ಪಿಕೊಂಡ ಮೇಲೆ, ಅವನಿಂದ ತೃಪ್ತಿ ಪಡೆದು, 'ನೀನು ಕೊಟ್ಟ ತೃಪ್ತಿಯ ಬೆಲೆ ಇಷ್ಟು' ಎಂದು ಹಣ ಕೊಡುತ್ತೇನೆ. ಸಿಂಹದಂತೆ ಬಂದವನು ನಾಯಿಯಂತೆ ನುಸುಳಿ ಹೋಗುತ್ತಾನೆ.

"ಇದಕ್ಕಾಗಿ ಜಗತ್ತು ನನಗೆ, ಕುಲಟೆ, ಸ್ವೈರಿಣಿ, ಜಾರೆ ಎಂದೆಲ್ಲಾ ಬಿರುದು ಕೊಟ್ಟಿದೆ. ಆದರೆ ನನಗದರ ಪರಿವೆಯಿಲ್ಲ.

"ಆ ಬೀದಿಯಲ್ಲಿ ನೀನು ನೋಡಿದೆಯಲ್ಲಾ ಲೀಲಾ, ಅಲ್ಲಿ ಮಾರಾಟಕ್ಕೆ ಮೈ ಕೊಡುವವರು ಕುಲಟೆಯರು, ವೇಶ್ಯೆಯರು, ಕೊಳ್ಳುವವನು ಗಂಡಸು, ಸಾಭ್ಯಸ್ತ, ದೊಡ್ಡಮನುಷ್ಯ.

"ಅದೇ ತಕ್ಕಡಿಯಲ್ಲಿ ತೂಗಿ ಹೇಳು, ನಾನು ಯಾರು – ನನ್ನ ಬಳಿಗೆ ಬರುವ ಗಂಡಸಿಗೆ ಏನು ಹೆಸರಿಡಬೇಕು? ಈಗ ನನ್ನ ಬಗ್ಗೆ ನೀನು ಬೇಕಾದ ತೀರ್ಮಾನ ಕೊಡು ಪ್ರಭಾ. ಲೀಲಾ, ನಿನ್ನೆ ನೀನು 'ಭಗವಂತ ಬಂದರೂ ನಿನ್ನನ್ನು ಶಂಕಿಸುವುದಿಲ್ಲ' ಎಂದೆ. ಅದಕ್ಕಾಗಿ ಇದನ್ನು ನಿಮ್ಮಿಂದ ಮುಚ್ಚಿಡಲಾರೆ. ಗಂಡಸಾಗಿ ಪ್ರಭಾ ಗಂಡ ನನ್ನ ಮೇಲೆ ತೀರ್ಮಾನ ಕೊಟ್ಟ, ಅದನ್ನು ನಾನು ಲೆಕ್ಕಿಸುವುದಿಲ್ಲ. ಗಂಡಸು ನನ್ನ ರೂಪದ ಬೂಟು ನೆಕ್ಕುವ ನಾಯಿ.

"ನೀವು ಹೆಣ್ಣು, ನೀವು ಹೇಳಿ – ನನ್ನ ಮೇಲೆ ಏನು ತೀರ್ಮಾನ?" – ಜೀವಂತ ಜ್ವಾಲಾಮುಖಿಯಂತೆ ಕೇಳಿದಳು ಫ್ಲೋರಾ.

ಲೀಲಾ ಫ್ಲೋರಳ ಹತ್ತಿರ ಸರಿದು ಅವಳ ನೆತ್ತಿಯನ್ನು ನೇವರಿಸಿ ಹೇಳಿದಳು.

"ನಿನ್ನ ಮೇಲೆ ನನ್ನ ತೀರ್ಮಾನವನ್ನು ನೀನೇ ಕೊಟ್ಟಿಯಲ್ಲ ಫ್ಲೋರಾ. ಹೋಟಲಿನಲ್ಲಿ ಮಾತನಾಡುವಾಗ."

"ಏನೆಂದು?"

"ನೀನು ನನ್ನ ತಂಗಿ ಎಂದು. ಅದೇ ನಾನು ಹೇಳುವುದು. ಮತ್ತೇನು ಹೇಳಲಿ."

"ಫ್ಲೋರಾ, ಗಂಡಿನ ಪೌರುಷತ್ವಕ್ಕೆ ಅಪಮಾನ ಮಾಡುವ ನಿನ್ನ ನಿರ್ಧಾರಕ್ಕೆ ನನ್ನ ಅಭಿನಂದನೆಗಳು. ನಾನು ನಿನ್ನ ಜೊತೆ." – ಎಂದಳು ಪ್ರಭಾ.

"ಆದರೆ ನನಗೊಂದೇ ವ್ಯಥೆ" – ಲೀಲಾವತಿ ಹೇಳಿದಳು – "ಪುರುಷ ದ್ವೇಷದ ಕಿಚ್ಚಿನಲ್ಲಿ ಎರಡು ಸುಂದರ ಜೀವ ತಾವಾಗಿ ಭಸ್ಮವಾಗುತ್ತಿವೆಯಲ್ಲಾ ಎಂದು."

"ಈ ರೂಪಯಜ್ಞದಲ್ಲಿ, ಯಾವ ಹೆಣ್ಣೂ ಉಳಿಯುವುದಿಲ್ಲ ಲೀಲಾ – ಉರಿದುಹೋಗುವುದೇ, ಗುರಿಯಾಗಿ ಹೋದಾಗ, ಹೇಗೆ ಉರಿದರೇನು? ಕಾಲು ಮುಂದಾಗಿ ಉರಿದರೇನು, ತಲೆ ಮುಂದಾಗಿ ಉರಿದರೇನು? ಹಾಗಾಗದೆ ಹೆಣ್ಣು ಉಳಿಯಬೇಕೆಂದರೆ, ಈ ಪುರುಷ ಪ್ರತಿಷ್ಠೆ ಉರಿದುಹೋಗಬೇಕು. ಅದಾಗುವುದಾದರೆ ನಾನು ಏನು ಬೇಕಾದರೂ ಮಾಡಲು ಸಿದ್ಧ." ಒರೆಯಿಂದೆಳೆದು ಚಮಕಿಸಿದ ಕತ್ತಿಯ ಅಲುಗಿನಂತಿತ್ತು ಫ್ಲೋರಳ ಮಾತು.

"ಈ ದಹನ ಕಾರ್ಯಕ್ಕೆ ನೀನು, ಪ್ರಭಾ, ಶಾಲಿನಿ ಎಲ್ಲರೂ ಸಿದ್ಧವಾಗಿದೀರ. ನಾನೊಬ್ಬಳೇ ಈ ಗುಂಪಿಗೆ ಸೇರದಿರುವುದು. ಹೀಗೇ ಆದರೆ ನಾನೂ ನಿಮ್ಮ ಗುಂಪಿಗೆ ಸೇರಬೇಕಾಗುವುದೋ ಏನೋ." – ಅತೀವ ಯಾತನೆ ತುಳುಕುವ ಧ್ವನಿಯಲ್ಲಿ ಹೇಳಿದಳು ಲೀಲಾ –

"ನಾನು ನಿಮ್ಮ ಗುಂಪಿಗೆ ಸೇರಲಿಲ್ಲ ಎಂತ, ನೀವು ಮಾತ್ರ ನನ್ನನ್ನು ದೂರ ಚೆಲ್ಲಬೇಡಿ. ಹೇಗಿದ್ದರೂ ನಾನು ನಿಮ್ಮವಳೇ." ಫ್ಲೋರಾ ಪ್ರಭಾ ಇಬ್ಬರ ಹೆಗಲ ಮೇಲೂ ಎರಡು ಕೈ ಹಾಕಿ ಹೇಳಿದಳು ಲೀಲಾವತಿ.

"ಪ್ರಭಾ, ನಿನ್ನ ಕೊರಗು, ನಿನ್ನ ಗಂಡ ನನ್ನನ್ನು ವೃಥಾ ಅಂದನೆಂದ ಕೊರಗು ತೀರಿತೆ?" – ಫ್ಲೋರಾ ಕೇಳಿದಳು.

"ಕೊರಗು, ಇನ್ನೆಲ್ಲಿಯ ಕೊರಗು." ಪ್ರಭಾವತಿ ಕೇಳಿದಳು.

"ಇವಳು ನಿನ್ನೆ ನಿನ್ನ ಗಂಡ ಹೇಳಿದುದನ್ನು ಕೇಳಿ, ತನ್ನ ಗಂಡ ನನ್ನನ್ನು ನಿಂದಿಸಿದನಲ್ಲಾ ಎಂದು ಕೊರಗುತ್ತಿದ್ದಳು ಲೀಲಾ. ಆ ಕೊರಗಿನ ನಿವಾರಣೆಗಾಗಿ ಇಷ್ಟೆಲ್ಲಾ ಹೇಳಬೇಕಾಯಿತು. ನಿನ್ನ ಮನಸ್ಸಿಗೆ ತುಂಬಾ ನೋವಾಗಿರಬೇಕು. ನನ್ನನ್ನು ಕ್ಷಮಿಸು ಲೀಲಾ." ಎಂದಳು ಫ್ಲೋರಾ ಲೀಲಾವತಿಯ ಕೈ ಹಿಡಿದು.

"ಕ್ಷಮೆ? ನಿನ್ನನ್ನು ಕ್ಷಮಿಸುವ ಯೋಗ್ಯತೆ ನನಗಿದೆಯೇ ಫ್ಲೋರಾ?" – ಲೀಲಾವತಿ ನಮ್ರಳಾಗಿ ಹೇಳಿದಳು.

"ಅದನ್ನು ಕೇಳಿ ಫ್ಲೋರಾ ಎದೆ ತುಂಬಿ ಬಂತು. ಹಾಗೇ ಹೇಳಿದಳು–

"ಇದು ಸಂತರ ಮಾತು."

## ೨೯

“ ಸಂಸಾರ ಬಂಧನದಿಂದ ವಿಮೋಚನೆಯಾಯಿತು. ಅದಕ್ಕಾಗಿ ನಾನೇಕೆ ಯೋಚನೆ ಮಾಡಬೇಕು? ಪುರುಷ ದಾಸ್ಯ ಕಡಿದುಹೋಯಿತು. ಆ ವಿಮೋಚನೆಗೆ ಇಷ್ಟಾದರೂ ನೋವು, ಕಣ್ಣೀರಿನ ಬೆಲೆ ಕೊಡಬೇಡವೇ?” – ಎಂದು ಪ್ರಭಾವತಿ ತಾನು ಸ್ವತಂತ್ರಳಾದುದಕ್ಕೆ ಸಂತೋಷಿಸುತ್ತಾ, ಆಗಾಗ ಮನಸಿನಲ್ಲಿ ಮೂಡುವ ಕೊರಗಿನ ಕಿರಿಕಿರಿಯನ್ನು ಮನದಿಂದ ತಳ್ಳಲೆತ್ನಿಸುತ್ತಾ ಹತ್ತಾರು ದಿನ ಕಾಲ ಕಳೆದಳು.

“ ಹಾಯಾಗಿರು. ಮನಸಿಗೆ ಯಾವ ತಾಪತ್ರಯವನ್ನೂ ಹಚ್ಚಿಕೊಳ್ಳಬೇಡ ” -- ಎಂದರೂ ಏಕೋ ಅವಳ ಮನಸಿಗೆ ಸಮಾಧಾನವಿಲ್ಲ.

ಲೀಲಾವತಿ – ಫ್ಲೋರಾ ಇಬ್ಬರೂ ಅವಳನ್ನು ಪ್ರೀತಿಸುತ್ತಾರೆ. ಅವಳಿಗೆ ಬೇಕಾದುದನ್ನು ಮಾಡಲು ಸಿದ್ಧವಾಗಿದಾರೆ. ತಮ್ಮ ಸ್ನೇಹದ ತೆಕ್ಕೆಯಲ್ಲಿ ಅವಳನ್ನು ತಬ್ಬಿ ಕಾಪಾಡಲು ಸಿದ್ಧವಾಗಿದಾರೆ. ಆದರೆ....

“ ಎಷ್ಟು ದಿನ ಹೀಗಿರುವುದು? ಊಟ ತಿಂಡಿಗಾಗಿ ಸ್ನೇಹಿತರದೇ ಆದರೂ ಪರರ ಆಶ್ರಯದಲ್ಲಿದ್ದರೆ, ತಾನು ಸ್ವತಂತ್ರಳಾದುದೇನು, ಒಂದು ಆಶ್ರಯದಿಂದ ತಪ್ಪಿ ಮತ್ತೊಬ್ಬರಾಶ್ರಯಕ್ಕೆ ಬಂದಂತಾಗದೆ?” – ಎಂದು ಚಿಂತಿಸುವಳು.

ಇದೇ ಚಿಂತೆ ದಿನಗಳೆದಂತೆ ಬೆಳೆದು ಕಡೆಗೊಂದು ದಿನ ‘ ಇನ್ನು ಹೀಗಿರುವುದು ಸಾಧ್ಯವಿಲ್ಲ. ಜೀವನಕ್ಕೇನಾದರೂ ಉಪಾಯ ಹುಡುಕಿಕೊಳ್ಳಲೇಬೇಕು ’ ಎಂಬ ನಿರ್ಧಾರಕ್ಕೆ ಬಂದಳು.

ಕಡೆಗೊಂದು ದಿನ ಲೀಲಾವತಿಗೆ ಹೇಳಿದಳು –

“ ಲೀಲಾ, ಇನ್ನು ಎಷ್ಟು ದಿನ ಹೀಗಿರುವುದು. ಅದು ಸಾಧ್ಯವಿಲ್ಲ. ನಾನು ಯಾವುದಾದರೂ ಚಾಕರಿ ಹುಡುಕಲೇಬೇಕು. ನನ್ನ ಹೊಟ್ಟೆಗಾಗುವಷ್ಟನ್ನಾದರೂ ನಾನು ದುಡಿದುಕೊಳ್ಳಲೇಬೇಕು.”

“ ನಾನು ಬೇಡವೆನ್ನುವುದಿಲ್ಲ ಪ್ರಭಾ, ನಿನ್ನ ಜೀವನಕ್ಕೂ ಏನಾದರೊಂದು ಉದ್ಯೋಗ, ಹವ್ಯಾಸ ಬೇಕು. ನಾನೂ ಅದನ್ನೇ ಯೋಚಿಸುತ್ತಿದ್ದೇನೆ. ಅವರಿಗೂ ಹೇಳಿದೇನೆ. ಆದರೆ ನೀನೇನು ಕೆಲಸ ಮಾಡುತ್ತೀಯ ?”

“ ಸಿಕ್ಕಿದ ಕೆಲಸ. ಏನು ಕೆಲಸ ಮಾಡಿದರೆ ತಪ್ಪು ?”

"ಅದು ಸರಿಯೆ. ಅವರೂ ಅದನ್ನೇ ನೋಡುತ್ತಿದಾರೆ. ಏನಾದರೊಂದು ಸಿಗಬಹುದು. ಫ್ಲೋರಾನೂ ಪ್ರಯತ್ನ ಮಾಡುತ್ತಿರಬಹುದಲ್ಲ....?"

"ಹೂ."

"ಆದ್ದರಿಂದ – ಯಾವುದಾದರೂ ಕೆಲಸ ಸಿಕ್ಕಿದರೆ ಹೋಗು. ಆದರೆ ಸಿಕ್ಕುವವರೆಗೂ ಅದರ ಕೊರಗು ಹಚ್ಚಿಕೊಂಡು ಬಡವಾಗಬೇಡ."

"ನೀನು ಹೇಳುವುದು ಸರಿಯೇ ಲೀಲಾ, ಆದರೆ ನಿಜ ಹೇಳಬೇಕೆಂದರೆ ಎಂಥದಾದರೊಂದು ಕೆಲಸ ಸಿಕ್ಕುವವರೆಗೆ ನನ್ನ ಜೀವಕ್ಕೆ ಸಮಾಧಾನವಿಲ್ಲ. ಸದಾನಂದ್‌ಗೆ ಹೇಳು – ಎಂಥ ಕೆಲಸವಾದರೂ ಸರಿಯೆ."

"ಎಂಥ ಕೆಲಸವಾದರೂ ಮಾಡುತ್ತೀಯ ?"

"ಹೂ."

"ಕೆಲಸ ತೋರಿಸಿದ ಮೇಲೆ ಮತ್ತೆ ಬೇಡ ಎನ್ನಕೂಡದು."

"ಹಾಗಾದರೆ ಇಂದಿನಿಂದ ನಿನಗಿದೇ ಕೆಲಸ – ಗದ್ದಲ ಮಾಡದೆ ಈ ಮನೆಯಲ್ಲಿರಬೇಕು. ಅದಕ್ಕೆಷ್ಟು ಸಂಬಳ ಕೊಡಬೇಕು ಹೇಳು." – ಎಂದಳು ಲೀಲಾವತಿ ನಗುತ್ತಾ. ಪ್ರಭಾವತಿಯೂ ನಗುವಿನಲ್ಲಿ ಬೆರೆತಳು.

ಸಾಂತಾಕ್ರೂಜ್ ಹೋಟಲಿನಿಂದ ಬಂದ ಬಳಿಕ ಒಂದು ತಿಂಗಳ ಕಾಲ ಹೀಗೇ ಕಳೆಯಿತು, ಲೀಲಾವತಿಯ ಮನೆಯಲ್ಲಿ. ಫ್ಲೋರಾ ಆಗಾಗ ಬಂದು ನೋಡಿಕೊಂಡು ಹೋಗುತ್ತಿದ್ದಳು. ಪ್ರಭಾವತಿಯೂ ಯಾವಾಗಲಾದರೊಮ್ಮೆ ಅವಳ ಆಫೀಸಿನ ಬಳಿ ಹೋಗಿ, ತಿರುಗಾಡಿ ಹರಟೆ ಹೊಡೆದು ಹೊತ್ತು ಕಳೆದು ಬರುತ್ತಿದ್ದಳು.

ಒಂದು ದಿನ ಸಂಜೆ ಫ್ಲೋರಾ ತನ್ನ ಕೆಲಸ ತೀರಿಸಿಕೊಂಡವಳೇ ನೇರವಾಗಿ ಲೀಲಾವತಿಯ ಮನೆಗೆ ಬಂದಳು, ಅದೂ ಇದೂ ಮಾತಾಡುತ್ತಾ –

"ಲೀಲಾ, ನೀನಿನ್ನು ಹೆಚ್ಚು ದಿನ ಸ್ವಾರ್ಥಪರಳಾಗಿರಲು ಸಾಧ್ಯವಿಲ್ಲ" – ಎಂದಳು.

"ಇದು ಯಾವ ದರೋಡೆಗೆ ಪೀಠಿಕೆ ?" – ಲೀಲಾವತಿ ಕೇಳಿದಳು.

"ಅದು ದಬಾವಣೆಯ ಮಾತು. ಕೊಟ್ಟ ಸಾಲ ವಾಪಸು ಕೇಳಿದರೆ ಅದು ತಗಾದೆ ಅನ್ನಿಸಿಕೊಳ್ಳುವ ಹಾಗೇ, ಕೊಟ್ಟ ವಸ್ತು ಹಿಂದಕ್ಕೆ ಕೇಳಿದರೆ, ದರೋಡೆ ಅನ್ನೀಯಲ್ಲಾ, ತುಂಬಾ ದೊಡ್ಡ ಮನುಷ್ಯಳು."

"ಸ್ವಲ್ಪ, ಸ್ವಲ್ಪ ಸುಧಾರಿಸಿಕೋ ಫ್ಲೋರಾ. ಇದೇನು, ಲೀಲಾ ಮೇಲೆ ಆಪಾದನೆಯ ದಾಳಿಯನ್ನೇ ಆರಂಭಿಸಿದ್ದೀಯಲ್ಲಾ ಏನು ಸಮಾಚಾರ?"

ಅವರಿಬ್ಬರ ಮಾತಿನ ನಡುವೆ ತಾನೂ ಬಾಯಿ ಹಾಕಿ ಹೇಳಿದಳು ಪ್ರಭಾವತಿ.

"ಅಂದ ಹಾಗೆ ಪ್ರಭಾ, ನಿನಗೆ ಹೇಳಬೇಕೂಂತ ಇದ್ದೆ. ನನ್ನ ಫ್ಲಾಟ್ ಬದಲಾಯಿಸಿದೆ."

"ಅರೆ! ಸುಳಿವೇ ಕೊಡಲಿಲ್ಲ."

"ಮನೆ ಸಿಕ್ಕುವ ಸುಳಿವು ನನಗೂ ಇರಲಿಲ್ಲ. ಮೊನ್ನೆ ಗೊತ್ತಾಯಿತು. ನಿನ್ನೆ ಮನೆ ಬದಲಾಯಿಸಿ, ಇವೊತ್ತು ಹೇಳಲು ಬಂದೆ."

"ಎಲ್ಲಿ ನಿನ್ನ ಹೊಸ ಮನೆ?"

"ಶಿವಾಜಿ ಪಾರ್ಕ್‌ನಲ್ಲಿ. ಬೀಚಿಗೆ ಎದುರಾಗಿಯೇ ಇದೆ. ತುಂಬಾ ಸೊಗಸಾಗಿದೆ ಪ್ರಭಾ ಮನೆ. 'ಸಮುದ್ರತರಂಗ' ಅಂತ ಮನೆಯ ಹೆಸರು. ಮೂರು ಹೊತ್ತು ಕಡಲ ಘೋಷ ಕೇಳುತ್ತಿರಬಹುದು, ತರಂಗದಾಟವನ್ನು ನೋಡುತ್ತಿರಬಹುದು. ಆ ಮನೆಯನ್ನು ಎಷ್ಟು ಸಿಂಗರಿಸಿದರೂ ನನಗೆ ತೃಪ್ತಿಯಿಲ್ಲ – ಸುಂದರಿಯಾದ ಹೆಣ್ಣು ಅಲಂಕಾರ ಮಾಡಿಕೊಂಡು ತೃಪ್ತಿಗಾಣದ ಹಾಗೆ – "

"ಅಷ್ಟೇಕೆ ವರ್ಣನೆ – ನನ್ನ ಹಾಗೆ ಎಂದು ಹೇಳಿಕೊಂಡರೆ ಸಾಲದೆ?" – ಲೀಲಾವತಿ ಫ್ಲೋರಾಳನ್ನು ರೇಗಿಸಿದಳು.

"ನಿನ್ನ ಸರದಿ ಬರುತ್ತದೆ ತಡಿ ಲೀಲಾ. ನನ್ನನ್ನು ಹೀಯಾಳಿಸಿದುದಕ್ಕೆ ಪಶ್ಚಾತ್ತಾಪಪಡುವ ಕಾಲವೂ ಬರುತ್ತದೆ – ಆಯಿತೆ. ಅದಕ್ಕೇ ನಾನು ಅಲ್ಲಲ್ಲಿ ಕೊಟ್ಟ ವಸ್ತುಗಳನ್ನೆಲ್ಲ ಕಲೆಹಾಕುತ್ತಿದ್ದೇನೆ. ಲೀಲಾನೂ ಅದೇ ಕೇಳಿದೆ. ಆದರೆ ಹಾಗೆ ಕೇಳುವುದು ದರೋಡೆ ಎನ್ನುತ್ತಾಳೆ. ಇದು ಸರಿಯೆ?"

"ಇವಳದೇನು ಗಲಾಟೆ ಲೀಲಾ – ಮುಗಿಸಿಬಿಡು."

"ಅವಳದೆನ್ನುವುದೇನಿದೆ ಹೇಳಲಿ – ಆಮೇಲೆ ತಾನೆ, ಕೊಡುವ ಬಿಡುವ ಮಾತು."

"ಅದೇನೆಂದು ನಿನಗೆ ತಿಳಿಯದೆ ಲೀಲಾ?" – ಫ್ಲೋರಾ ಕೇಳಿದಳು.

"ಊಹೂ."

"ಅಷ್ಟು ಮರೆವು! ಬಹಳ ಅನುಕೂಲವಾದ ಮರೆವು; ಈ ಗಿಳಿಯನ್ನು ನನಗೆ ಬೇಕಾದಾಗ ಹಿಂದಕ್ಕೆ ಕೊಡುತ್ತೇನೆ ಎಂದು ಹೇಳಿರಲಿಲ್ಲವೇ ನೀನು. ಈಗ ಕಳಿಸಿ ಕೊಡು," – ಎಂದು ಪ್ರಭಾವತಿಯತ್ತ ಕೈತೋರಿ ಹೇಳಿದಳು ಫ್ಲೋರಾ.

"ಇದೇನೇ! ಇದಕ್ಕಾದರೆ ಒಂದು ಲಾರಿ ಕಳಿಸಿ ಕೊಡು, ಕೈಲಿ ತೆಗೆದು ಕೊಂಡು ಹೋಗುವ ಗಿಳಿಯಲ್ಲ ಇದು."

"ಇದೇನು ಕಟುಕರ ಕುರಿ ವ್ಯಾಪಾರ ಕೆಟ್ಟುಹೋಯಿತೆ. ನನ್ನನ್ನೇನೂ ಕೇಳುವುದಿಲ್ಲವೇ ?" – ಪ್ರಭಾವತಿ ಕೇಳಿದಳು.

"ತಮಾಷೆ ಇರಲಿ ಫ್ಲೋರಾ – ಈಗೇನು ಅಷ್ಟು ಅವಸರ, ಇನ್ನೂ ನಾಲ್ಕು ದಿನ ಇಲ್ಲಿರಲಿ."

"ನಿನಗಿದು ತಮಾಷೆ. ನಿನಗಾದರೆ ಪ್ರಭಾ ಜೊತೆಗಿಲ್ಲದಿದ್ದರೂ ಪರವಾಯಿಲ್ಲ. ಒಂಟಿಯಾಗಿ ನಾನು ಹೇಗೆ ಇರಲಿ."

"ಅಷ್ಟು ಜೊತೆ ಬೇಕೆಂದರೆ ಮದುವೆ ಮಾಡಿಕೋ."

"ಸದ್ಯಕ್ಕಾ ಪ್ರಶ್ನೆ ಇಲ್ಲ. ಅದು ನನ್ನ ವೃದ್ಧಾಪ್ಯದ ವಿಮೆ! ಈಗಿವಳನ್ನು ಕಳಿಸು ಲೀಲಾ. ಇಲ್ಲಿದ್ದು ಸುಖದ ಊಟ ಉಂಡು ಬೊಜ್ಜು ಬೆಳಸಿದರೆ ಹೇಗೆ? ದುಡಿಯಬೇಡವೇ ? ಅದಕ್ಕೇ ತರಬೇತಿ ಕೊಡಲು ಸಿದ್ಧತೆ ಮಾಡಿದೇನೆ. ಇವಳಿಗಷ್ಟು ಟೈಪಿಂಗ್, ಷಾರ್ಟ್‌ಹ್ಯಾಂಡ್ ರೈಟಿಂಗ್ ಕಲಿಸಿ, ಎಲ್ಲಾದರೂ ಕೆಲಸಕ್ಕೆ ಹಚ್ಚಬೇಕು."

"ಟೈಪಿಂಗ್ ಒಂದು ಕಾಲಕ್ಕೆ ನನಗೂ ಬರುತ್ತಿತ್ತು ಫ್ಲೋರಾ.... ಸೊಗಸಾಗಿ ಟೈಪ್ ಮಾಡುತ್ತಿದ್ದೆ."

"ಕನಸಿನಲ್ಲೇ, ಪೂರ್ವ ಜನ್ಮದಲ್ಲೇ ?"

"ಈ ಜನ್ಮದಲ್ಲೆ. ಮನೆಯಲ್ಲಿ ಟೈಪ್‌ರೈಟರ್ ಇತ್ತು. ಹೇಳಿಸಿಕೊಂಡು ಕಲಿತಿದ್ದೆ."

"ಹೀಗಾಗುವುದೆಂದು ಆಗಲೇ ಗೊತ್ತಿತ್ತೇನು ನಿನಗೆ?" – ಲೀಲಾವತಿ ಕೇಳಿದಳು.

"ಹೀಗಾಗುವುದೆಂದು ಗೊತ್ತಿರಲಿಲ್ಲ, ಹೀಗಾಗಬೇಕೆಂಬ ಬಯಕೆ ಇತ್ತು."

" ಅಂದರೆ – "

" ಗಂಡಸರು ಟೈಪಿಂಗ್ ಕಲಿತಗೆ ನಾನೂ ಏಕೆ ಕಲಿಯಬಾರದು ಎಂಬ ಹುರುಪಿನಿಂದ ಕಲಿತೆ. ಅಮ್ಮ 'ಇದು ನಿನಗೇಕೆ, ದುಡಿಯುವ ಗಂಡಸಿಗಾದರೆ ಇದೆಲ್ಲಾ ಬೇಕು' ಎಂದಾಗ, 'ನಾನೂ ಗಂಡಸಿನಂತೆ ದುಡಿಯುತ್ತೇನೆ' ಎಂದಿದ್ದೆ."

" ನಿನಗೆ ಟೈಪಿಂಗ್ ಬರುವುದೆಂದಿದ್ದರೆ ಇಷ್ಟು ಹೊತ್ತಿಗೆ ನಿನ್ನ ಕೆಲಸದ ಬಯಕೆ ತೀರುತ್ತಿತ್ತಲ್ಲಾ."

" ಏಕೆ ?"

"ಒಂದು ಕಡೆ ಆ ಕೆಲಸ ಸಿಗುವ ಹಾಗಿದೆ. ಅದಕ್ಕೇ ಕಲಿಯಲಿ ಎಂದದ್ದು. ಕಲಿತಿದ್ದರೆ ಒಳ್ಳೆಯದೇ ಆಯಿತು."

" ಆದರೆ ಹಿಂದೆ ಕಲಿತದ್ದು ಈಗೆಷ್ಟು ನೆನಪಿದೆಯೋ ದೇವರಿಗೇ ಗೊತ್ತು."

" ಅಭ್ಯಾಸ ಬಿಟ್ಟರೆ 'ಟಚ್' ಹೋಗಿರುತ್ತೆ. ಎರಡು ದಿನ ಅಭ್ಯಾಸ ವಾದರಾಗುತ್ತೆ. ಹಾಗಾದರೊಂದು ಕೆಲಸ ಮಾಡು – ಇನ್ನೆರಡು ಮೂರು ದಿನದಲ್ಲಿ ಕೆಲಸದ ಏರ್ಪಾಡು ಮಾಡುತ್ತೇನೆ. ಆ ಕೆಲಸ ಮಾಡುತ್ತಲೇ ಷಾರ್ಟ್‌ಹ್ಯಾಂಡ್ ರೈಟಿಂಗ್ ಕಲಿತುಕೋ. ನಾನು ಹೇಳಿಕೊಡುತ್ತೇನೆ. ಪಿಟ್‌ಮನ್ಸ್ ಪುಸ್ತಕವೂ ಇರಬೇಕು ನನ್ನ ಹತ್ತಿರ – "

" ನಿನಗೆ ಟೈಪಿಂಗ್, ಷಾರ್ಟ್‌ಹ್ಯಾಂಡ್ ರೈಟಿಂಗ್ ಗೊತ್ತೆ ?" – ಪ್ರಭಾವತಿ ಕೇಳಿದಳು.

" ನನ್ನ ಸ್ವತಂತ್ರ ಜೀವನ ಆರಂಭವಾದದ್ದೆ ಸ್ಟೆನೋಗ್ರಾಫರ್ ಆಗಿ."

" ಹಾಗಾದರೆ ಅನುಕೂಲವೇ ಆಯಿತು. ಎಂದಿನಿಂದ ಹೇಳಿಕೊಡುತ್ತೀಯ ?"

" ನಾಳಿನಿಂದ. ಅದಕ್ಕೇ ನಿನ್ನನ್ನು ನಾಳೆ ಕಳಿಸು ಎಂದು ಲೀಲಾಗೆ ಹೇಳಲು ಬಂದೆ."

" ಇಷ್ಟು ಅವಸರ ಮಾಡಿದರೆ ಹೇಗೆ ಫ್ಲೋರಾ ?" – ಲೀಲಾವತಿ ಕೇಳಿದಳು.

" ಏನು ಸೊಸೆಯೇ, ದಿನ ನೋಡಿ ಕಳಿಸಲಿಕ್ಕೆ ?" – ಫ್ಲೋರಾ ಸವಾಲು ಹಾಕಿದಳು.

"ಸೊಸೆಯಾಗಿದ್ದಿದ್ದರೆ ಹೋಗಲಿ, ಪೀಡೆ ಕಳೆಯಿತು ಎಂದು ಕಳಿಸಿ ಬಿಡುತ್ತಿದ್ದೆ. ಸೊಸೆಯಲ್ಲವಾದ್ದರಿಂದಲೇ ಚಿಂತೆ."

"ಅವಳಲ್ಲಿಗೆ ಹೋದರೇನು ಲೀಲಾ, ಬೇಕಾದಾಗ ಇಲ್ಲಿಗೆ ಬರುತ್ತೇನಲ್ಲ. ದಿನವೂ ಬಾರೆಂದರೂ ಸರಿಯೆ." ಪ್ರಭಾವತಿ ಲೀಲಾವತಿಯ ಮಾತನ್ನು ತಡೆದು ಹೇಳಿದಳು.

"ಸರಿಹೋಯಿತು – ಅವಳಿಗೆ ಕರೆದುಕೊಂಡು ಹೋಗುವ ಆತುರ, ನಿನಗೆ ಹೋಗುವ ಆತುರ. ಇನ್ನು ನನ್ನದೇನು ನಡೆಯುತ್ತದೆ. ನಿಮಗೆ ಹೇಗೆ ಬೇಕೋ ಹಾಗೆ ಮಾಡಿ." – ಎಂದಳು ಲೀಲಾವತಿ.

× × × ×

"ಬಿಡುಗಡೆ! ಬಿಡುಗಡೆ! ನಾನಿಂದು ಸ್ವತಂತ್ರಳು!"

ಫ್ಲೋರಾ 'ಕೆಲಸದ ಏರ್ಪಾಡಾಯಿತು. ನಾಳೆನಿಂದ ಕೆಲಸಕ್ಕೆ ಹೋಗ ಬೇಕು. ಕಷ್ಟದ ಕೆಲಸವೇನೂ ಅಲ್ಲ. ತಿಂಗಳಿಗೆ ನೂರು ರೂಪಾಯಿ ಸಂಬಳ' ಎಂದಾಗ ಪ್ರಭಾವತಿಯ ಹೃದಯ ಹಿಗ್ಗಿ ಕೇಕೆ ಹಾಕಿತು. ಹದಿನೈದೇ ದಿನ ಗಳಲ್ಲಿ ಫ್ಲೋರಾ ಈ ಸುದ್ದಿ ತಂದಿದ್ದಳು.

ಈಗವಳು ಯಾವುದಕ್ಕೂ ಹೆದರಬೇಕಾಗಿಲ್ಲ, ಜಗತ್ತನ್ನು ಕಾಲಿನಿಂದ ಒದೆದು ಜೀವಿಸಬಲ್ಲಳು. ಈಗ ಅವಳಿಗೆ ಯಾರೂ 'ನಾನು ದುಡಿದು ತಂದು ಹಾಕಿದುದನ್ನು ತಿಂದು ಬಿದ್ದಿರಬೇಕಾದ ಹೆಂಗಸು' ಎಂದು ಹೇಳುವಂತಿಲ್ಲ. ತಾನು ದುಡಿದುದನ್ನು ತಾನು ತಿಂದು, ಯಾರ ಹಂಗೂ ಇಲ್ಲದೆ ಬಾಳಬಹುದು.

ಹರ್ಷ ನಿರ್ಭರತೆಯಲ್ಲಿ ಪ್ರಭಾವತಿ, ತನಗೀ ಆನಂದವನ್ನೊದಗಿಸಿದ ಫ್ಲೋರಾಳನ್ನು ಆಲಂಗಿಸಿದಳು.

"ಇಷ್ಟು ಆತುರ, ಉತ್ಸಾಹವಿತ್ತೇ ನಿನಗೆ ಈ ಕೆಲಸಕ್ಕಾಗಿ?".. ತನ್ನನ್ನು ಬಿಗಿದ ಪ್ರಭಾವತಿಯ ತೋಳಿನಿಂದ ಸರಿದು ಕೆದರಿದ ತಲೆಗೂದಲನ್ನು ಬೆರಳಿನಿಂದ ತೀಡಿಕೊಂಡು ಕೇಳಿದಳು ಫ್ಲೋರಾ.

"ಹೂ ಫ್ಲೋರಾ. ನಿನ್ನನ್ನು ನಾನು ಹೇಗೆ ಅಭಿನಂದಿಸಬೇಕೋ ನಾನರಿಯೆ."

"ಹೋಗಲಿ, ಮುಂದೊಂದು ದಿನ ಇದಕ್ಕಾಗಿ ನೀನು ನನ್ನನ್ನು ಶಪಿಸ ದಿದ್ದರೆ ಸರಿ."

"ಇಂಥ ಸಂತೋಷದ ಹೊತ್ತಿನಲ್ಲೂ, ವ್ಯಂಗ್ಯವಾಗಿ ಮಾತಾಡಬೇಕೇ ಫ್ಲೋರಾ ಡಾರ್ಲಿಂಗ್."

"ಬೇರೆ ಹೊತ್ತಿನಲ್ಲಿ ವ್ಯಂಗ್ಯಕ್ಕೇನು ಕೆಲಸ."

"ನಿನ್ನದು ಮುಳ್ಳುನಾಲಿಗೆ. ಈ ದಿನ ನಿನ್ನನ್ನು ಕೆಣಕುವಾಸೆಯಿಲ್ಲ.... ಈ ಸುದ್ದಿಯನ್ನು ಲೀಲಾಗೆ ಹೇಳಿ ಬರಬೇಕು ಫ್ಲೋರಾ, ತುಂಬಾ ಸಂತೋಷ ಪಡುತ್ತಾಳೆ ಅವಳು. ಫ್ಲೋರಾ....ಫ್ಲೋರಾ....ನೀವಿಬ್ಬರೂ ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಿತ್ತು....?"

"ಏನಾಗುತ್ತಿತ್ತು ? ಸುಖವಾಗಿರುತ್ತಿದ್ದೆ—ಹೋಗಲಿ ಬಿಡು. ಲೀಲಾಗೆ ಹೇಳಿ ಬಾ. ನಾಳೆನಿಂದ ಕೆಲಸಕ್ಕೆ ಹೋಗಬೇಕು."

"ನೀನು ಬರುವುದಿಲ್ಲವೇ ಲೀಲಾ ಮನೆಗೆ ?"

"ಮತ್ತಾರಿಗೊ ಬರುವುದಾಗಿ ಮಾತು ಕೊಟ್ಟಿದ್ದೇನೆ. ಇವತ್ತೊಂದು ಪಾರ್ಟಿ ಇದೆ. ಇದನ್ನು ನಿನಗೆ ಹೇಳಿ, ಉಡುಪು ಬದಲಿಸಿ ಹೋಗಬೇಕೆಂದು ಬಂದೆ."

"ನೀನಾಯಿತು, ನಿನ್ನ ಪಾರ್ಟಿ ಆಯಿತು. ಯಾವಾಗಲೂ ಅದೇ."

"ಹೂ. ನಿನ್ನ ಹಾಗೆ ನಾನು ಮುದುಡಿದ ಮೋರೆಯ ವೇದಾಂತಿಯಲ್ಲ. ಸುಖವಾಗಿರಬೇಕೆಂದೇ ಹುಟ್ಟಿದವಳು ನಾನು."

"ನಿನ್ನ ಹಾಗೆ ನನಗೂ ಸುಖಪಡುವ ಆಸೆ ಇಲ್ಲವೇ ?"

"ಆಸೆ ಇದೆ. ಆದರೆ ಅರ್ಹತೆ ಇಲ್ಲ."

"ಅಂದರೆ ?"

"ಜಗತ್ತಿನಲ್ಲಿ ಕಷ್ಟಪಡುವುದು ಸುಲಭ, ಸುಖಪಡುವುದು ಕಷ್ಟ. ಕಷ್ಟಕ್ಕೆ ಕಣ್ಣೀರಿನ ನೆರವಿದ್ದರಾಯಿತು, ಸುಖಪಡಲು ಎದೆಗಾರಿಕೆ ಬೇಕು, ಪ್ರಭಾ."

"ಹಾಗೆಂದರೆ ನಾನು ಸುಖಪಡಲಾರೆನೆಂದೇ ನಿನ್ನ ಅಭಿಪ್ರಾಯ ?"

"ಯು ಆರ್ ಟೂ ಸೀರಿಯಸ್ ಟು ಎನ್‌ಜಾಯ್ ಲೈಫ್. (ಸುಖ ಪಡಲಾಗದಷ್ಟು ಗಂಭೀರ ಸ್ವಭಾವದವಳು ನೀನು) ನಿಮ್ಮಂಥವರಿಗೆ ಸಾಧ್ಯ ವಿರುವುದು ಒಂದೇ ಪದವಿ—"

"ಯಾವುದು ?"

"ಮಾರ್ಟೀರ್‌ಡಂ !" (ಹುತಾತ್ಮ ಪಟ್ಟ)

"ನಿನ್ನ ಮಾತು ನಾನು ನಂಬುವುದಿಲ್ಲ ಫ್ಲೋರಾ. ಸುಖಪಡುವುದೆಲ್ಲ ನಿನ್ನ ಗುತ್ತಿಗೆ ಎನ್ನುವ ಹಾಗೆ ಮಾತಾಡುತ್ತಿ."

"ಬೇಡ – ನೀನು ಸುಖಪಡಲು ಯತ್ನಿಸಿ ನೋಡು. ಕೆಂಬನಿಗರೆಯು ವಷ್ಟು ಸುಲಭವಲ್ಲ ನಗುವುದು." -- ಪ್ರಭಾವತಿಗೆ ಸವಾಲು ಹಾಕಿದಂತೆ ಹೇಳಿದಳು ಫ್ಲೋರಾ.

## ೩೦

ಪ್ರಭಾವತಿಯ ಸ್ವತಂತ್ರ ದುಡಿಮೆಯ ದಿನಗಳು ಆರಂಭವಾಯಿತು.

ಅದರ ಮೊದಲ ದಿನ.

ಎಷ್ಟು ಹರ್ಷ, ಎಂಥ ಉತ್ಸಾಹ; ಏನೊಂದು ಬಗೆಯ ರೋಮಾಂಚಕಾರೀ ಭಾವನೆ. ಎಂದೂ ಕಡಲು ಕಾಣದವನು, ಮೊದಲ ಬಾರಿಯ ನೌಕಾಪ್ರಯಾಣಕ್ಕೆ ಹಡಗು ಹತ್ತಿದಾಗ ಆಗುವ ರೋಮಾಂಚ, ಪ್ರಥಮ ಸಮಾಗಮದ ರಾತ್ರಿ ಶಯ್ಯಾಗೃಹ ಪ್ರವೇಶ ಮಾಡುವಾಗಿನ ಪುಲಕ, ಅವಳ ಮೈಯ ನರನರವನ್ನು ಮಿಡಿದಿತ್ತು, ಮೊದಲ ದಿನ ಆಫೀಸಿಗೆ ಹೋಗಿ ಕೆಲಸಕ್ಕೆ ಹಾಜರಾದಾಗ.

ಆಫೀಸಿನ ನಿಶ್ಶಬ್ದ ವಾತಾವರಣ, ವಿದ್ಯುತ್ – ಬೀಸಣಿಗೆಯ ಸದ್ದು, ಸದ್ದು ಮಾಡದೆ ಮೇಜಿನ ಮುಂದೆ ಕೆಲಸ ಮಾಡುತ್ತಿರುವ ಇತರ ನೌಕರರು, ಗಡಿಯಾರ – ಟೈಪ್‌ರೈಟರುಗಳ ಸದ್ದು, ಟೈಪ್ ಮಾಡುವ ಕಾಗದ ತಂದಿಟ್ಟು ಟೈಪ್ ಮಾಡಿದುದನ್ನು ತೆಗೆದುಕೊಂಡು ಹೋಗುವ ಆಳು, ಮಧ್ಯೆ ಮಧ್ಯೆ ಕಾಲಿಂಗ್ ಬೆಲ್ಲಿನ 'ಟ್ರಿಲ್ – ಟ್ರ್ರಿಯರ್' ಎನ್ನುವ ಕಿಣಕಿಣನಾದ. ಈ ಸದ್ದುಗಳೆಲ್ಲವನ್ನೂ ತನ್ನೊಳಗೆ ಅಡಗಿಸಿಕೊಂಡು ಕರಗಿಸಿ ಮತ್ತೆ ಗಂಭೀರವಾಗಿ ನೆಲಸುವ ಮೌನ.

ಹೀಗೆಂದು ಬಣ್ಣಿಸಲಾರಳು ಆ ಅನುಭವವನ್ನು. ಅವರ್ಣನೀಯ ಅನುಭವ.

ಆ ಆಫೀಸಿಗೆ ಹೋಗುವುದೆಂದರೆ ಎಷ್ಟು ಉತ್ಸಾಹ, ಎಷ್ಟು ಶ್ರದ್ಧೆ. ಗಡಿಯಾರವಾದರೂ ಒಂದೆರಡು ನಿಮಿಷ ಹಿಂದೆ – ಮುಂದೆ ಹೋಗಬಹುದು. ಆದರೆ ಪ್ರಭಾವತಿ ಮಾತ್ರ ಹೊತ್ತು ತಪ್ಪಿಸಳು. ಹಗಲೂ ರಾತ್ರಿ ಅದರದೇ

ಚಿಂತೆ. ಎದ್ದಾಗ ಆಫೀಸಿಗೆ ಹೊರಡುವ ಅವಸರ – ಮಲಗುವಾಗ ಮರುದಿನ ಹೊತ್ತಿಗೆ ಸರಿಯಾಗಿ ಹೋಗಲು ಬೇಗ ಏಳಬೇಕೆಂಬ ಕಾತರ.

ಅದರ ಜೊತೆಗೆ ತನ್ನ ಆಫೀಸಿನ ಅನುಭವಗಳನ್ನು ಬಣ್ಣಿಸುವ ಉತ್ಸಾಹ.

ಇದನ್ನು ಕಂಡು ಫ್ಲೋರಾಗೆ ನಗು ಬರುವುದು : ಕನಿಕರವಾಗುವುದು.

"ಇದೇನು ಆ ಆಫೀಸಿನಲ್ಲಿ ದುಡಿಯಲೆಂದೇ ಹುಟ್ಟಿದ ಹಾಗೆ ಆಡು ತ್ತೀಯ. ಕುಡಿಯುವವರು ಬಾರ್ ರೂಂಗೆ ಹೋಗುವ ಹಾಗಾಡುತ್ತೀಯಲ್ಲಾ. ಸಾವು ಹಿಡಿಯಲು ಇಷ್ಟು ಆತುರ ಇರಬಾರದು" – ಎನ್ನುವಳು.

ಆದರೆ ಪ್ರಭಾವತಿಗೆ ಅದಾವುದರ ಪರಿವೆಯೂ ಇಲ್ಲ. ಜಗತ್ತಿನಲ್ಲಿರುವು ದೆಲ್ಲಾ ತಾನೂ – ತನ್ನ ಆಫೀಸು ಎರಡೇ ಎಂಬ ರೀತಿಯಲ್ಲಾಡುವಳು.

ಮೊದಮೊದಲು ಭಾನುವಾರ ಬಂದರೂ ಏಕೆ ಬಂತು ಎಂದು ವ್ಯಥೆ ಪಡುವಳು.

ಆಫೀಸಿಗೆ ಹೋದ ಮೊದಲ ದಿನದಂತೆಯೇ, ಮೊದಲ ಬಾರಿಗೆ ಸಂಬಳದ ನೂರು ರೂಪಾಯಿ ಕಂಡಾಗ.

ಆಫೀಸಿನ ಆಳು ಒಂದನೆಯ ತಾರೀಖಿನ ದಿನ ಸಂಬಳದ ಕವರು ತಂದು ಕೊಟ್ಟು, ಅವಳ ಕೈಯಲ್ಲಿ ರಶೀತಿಗೆ ರುಜು ಹಾಕಿಸಿಕೊಂಡು ಹೋದ. ರಸೀತಿಗೆ ಹಚ್ಚಿದ ಸ್ಟಾಂಪಿನ ಮೇಲೆ ಸಹಿ ಹಾಕುವಾಗ ಅವಳ ಕೈ ನಡುಗು ತ್ತಿತ್ತು. ತನ್ನ ಸುತ್ತ ಮುತ್ತ ಕುಳಿತ ಉಳಿದಾರಿಗೂ ಕೊಡದೆ, ತನ್ನೊಬ್ಬಳಿಗೇ ತಂದುಕೊಟ್ಟರೇನೋ ಎಂಬಂಥ ಭಾವನೆ.

ಕವರನ್ನು ತೆಗೆದು ನೋಡಿದಳು.

ಹತ್ತು ರೂಪಾಯಿನ ಹತ್ತು ನೀಲಿಯ ಬಣ್ಣದ ಹೊಸ ನೋಟುಗಳು!

ಎಣಿಸುವಾಗ ನೋಟಿನ ಸ್ಪರ್ಶದಿಂದ ಅವಳ ಮೈ ಪುಲಕಿತವಾಯಿತು – ಓ ಅದು ಎಂಥ 'ಥ್ರಿಲ್'?

ನೋಟುಗಳನ್ನು ಕವರಿನಲ್ಲಿಟ್ಟು, ಆ ಕವರನ್ನು ಹ್ಯಾಂಡ್‌ಬ್ಯಾಗಿನಲ್ಲಿ ಟ್ಟಳು. ಆದರೂ ಅದನ್ನು ಮತ್ತೆ ಮತ್ತೆ ತೆಗೆದು ನೋಡಬೇಕೆಂಬ ಚಪಲದಿಂದ ಬೆರಳು ತುರಿಸುತ್ತಿದ್ದವು.

ಆಫೀಸಿನಿಂದ ಮನೆಗೆ ಹೊರಟಾಗ, ಸಾಲು ಸಾಲಾಗಿ ನಿಂತ ಸಾವಿರ ಆಕರ್ಷಕ ಅಂಗಡಿಗಳು, ಅವಳನ್ನೇ ದಿಟ್ಟಿಸಿ ನೋಡಿ ಕಣ್ಣು ಹೊಡೆದು–

'ನಾವಿರುವುದೇ ನಿನಗಾಗಿ' ಎಂದವು. ತನ್ನ ಬಳಿ ಇರುವ ಹಣದಿಂದ ಅದೆಲ್ಲವನ್ನೂ ಕೊಳ್ಳಬಹುದು ಎನಿಸಿತು ಅವಳಿಗೆ.

ಆದರೆ ಅದರಲ್ಲಿ ಒಂದು ಕಾಸೂ ಖರ್ಚು ಮಾಡುವ ಮನಸ್ಸಿಲ್ಲ. ಹಾಗೇ ಅದನ್ನು ಲೀಲಾವತಿಗೆ, ಫ್ಲೋರಾಗೆ ತೋರಿಸಬೇಕು. ಅವರು ಅದನ್ನು ನೋಡಿ, ಸಂತೋಷಪಟ್ಟಾಗ – ಓ ಎಂಥ ಹೆಮ್ಮೆ!

ಅವಸರವಸರವಾಗಿ ಮನೆಗೆ ಬಂದು, ಫ್ಲೋರಾ ಬರುವುದನ್ನೇ ಕಾಯುತ್ತಿದ್ದು, ಅವಳು ಬರುತ್ತಿದ್ದ ಹಾಗೇ ಅವಳೆದುರಿಗೆ ಅದನ್ನಿಟ್ಟು –

"ಏನು ಬೇಕು ಹೇಳು ನಿನಗೆ?" – ಎಂದಳು, ಹೆಮ್ಮೆ ಬೆರೆತ ಹರ್ಷದಿಂದ.

"ಖರ್ಚು ಮಾಡಲು ಆತುರ ಬೇಡ ಪ್ರಭಾ – ಅದು ಮೂವತ್ತು ದಿನದ ಅನ್ನ, ಮೂವತ್ತು ದಿನಗಳ ದುಡಿಮೆಯ ಕೂಲಿ," ಎಂದಳು ಫ್ಲೋರಾ, ಯಾವ ಉದ್ರೇಕವೂ ಇಲ್ಲದ ಧ್ವನಿಯಲ್ಲಿ.

"ಪ್ಲೀಸ್, ಫ್ಲೋರಾ – ಇದೊಂದು ದಿನ ನನ್ನ ಉತ್ಸಾಹದ ಮೇಲೆ ತಣ್ಣೀರೆರಚಬೇಡ. ನನ್ನ ಬಾಳಿನಲ್ಲಿ ಈ ದಿನ ಎಂಥ ಮಹತ್ವದ ದಿನವೆಂದರಿಯೆ ನೀನು. ಈ ದಿನ ಪೂರಾ ಖುಷಿಪಟ್ಟುಬಿಡಬೇಕು."

"ಸರಿ, ಹಾಗಾದರೆ ಬಾ. ಏನು ಖುಷಿಪಡುತ್ತೀಯ. ಮದ್ಯಪಾನ ಮಾಡುತ್ತೀಯಾ? ನನ್ನೊಂದಿಗೆ ಗಂಡಸರ ಬೇಟೆಗೆ ಬರುತ್ತೀಯಾ? ಬಾಲ್ ರೂಂ ಡಾನ್ಸ್‌ಗೆ ಬರುತ್ತೀಯಾ? – ಹೇಳು. ಹೊರಡು ಹಾಗಾದರೆ. ಯಾವ ಉಡುಪು ಧರಿಸಲಿ ಹೇಳು?"

ಫ್ಲೋರಾ ಧ್ವನಿಯಲ್ಲಿ ಏನೋ ಒಂದು ಬಗೆಯ ವಿಚಿತ್ರ ಕರ್ಕಶತೆ ಇತ್ತು.

"ಅದೇ ಸುಖವೇ?" – ಉತ್ಸಾಹಭಂಗದಿಂದ ಬಾಡಿದ ಧ್ವನಿಯಲ್ಲಿ ಕೇಳಿದಳು ಪ್ರಭಾವತಿ.

"ಇಲ್ಲವಾದರೆ ಬೇರೇನು ಹೇಳು?"

"ಎಲ್ಲವನ್ನೂ ಮರೆತು ನಗುತ್ತಾ ಇರುವುದು ಸುಖವಲ್ಲವೇ? ಹೋಟಲಿಗೆ ಹೋಗೋಣ – ನಾನು, ನೀನು, ಲೀಲಾ. ಬೇಕಾದ್ದು ತಿನ್ನೋಣ. ಸಿನಿಮಾಕ್ಕೆ ಹೋಗೋಣ, ಬೇಕಾದ ಬಟ್ಟೆ ಹಾಕಿಕೊಂಡು ನಲಿಯೋಣ...."

"ಇಷ್ಟು ದಿನ ಮಾಡದಿದ್ದುದು ಏನಾದರೂ ಇದೆಯೆ ಆ ಪಟ್ಟಿಯಲ್ಲಿ?"

ಪ್ರಭಾವತಿ ಇದುವರೆಗೂ ಆ ಮಾತನ್ನೇ ಯೋಚಿಸದವಳಂತೆ ಯೋಚಿಸಿದಳು. ಎಲ್ಲವೂ ಅವರು ದಿನಾ ಮಾಡುತ್ತಿದ್ದುದೇ.

" ಊಹೂ. ಆದರೂ—"

" ಏನು ಆದರೂ....?"

" ಇವತ್ತು ನಾನು ದುಡಿದ ಹಣದಿಂದ ಅದೆಲ್ಲವನ್ನೂ ಅನುಭವಿಸುತ್ತೇನೆ."

" ಅಂದ ಹಾಗೆ ಪ್ರಭಾ ಡಿಯರ್, ಬರುವಾಗ ರೂಮಿನಲ್ಲಿ ಸಿಗರೇಟು ಮುಗಿದುಹೋದ್ದದೇ ಮರೆತುಹೋಗಿತ್ತು, ಒಂದು ಟಿನ್ ಸಿಗರೇಟು ತರುತ್ತೀಯಾ ? ಪ್ಲೇಯರ್ಸ್ – ಹ್ಯಾಂಡ್‌ಬ್ಯಾಗ್‌ನಲ್ಲಿ ಹಣವಿದೆ."

ಥಟಕ್ಕನೆ ಸಿಗರೇಟನ್ನು ಜ್ಞಾಪಿಸಿಕೊಂಡಂತೆ ಹೇಳಿದಳು ಫ್ಲೋರಾ. ಎಂದೂ ಹೀಗೆ ಹೇಳಿರಲಿಲ್ಲ ಅವಳು ಪ್ರಭಾವತಿಗೆ. ಹೀಗೇಕೆ ಉತ್ಸಾಹ ಮುರಿದ ವಿಚಿತ್ರ ವರ್ತನೆ? ಆ ಯೋಚನೆ ಮಾಡುತ್ತಲೇ ಹೋಗಿ ಮೂಲೆಯಲ್ಲಿದ್ದ ಅಂಗಡಿಯಿಂದ ಸಿಗರೇಟು ಟಿನ್ ತಂದುಕೊಟ್ಟಳು. ಆ ಡಬ್ಬದ ತಗಡು ಕತ್ತರಿಸಿ, ಸಿಗರೇಟು ತೆಗೆದು ಹೊತ್ತಿಸಿ –

" ಥ್ಯಾಂಕ್ಸ್ – ಕಂಗ್ರಾಚ್ಯುಲೇಷನ್ಸ್ " – ಎಂದಳು ಫ್ಲೋರಾ.

" ಕಂಗ್ರಾಚ್ಯುಲೇಷನ್ ಏಕೆ ಫ್ಲೋರಾ?" – ಗೊಂದಲದಲ್ಲಿ ಬಿದ್ದು ಕೇಳಿದಳು ಪ್ರಭಾವತಿ.

" ಆ ಬ್ರೂಟ್–ಅಂಗಡಿಯವನು ಹೇಳಲಿಲ್ಲವೇ ?"

" ಏನು ?"

" ' ಮೇಡಂ, ಇದು ನಿಮ್ಮ ದುಡಿಮೆಯ ಹಣದ ಮೊದಲ ಖರೀದಿ, ಥ್ಯಾಂಕ್ಸ್ ' ಎಂತ. ಈಡಿಯಟ್, ಶುದ್ಧ ಈಡಿಯಟ್ ಅವನು. ನೀನಾದರೂ ಅವನಿಗೆ ಹೇಳಲಿಲ್ಲವೇ ' ಇವತ್ತು ನನ್ನ ಜೀವನದ ಮೊದಲ ಸಂಬಳ ಬಂತು, ಅದರ ಹಣ ಇದು ' ಎಂತ. ಊಹೂ – ಬಸ್, ಟ್ರಾಂ, ಸಿನಿಮಾ, ಹೋಟಲು, ಅಂಗಡಿ, ಬೀದಿ, ಬೊಂಬಾಯಿ ಯಾವುದೂ ಅದನ್ನು ಗಮನಿಸುವುದಿಲ್ಲ. ಇದು ಮೊದಲ ಸಂಬಳದ್ದೋ ಕೊನೆಯ ಸಂಬಳದ್ದೋ, ಅವರಿಗೆ ಬೇಕಾಗಿಲ್ಲ. ಅವರಿಗೆ ಬೇಕಾದುದಿಷ್ಟೇ – ಹಣ. ನೀನೂ ಹಣವನ್ನು ಹಣವೆಂದು ಗಮನಿಸಬೇಕೇ ಹೊರತು, ಅದಕ್ಕೆ ಇಲ್ಲದ ಭ್ರಮೆಯ ಬೆಲೆ ಕಲ್ಪಿಸಬೇಡ ಪ್ರಭಾ. ಜನವನ್ನು ನಿನ್ನ ' ಸೆಂಟಿಮೆಂಟ 'ನ ಕಣ್ಣುಗಳಿಂದ ನೋಡುವಂತೆ ಹಣವನ್ನೂ ಸೆಂಟಿಮೆಂಟ್‌ನ ( ಭಾವನೆಯ ) ದೃಷ್ಟಿಯಿಂದ ನೋಡುತ್ತಿ. ಸೆಂಟಿಮೆಂಟ್

ಕಣ್ಣೀರಿನ ತಾಯಿ. ಊ - ಹೂ - ಅದು ಕೂಡದು, ಅದಕ್ಕೆಷ್ಟು ಬೆಲೆಯೋ ಅಷ್ಟು ಕೊಡು. ಹಣ ಹೇಗೆ ಬಂದದ್ದಾದರೂ ಅದಕ್ಕೆ ಹದಿನಾರಾಣೆಯೇ ಬೆಲೆ. ಜುದಾಸ ಏಸುವಿನ ಬೆಲೆ ಕಟ್ಟಲಿಲ್ಲವೇ - ಮೂವತ್ತು ಬೆಳ್ಳಿ ನಾಣ್ಯ. ಈ ಜಗತ್ತು ಜುದಾಸನ ಸಂತಾನ. ಹಾಗಿದ್ದವರಿಗೇ ಇಲ್ಲಿ ಬದುಕು."

ಫ್ಲೋರಾ ಆಡಿದ ಮಾತು ಕೇಳಿ ಪ್ರಭಾವತಿಗೆ ಛಟಛಟ ಕಪಾಳಕ್ಕೆ ಹೊಡೆದ ಹಾಗಾಯಿತು. ಉತ್ಸಾಹಭಂಗವಾಗಿ ಕಣ್ಣಲ್ಲಿ ನೀರು ತುಂಬಿತು.

"ಫ್ಲೋರಾ....ಫ್ಲೋರಾ...." ಎಂದು ಏನೋ ಹೇಳ ಹೋಗಿ, ಹೇಳಲಾರದೆ ಬಿಕ್ಕಲಾರಂಭಿಸಿದಳು ಪ್ರಭಾವತಿ.

"ನಾನು ಹೇಳಿದ್ದು ನಿಜವಾಯಿತೇ - ಅದು ನಿನ್ನ ಸೆಂಟಿಮೆಂಟಿನ ಅಮೃತಫಲ" - ಹಂಗಿಸಿದ ಹಾಗೆ ಹೇಳಿದಳು ಫ್ಲೋರಾ.

ಆ ಗಳಿಗೆಯಲ್ಲೇಕೋ ಪ್ರಭಾವತಿಗೆ ತನ್ನ ನೌಕರಿ - ಸಂಬಳ - ಫ್ಲೋರಾ ಎಲ್ಲರ ಮೇಲೂ ದ್ವೇಷ ಹುಟ್ಟಿತು.

"ಫ್ಲೋರಾ....ನಿನಗೆ ನನ್ನ ಮೇಲೆ ಹಗೆಯೇ, ನಾನು ಸಂಬಳ ತಂದದ್ದು ಸಹನೆಯಿಲ್ಲವೇ ನಿನಗೆ? ಎಂದೂ ಇಲ್ಲದವಳು ಇಂದೇಕೆ ಹೀಗೆ ಮಾತಾಡುತ್ತಿದೀಯ?" - ಉಕ್ಕಿಬರುವ ಕಕ್ಕುಲತೆಯಿಂದ ಕೇಳಿದಳು ಪ್ರಭಾವತಿ, ಸೋಫಾದ ಮೇಲೆ ಕುಸಿದುಬಿದ್ದು. ತಡೆಯಲಾಗದ ದುಃಖ ಅವಳೆದೆಯಲ್ಲಿ ಕಡೆಯುತ್ತಿತ್ತು.

ಹತ್ತು ನಿಮಿಷ ಸುಮ್ಮನಿದ್ದು ನಂತರ ಫ್ಲೋರಾ -

"ಪ್ರಭಾ....ಪ್ರಭಾ....ಡಿಯರ್...." ಎಂದು ಕರೆದಳು, ಅವಳ ಬೆನ್ನು ನೇವರಿಸಿ.

"ಫ್ಲೋರಾ....ಫ್ಲೋರಾ....ನನ್ನ ಸಂತೋಷಕ್ಕೆ ಬೆಂಕಿ ಇಟ್ಟುಬಿಟ್ಟೆ ನೀನು. ಹೀಗೇಕೆ ಮಾಡಿದೆ ಫ್ಲೋರಾ?" - ವಿಹ್ವಲಳಾಗಿ ಕೇಳಿದಳು ಪ್ರಭಾವತಿ.

"ನನ್ನನ್ನು ಕ್ಷಮಿಸು ಹನೀ, ಅದು ನನ್ನ ಉದ್ದೇಶವಾಗಿರಲಿಲ್ಲ. ಇದು ನೋಡು ನನ್ನ ಉದ್ದೇಶಕ್ಕೆ ಸಾಕ್ಷಿ" - ಎಂದು ತನ್ನ ಕೈಚೀಲದಲ್ಲಿಟ್ಟಿದ್ದ ಸಣ್ಣ ಪೊಟ್ಟಣವನ್ನು ತೆಗೆದು ಪ್ರಭಾವತಿಯ ಕೈಗೆ ಕೊಟ್ಟಳು ಫ್ಲೋರಾ.

"ಇದೇನು ಫ್ಲೋರಾ?"

"ಬಿಚ್ಚಿ ನೋಡು."

ಪ್ರಭಾವತಿ ದಾರ ಕಟ್ಟಿದ ಪೊಟ್ಟಣವನ್ನು ಬಿಚ್ಚಿದಳು. ಅದರಲ್ಲಿ ಸಣ್ಣ ದಂತದ ಭರಣಿ ಇತ್ತು. ಅದನ್ನು ತೆಗೆದು ನೋಡಿದಳು. ಅದರೊಳಗೆ, ಹರಳಿನ ಉಂಗುರವಿತ್ತು.

"ಇದು ಯಾರಿಗೆ ಫ್ಲೋರಾ?"

"ಜೀವನದ ಕಡಲನ್ನು ಸಾಹಸದಿಂದ ಈಸಹೊರಟ ನನ್ನ ಈ ಸಾಹಸಿ ಹಕ್ಕಿಗೆ. ಗೊತ್ತಿಲ್ಲವೇ ಪ್ರಭಾ–ವಿ ಫಾರ್ ವಿಕ್ಟರಿ. ನೀನು ನಿನ್ನ ಸಾಹಸದಲ್ಲಿ ಗೆಲ್ಲಬೇಕೆಂಬ ಶುಭಾಶಯಗಳೊಡನೆ ಕೊಡಬೇಕೆಂದು ತಂದದ್ದು. ಇವತ್ತು ನಿನ್ನ ಸಾಹಸದ ಪ್ರಥಮ ಪರಿಣಾಮ ಕಂಡ ದಿನವಲ್ಲವೇ ಡಾರ್ಲಿಂಗ್. ಈ ದಿನದ ನೆನಪಾಗಿ ನನ್ನ ಕಾಣಿಕೆ"–ಎಂದು ತಾನೇ ಅದನ್ನು ಪ್ರಭಾವತಿಯ ಬೆರಳಿಗಿಟ್ಟು, "ನಿನಗಿದು ಒಪ್ಪಿಗೆಯಾಯಿತೇ ಪ್ರಭಾ"–ಎಂದಳು.

ಪ್ರಭಾವತಿ ಬೆರಳ ಮೇಲಿನ ಉಂಗುರವನ್ನು ಬೆಳಕಿಗೆ ಹಿಡಿದು ನೋಡಿದಳು. ಉಂಗುರದ ಮೇಲೆ ಬಂಗಾರದಲ್ಲಿ ಕುದುರೆ ಲಾಳವನ್ನು ಕೆತ್ತಿ, ಅದರ ನಡುವೆ 'V' ಯನ್ನು ಕೆತ್ತಿ, 'V' ಉದ್ದಕ್ಕೂ ನವರತ್ನಗಳ ಸಣ್ಣ ಹರಳುಗಳನ್ನು ಕೂಡಿಸಿದ ಮುದ್ರಿಕೆಯಿತ್ತು. ಬೆಳಕಿನಲ್ಲಿ ಹರಳುಗಳು ಥಳಥಳ ಹೊಳೆದವು. ಉಂಗುರ ಬಹು ಮುದ್ದಾಗಿತ್ತು.

"ತುಂಬಾ, ತುಂಬಾ ಸುಂದರವಾಗಿದೆ ಉಂಗುರ ಫ್ಲೋರಾ. ಮೆನಿ ಮೆನಿ ಥ್ಯಾಂಕ್ಸ್."

ಈ ಉಂಗುರದ ಕಾಣಿಕೆ–ಆ ಕೆನ್ನೆಗೆ ಹೊಡೆದಂಥ ಮಾತುಗಳು. ಅವಳ ಜೀವನದಷ್ಟೇ ವಿರೋಧಾಭಾಸಗಳ ಮುದ್ದೆಯಾಗಿತ್ತು ಅಂದಿನ ಫ್ಲೋರಳ ನಡತೆ. ಈ ಉಂಗುರ–ಆ ಮಾತು: ಅವೆರಡಕ್ಕೂ ಏನು ಸಾಮರಸ್ಯ?

"ನೀನು ಯೋಚಿಸುತ್ತಿರುವುದನ್ನು ನಾನು ಬಲ್ಲೆ ಪ್ರಭಾ,"–ಫ್ಲೋರಾ ಹೇಳಿದಳು.

"ಏನು ಯೋಚಿಸುತ್ತಿದ್ದೆ ಹೇಳು ಹಾಗಾದರೆ."

"ಹಾಗೆ ಮಾತಾಡಿ, ಈ ಉಂಗುರ ಏಕೆ ತಂದೆ ಎಂದಲ್ಲವೇ?"

"ನಿಜ. ಹೀಗೇಕೆ ಮಾತಾಡುತ್ತಿ ಫ್ಲೋರಾ?"

"ಈ ಉಂಗುರ ಕೊಟ್ಟುದು ನಿನ್ನ ಫ್ಲೋರಾ. ಆ ಮಾತುಗಳನ್ನಾಡಿದ್ದು ಈ ಜಗತ್ತು. ನಾನು ಹೇಗೆ ಮಾತಾಡಿದೆನೋ, ಹಾಗೇ ಈ ಜಗತ್ತು ನಿನ್ನನ್ನು ಕಾಣುವುದು ಪ್ರಭಾ ನೀನು ಸ್ವತಂತ್ರ ಜೀವನ ಮಾಡಿ ಏನೋ ಮಹತ್ವ

ದ್ದನ್ನು ಸಾಧಿಸಿದೆ ಎಂದುಕೊಂಡಿರುತ್ತೀಯ. ಆದರೆ ಜಗತ್ತು ಅದನ್ನು ತಾತ್ಸಾರ ದಿಂದ, ಏನೂ ಕೆಲಸಕ್ಕೆ ಬಾರದೆಂಬಂತೆ ಕಾಣುತ್ತದೆ. ಅದಕ್ಕೆ ನಿನ್ನ ಸಾಧನೆಯ ಬೆಲೆ ಏನೂ ಇಲ್ಲ. ಒಂದಲ್ಲ ಒಂದು ದಿನ ದುಡಿಯುವ ಹೆಂಗಸ ರೆಲ್ಲರಿಗೂ ಇದು ಅರಿವಾಗುತ್ತದೆ. ಆ ಅರಿವು ಎಂಥ ಪ್ರಚಂಡ ಆಘಾತ ಗೊತ್ತೆ, ಪ್ರಭಾ. ನಾನೂ ನಿನ್ನ ಹಾಗೇ ದುಡಿಯುವ ಹೆಣ್ಣು. ಮೊದಲ ಬಾರಿಗೆ ನನಗೆ ಜಗತ್ತಿನ ಆ ತಾತ್ಸಾರದ ಅರಿವಾದಾಗ ಎದೆ ನಡುಗಿಹೋಯಿತು. ತಲ್ಲಣಿಸಿ ಹೋದೆ. ಕೋಟಿ ವರಹದ ವಸ್ತು ಎಂದು ನಂಬಿದುದನ್ನು, ಜನ ಕಾಸಿನ ಬೆಲೆಗೆ ಕೇಳಿದಾಗ ಆಗುವಂಥ ಪರಿಣಾಮ. ಆದರೆ ಬಹು ಬೇಗ ಅದರಿಂದ ಸಾವರಿಸಿಕೊಂಡೆ. ಜಗತ್ತು ನನ್ನ ಸಾಧನೆಗೆ ಏನು ಬೆಲೆ ಕೊಟ್ಟಿತೆಂದು ಅರಿವಾದಾಗ, ಜಗತ್ತಿಗೂ ಅದರ ಬೆಲೆ ಕೊಡುವುದನ್ನು ಕಲಿತೆ ನಾನು."

"ಏನು ಬೆಲೆ?"

"ಯಾವುದೇ ಒಂದು ವಸ್ತುವಿನ ಬೆಲೆ, ಅದು ನಮಗೆ ಎಷ್ಟು ಆನಂದ ಕೊಡುತ್ತದೋ ಅಷ್ಟೆ. ನಾನು ನನ್ನ ದುಡಿಮೆ, ಪದವಿ, ರೂಪ, ಕೌಶಲ, ಜೀವನ, ಜಗತ್ತು ಎಲ್ಲವನ್ನೂ ಅದೇ ದೃಷ್ಟಿಯಿಂದ ನೋಡುತ್ತೇನೆ. ಯಾವು ದಕ್ಕೂ ಅದಕ್ಕಿಂತ ಹೆಚ್ಚಿನ ಬೆಲೆ ಕಟ್ಟಬೇಕಾಗಿಲ್ಲವೆಂದು ನನಗೆ ಅರಿವಾಗಿದೆ. ಆದ್ದರಿಂದ ಯಾವುದರ ಬಗೆಯೂ ಭ್ರಮೆಯಿಲ್ಲ, ಎಂತಲೇ ನಿರಾಶೆಗೂ ಅವ ಕಾಶ ಕಡಮೆ. ಆದರೆ ನೀನು ನನ್ನ ಹಾಗಲ್ಲ. ಎಷ್ಟು ಅಲ್ಲವೆಂದರೂ, ಶುದ್ಧ ಸೆಂಟಿಮೆಂಟಲ್. ಅದೂ ಹಸಿ ಹಸಿ ಸೆಂಟಿಮೆಂಟ್, ಅವೊತ್ತು ನೀನು ಹೋಟಲಿನಲ್ಲಿ ಹಿಸ್ಟೀರಿಕಲ್ ಆದಾಗ ಏಟು ಕೊಟ್ಟುದು ನೆನಪಿದೆಯೇ? ಇದೂ ಅಂಥದೇ ಷಾಕ್ ಟ್ರೀಟ್‌ಮೆಂಟ್. ಜಗತ್ತು ಆ ಚಿಕಿತ್ಸೆ ಮಾಡುವ ಬದಲು ನಾನು ಮಾಡಿದೆ. ಈಗ ಅರ್ಥವಾಯಿತೇ ಪ್ರಭಾ, ನಾನೇಕೆ ಹಾಗೆ ಮಾತಾಡಿದೆನೆಂದು."

"ಗೊತ್ತಾಯಿತು ಫ್ಲೋರಾ, ಒಂದು ಗಳಿಗೆ ನಿನ್ನನ್ನು ತಪ್ಪು ತಿಳಿದು ಕೊಂಡಿದ್ದೆ."

"ಇನ್ನೆಂದೂ ಹಾಗೆ ತಪ್ಪು ತಿಳಿದುಕೊಳ್ಳಬೇಡ ಪ್ರಭಾ. ನಾನು ನಿನಗೆ ಬಯಸುವುದು -- ಸುಖ, ಆನಂದ, ಯಶಸ್ಸು. ಎಂತಲೇ 'ವಿ' ಗುರುತಿನ ಉಂಗುರ ಕೊಟ್ಟಿದ್ದು. ಈ ಜಗತ್ತು ಕಂಬನಿಯ ಕಾಸಾರ. ಇದರಲ್ಲಿ ಮುಳುಗಿ ಸುಖಪಡುವುದು ಸಾಹಸದ ಕೆಲಸ. ನೀನೀಗ ಇಳಿದಿರುವ ಜೀವನದಲ್ಲಿ ಗೆಲ್ಲು

ವಾಗಬೇಕೆಂದರೆ ಆ ಸಾಹಸ ಬೇಕು. ನೀನು ಸಂಸಾರದಲ್ಲಿ ಗೆಲ್ಲಬೇಕೆಂದು ಲೀಲಾ ಮಂಗಲಸೂತ್ರ ಕಟ್ಟಿದ್ದಳು. ಅದು ಸಫಲವಾಗಲಿಲ್ಲ. ಸ್ವತಂತ್ರಳಾಗಿ ನೀನು ಆ ಸ್ವಾತಂತ್ರ್ಯವನ್ನು ಗೆಲ್ಲಬೇಕೆಂದು, ಈ ಗೆಲುವಿನ ಮುದ್ರಿಕೆಯುಂಗುರ ಕೊಟ್ಟಿದೇನೆ. ನನ್ನ ಬಯಕೆ ಏನಾಗುವುದೋ ನೋಡೋಣ."

"ಸ್ವಾತಂತ್ರ್ಯವನ್ನೂ ಗೆಲ್ಲುವುದು – ಹಾಗಂದರೇನು ಫ್ಲೋರಾ ?"

"ನಿನಗೆ ಗೊತ್ತಿಲ್ಲ ಪ್ರಭಾ – ಸ್ವಾತಂತ್ರ್ಯವೆನ್ನುವುದು ಮಹಾ ಬಂಧನ."

"ಮತ್ತೆ ವಿರೋಧಾಭಾಸದ ಮುಳ್ಳು ಮಾತು."

"ನನ್ನ ಬಯಕೆಯೂ ಹಾಗಾಗದಿರಲೆಂಬುದೇ ನನ್ನ ಬಯಕೆ–ಹೋಗಲಿ, ಬಿಡು ಇದೇನು ಮಾತು–ನನ್ನ ಮಾತು ನಿನ್ನ ಕಿವಿಗೆ ಬಿದ್ದಿದ್ದರೆ ಸಾಧ್ಯವಾದಷ್ಟು ನೆನಪಿನಲ್ಲಿಟ್ಟುಕೋ ಅಷ್ಟೆ. ಏಳು, ಬಟ್ಟೆ ಬದಲಾಯಿಸು. ಈ ದಿನ ನೀನು ಹೇಗೆ ಸಿಂಗರಿಸಿಕೊಳ್ಳಬೇಕು ಗೊತ್ತೇ? ನನ್ನ ಕಣ್ಣು ಕೋರೈಸಿ ಹೋಗಬೇಕು. ಆದರೆ ಆ ಅಲಂಕಾರವನ್ನು ಬೇಗ ಮಾಡಿಕೊ. ಲೀಲಾವತಿ ಕಾಯುತ್ತಿರಬಹುದು."

"ನೀನೇ ಹೇಳು, ಯಾವ ಸೀರೆ ಉಡಲಿ ?"

"ಕೆಂಪು ಜರತಾರಿಯ ಅಂಚು ಮತ್ತು ಸೆರಗಿನ ಬಿಳಿಯ ರೇಶಿಮೆಯ ಸೀರೆಯುಟ್ಟು, ಕಿತ್ತಲೆ ಬಣ್ಣದ ದೊಡ್ಡ ಜರತಾರಿ ಅಂಚಿನ ಚೋಲಿ ಹಾಕಿಕೊ. ನವಿಲಿನ ಗರಿಯಾಕಾರದ ತುರುಬು ಕಟ್ಟು. ಹಾಗೇ ಅಲ್ಲಿ ನನ್ನ ರೂಜ್, ಲಿಪ್‌ಸ್ಟಿಕ್, ಕ್ಯೂಟೆಕ್ಸ್ ನೈಲ್ ಪಾಲಿಷ್ ಇದೆ. ಅವನ್ನೂ ಉಪಯೋಗಿಸು."

"ಇದೇನು ಮದುವಣಗಿತ್ತಿಯ ಸಿಂಗಾರವೇ ಫ್ಲೋರಾ,"–ನಗುತ್ತಾ ಕೇಳಿದಳು ಪ್ರಭಾವತಿ.

"ಹೂ ಪ್ರಭಾ. ಜೀವನವನ್ನು ವರಿಸ ಹೊರಟ ವಧು ನೀನು. ನಾನು ನಿನ್ನ ಬೆಸ್ಟ್ ಮೇಡ್."

ಪ್ರಭಾವತಿ ಫ್ಲೋರಾ ಹೇಳಿದಂತೆಯೇ ಸಿಂಗರಿಸಿಕೊಂಡಳು. ಫ್ಲೋರಾ ಅವಳಿಗೆ ತಾನೇ ಹೂದಾನಿಯಲ್ಲಿದ್ದ ಗುಲಾಬಿ ಹೂವನ್ನು ಮುಡಿಸಿ,

"ಪ್ರಭಾ, ನಿನ್ನ ಜೀವನದುದ್ದಕ್ಕೂ ಹೀಗೇ ಇಷ್ಟು ಸುಂದರವಾಗಿ, ಇಷ್ಟು ಅಲಂಕಾರವಾಗಿ, ನಗೆಯ ದೀಪದಂತೆ ಬೆಳಗುತ್ತಿರಬೇಕೆಂಬುದೇ ನನ್ನ ಹಾರೈಕೆ–ನನ್ನ ಬಂಗಾರದ ಹಕ್ಕಿ," ಎಂದಳು ಫ್ಲೋರಾ.

"ನನ್ನನ್ನು ನೋಡಿ ಮೈ ಮರೆತರೆ ಲೀಲಾ ಮನೆಗೆ ಹೋಗಲು ತಡವಾಗುತ್ತದೆ ಏಳು. ಬೇಗ ಡ್ರೆಸ್ ಮಾಡಿಕೋ. ಡ್ರೆಸ್ ಟು ಕಿಲ್, ಫ್ಲೋರಾ."

* * * *

ಸಿಂಗರಿಸಿಕೊಂಡು ಬಂದ ಗೆಳತಿಯರಿಬ್ಬರನ್ನೂ ನೋಡಿ ಸದಾನಂದ್—

"ರತಿ ಒಬ್ಬಳೇ ಎಂದು ಕೇಳಿದ್ದೆ. ಇಬ್ಬರಿರುವುದು ತಿಳಿದಿರಲಿಲ್ಲ. ಇದೇನು ಇಬ್ಬರೋ, ಅಥವಾ ನನ್ನ ಕಣ್ಣ ಭ್ರಾಂತಿಯೋ!"–ಎಂದು–"ಲೀಲಾ, ಲೀಲಾ, ಬೇಗ ನನ್ನ ಕೂಲಿಂಗ್ ಗ್ಲಾಸಸ್ ತಗೊಂಡು ಬಾ, ಕಣ್ಣು ಸುಟ್ಟುಹೋಯಿತು," ಎಂದು ಕೂಗಿದ.

"ಇಷ್ಟು ಹೊತ್ತಿನಲ್ಲೇಕೆ ಕಪ್ಪು ಕನ್ನಡಕ?"–ಎನ್ನುತ್ತಾ ಅಡಿಗೆ ಮನೆಯೊಳಗಿದ್ದ ಲೀಲಾವತಿ ಹೊರಬಂದಳು, ಗಂಡನ ಕರೆ ಕೇಳಿ.

"ನೋಡು. ಈ ದೃಶ್ಯ ನೋಡಿದರೆ ಕಣ್ಣು ಉಳಿದೀತೇ? ಜೋಡಿ ಮಿಂಚು,"–ಎಂದ ಸದಾನಂದ್.

ಅವರಿಬ್ಬರನ್ನು ನೋಡಿ, ಗಂಡನ ಮಾತು ಕೇಳಿ ಕುಲುಕುಲು ನಕ್ಕಳು ಲೀಲಾವತಿ, ಕೇಳಿದವರ ಎದೆಯಲ್ಲಿ ನಗು ತುಳುಕುವಂತೆ.

"ಯಾರ ಮಾರಣಹೋಮಕ್ಕೆ ಹೊರಟಿದೀರ–ಹೀಗೆ ಅಲಂಕಾರ ಮಾಡಿಕೊಂಡು."

"ಮೊದಲ ಬೇಟೆ ನಿನ್ನ ಗಂಡ. ನೋಡಿದ ಕೂಡಲೇ ಆತನ ಕಣ್ಣಿನ ಕಥೆ ಮುಗಿಯಿತು. ನೀನಿನ್ನು ತಡ ಮಾಡಿದರೆ–ಮುಂದಿನ ಅಪಘಾತಕ್ಕೆ ನಾವು ಜವಾಬ್ದಾರರಲ್ಲ." ಫ್ಲೋರಾ ಸದಾನಂದನತ್ತ ತೋರು ಬೆರಳು ಚಾಚಿ, ಎಚ್ಚರಿಸುವಂತೆ ಹೇಳಿದಳು.

"ಅದೇನೂ ಭಯವಿಲ್ಲ. ಅವರಿಗೆ ನನ್ನ ನಾಲಿಗೆಯ ರಕ್ಷೆ ಇದೆ. ಯಾರ ದಾಳಿಯೂ ಗೆಲ್ಲುವುದಿಲ್ಲ,"–ಎಂದಳು ಲೀಲಾವತಿ.

"ಆದರೆ ನನಗೇ ಸೋಲಬೇಕೆಂದು ಆಸೆ"–ಸದಾನಂದ್ ಹೇಳಿದ.

"ಅದಕ್ಕೆ ಮೊದಲು ನನ್ನಿಂದ ತಪ್ಪಿಸಿಕೊಳ್ಳಬೇಕಲ್ಲ?" ಲೀಲಾವತಿ ಗಂಡನನ್ನು ಕೆಣಕಿ ಕೇಳಿದಳು.

"ಈ ಮಾಟಗಾತಿಯಿಂದ ನನ್ನನ್ನು ರಕ್ಷಿಸಲಾರಿರಾ?"–ಸದಾನಂದ್ ಫ್ಲೋರಾ, ಪ್ರಭಾವತಿಯರನ್ನು ಕೇಳಿದ

"ಅಷ್ಟು ಕೆಟ್ಟವಳೇ ಈ ಮಾಟಗಾತಿ?" ಪ್ರಭಾವತಿ ಕೇಳಿದಳು

"ಊಹೂ."

"ಮತ್ತೆ ?"

"ಹೆದರಿಸುವಷ್ಟು ಒಳ್ಳೆಯವಳು. ಅದಕ್ಕೇ ನಾನಾಗಿಯೇ ಅವಳ ಕೈಯಿಂದ ತಪ್ಪಿಸಿಕೊಂಡು ಹೋಗಲಾರೆನೆಂದು ನಿಮ್ಮ ನೆರವು ಕೇಳಿದ್ದು."

"ಲೀಲಾ, ನೋಡು ನೀನೂ ಬೇಗ ಬಟ್ಟೆ ಬದಲಿಸಿ ಸಿದ್ಧವಾಗದಿದ್ದರೆ...." ಬೆದರಿಸುವಂತೆ ಹೇಳಿದಳು ಫ್ಲೋರಾ.

"ಇಷ್ಟು ತಡವಾಗಿ ಬಂದು ನನ್ನನ್ನೇ ಬೆದರಿಸುತ್ತೀರಲ್ಲಾ. ನಿಮಗಾಗಿ ಕಾಫಿ ಮಾಡಿಟ್ಟು ಕಾದದ್ದಾಯಿತು-ಕಾಫಿ-ತಿಂಡಿ ಕೊಡುತ್ತೇನೆ, ಮುಗಿಸಿ, ಅಷ್ಟರೊಳಗೆ ನಾನೂ ಸಿದ್ಧವಾಗುತ್ತೇನೆ,"-ಎಂದು ಕಾಫಿ ತಿಂಡಿ ತರಲು ಒಳಗೆ ಹೋದಳು ಲೀಲಾವತಿ.

"ಏನು ಏನು ಬಹಳ ದೊಡ್ಡ ಕಾರ್ಯಕ್ರಮವಿದ್ದಂತಿದೆಯಲ್ಲಾ ?" ಎಂದು ಸದಾನಂದ್ ಕೇಳಿದ.

"ಹೂ. ವಿ ಆರ್ ಆಲ್ ಔಟ್ ಟು ಕಿಲ್" (ಕೊಲೆ ಮಾಡಲು ಹೊರಟಿದ್ದೇವೆ ನಾವೆಲ್ಲಾ) ಪ್ರಭಾವತಿ ಹೇಳಿದಳು.

"ನನ್ನನ್ನೂ ಸೇರಿಸಿಕೊಳ್ಳಿ."

"ಊಹೂ. ಇದು ಲೇಡೀಸ್ ಡೇ."-ಫ್ಲೋರಾ ಹೇಳಿದಳು.

"ಆದರೂ ನನ್ನನ್ನು ಸೇರಿಸಿಕೊಳ್ಳಿ"

"ಅದು ಹೇಗೆ ಸಾಧ್ಯ? ನೀವು ಹೆಂಗಸಲ್ಲ."-ಫ್ಲೋರಾ ನಗೆಮುಳ್ಳು ಕುಟುಕಿದಳು.

"ಆದರೆ ಹೆಂಗಸರ ಪ್ರೇಮಿ ಎಂದು!"-ಸದಾನಂದ ಪ್ರತ್ಯುತ್ತರ ಕೊಟ್ಟ.

"ಅವರ ಹತ್ತಿರ ಮಾತಿಗೆ ನಿಂತರೆ ನೀವಿಲ್ಲೇ ಇರಬೇಕಾಗುತ್ತೆ. ಬೇಗ ತಿಂಡಿ ಮುಗಿಸಿ"-ಎಂದಳು ಲೀಲಾ ಮೂವರಿಗೂ ಕಾಫಿ-ತಿಂಡಿ ತಂದಿಟ್ಟು. ತಾನು ಉಡುಪು ಬದಲಿಸಿಕೊಳ್ಳಲು ಒಳಗೆ ಹೋದಳು. ಹತ್ತು ನಿಮಿಷದಲ್ಲಿ ಲೀಲಾವತಿ ಸಿದ್ಧವಾಗಿ ಬಂದಳು. ತೆಳುನೀಲಿಯ ಅಂಚು ಇಲ್ಲದ ಜಾರ್ಜೆಟ್ ಸೀರೆ ಉಟ್ಟು, ಅಂಥದೇ ಕುಬಸ ತೊಟ್ಟಿದ್ದಳು.

"ಇದು ಬಹಳ ಸಾದಾ ಆಯಿತು." ಪ್ರಭಾವತಿ ತಕರಾರು ಮಾಡಿದಳು.

"ನಿಮ್ಮಿಬ್ಬರ ಸೌಂದರ್ಯ ಎದ್ದು ಕಾಣುವುದಕ್ಕೆ, ನನ್ನಂಥವಳೊಬ್ಬಳು ಇರಬೇಕಲ್ಲ, ಅದಕ್ಕೆ"-ಎಂದಳು ಲೀಲಾವತಿ.

ಇನ್ನೇನು ಹೊರಡುವುದು ಎನ್ನುವಾಗ ಪ್ರಭಾವತಿಗೆ ಫ್ಲೋರಾ ತನಗೆ ಕೊಟ್ಟ ಕಾಣಿಕೆಯ ನೆನಪಾಯಿತು. ಅದನ್ನು ಸದಾನಂದ್–ಲೀಲಾವತಿಯರಿಗೆ ತೋರಿಸಿ, ಅದನ್ನು ಕೊಡುವಾಗ ಫ್ಲೋರಾ ಕೊಟ್ಟ ಶುಭಾಶಯವನ್ನೂ ಹೇಳಿದಳು. ಸದಾನಂದ್ ಉಂಗುರವನ್ನು ನೋಡಿ ಮೆಚ್ಚಿ–

"ಇಂಥ ದಿನ ಇದನ್ನು ನಿನ್ನ ಗಂಡನೇ ಕೊಟ್ಟಿದ್ದರೆ ಎಷ್ಟು ಚನ್ನಾಗಿತ್ತು ಪ್ರಭಾ. ಆದರವನು ಆ ಭಾಗ್ಯ ಪಡೆಯಲಿಲ್ಲ. ವಿಷ್ ಯು ಬೆಸ್ಟ್ ಆಫ್ ದಿ ಲಕ್," ಎಂದ.

"ನಾನು ಕೊಟ್ಟ ಮಂಗಲಸೂತ್ರದ ಹಾಗಾಗದಿರಲಿ ಇದು ಪ್ರಭಾ–ನಾನೂ ಹರಸುತ್ತೇನೆ–ನಿನ್ನ ಜೀವನದಲ್ಲಿ ಗೆಲುವಾಗಲಿ," ಎಂದಳು ಲೀಲಾವತಿ.

"ಇವತ್ತು. ಇವತ್ತು ನನ್ನ ಬಿಡುಗಡೆಯ ದಿನ. ಈ ದಿನವೂ ನೀನದನ್ನು ನನಗೆ ನೆನಪಿಸಬೇಕೇ?" ಪ್ರಭಾವತಿ ಮುಖ ಚಿಕ್ಕದು ಮಾಡಿಕೊಂಡು ಕೇಳಿದಳು.

"ನನ್ನ ಹೃದಯ ನೀ ಬಲ್ಲೆ ಪ್ರಭಾ. ಖಿನ್ನಳಾಗಬೇಡ. ಆದರೆ ನಿನ್ನದು ಬಂಧನವೋ, ಬಿಡುಗಡೆಯೋ ನಾನರಿಯೆ. ಏನಾದರಾಗಲಿ, ನೀನು ನಗುತ್ತಾ ಇದ್ದರೆ ಸಾಕು."

"ಹಾಗಾದರೆ ನಿನ್ನದು ಬಂಧನವೋ, ಬಿಡುಗಡೆಯೋ? ನಿನ್ನ ಗಂಡ ಎದುರಿಗಿದ್ದಾನೆಂದು ಸುಳ್ಳು ಹೇಳಬೇಡ." ಸವಾಲು ಹಾಕಿದಂತೆ ಕೇಳಿದಳು ಫ್ಲೋರಾ.

"ಅವರದು ನನಗೇನೂ ಹೆದರಿಕೆಯಿಲ್ಲ. ನಿಜ ಹೇಳಲಿಕ್ಕೆ ಅವರದೇನು ಹೆದರಿಕೆ. ನನ್ನದು ಬಂಧನವೂ ಅಲ್ಲ, ಬಿಡುಗಡೆಯೂ ಅಲ್ಲ–ಸಂಸಾರ."

"ಅಂತೂ ಅವಳು ನಿಮ್ಮೆದುರಿಗೇ ನನ್ನ ಹೆದರಿಕೆ ಇಲ್ಲ ಅಂತ ಹೇಳುವಂತೆ ಮಾಡಿ, ನನಗೆ ಅಪಮಾನ ಮಾಡಿಸಿದಿ ಫ್ಲೋರಾ"–ಸದಾನಂದ್ ದೂಷಿಸುವಂತೆ ನೋಡಿದ ಫ್ಲೋರಾಳನ್ನು.

"ಲೀಲಾ ಹಾಗೆ ಹೇಳಿದ್ದು ಅಪಮಾನವೇ ಸದಾನಂದ್?" ಪ್ರಭಾವತಿ ಕೆಣಕಿ ಕೇಳಿದಳು.

"ಅವಳ ಪ್ರೀತಿಗೆ ಕುರುಡಾದ ನಾನು ಏನೂ ಹೇಳಲಾರೆ. ನಾನಾಗಲೇ ಹೇಳಲಿಲ್ಲವೇ. ನೋಡಲಿಕ್ಕೆ ಇಷ್ಟು ಹಸುಗೂಸಿನಂತೆ ಕಾಣುವ ಈ ಲೀಲಾ,

ಈ ಮಳ್ಳ ಹುಡುಗಿ ನಿಜಕ್ಕೂ ಭಯಂಕರ ಮಾಟಗಾತಿ. ತಾನು ಮಾಡಿದ್ದ ನ್ನೆಲ್ಲಾ ನಾನು ಒಪ್ಪುವಂತೆ, ನಾನೇ ಅದನ್ನು ಬಯಸುವಂತೆ ಮಾಡುತ್ತಾಳೆ. ಬಿಡುಗಡೆ! ಇವಳ ಕೈಗೆ ಸಿಕ್ಕಿ-ಬಂಧನವೇ ಸ್ವರ್ಗ ಅನಿಸುತ್ತಾಳೆ" - ಎಂದ ಸದಾನಂದ, ಹೆಂಡತಿಯನ್ನು ಪ್ರೀತಿ ತುಂಬಿದ ಕಣ್ಣುಗಳಿಂದ ನೋಡುತ್ತಾ.

ಲೀಲಾವತಿ ಗಂಡನ ಕಡೆ ಕರಗಿಸುವ ನೋಟ ಹಾಯಿಸಿ ಮೃದುವಾಗಿ ನಕ್ಕಳು.

" ನಡೆಯಿರಿನ್ನು ಹೋಗೋಣ-ಈ ಗಂಡಸರಿಂದ ದೂರವಾಗಿ ಎಲ್ಲಾದರೂ ಅಷ್ಟು ಹೊತ್ತು ಹಾಯಾಗಿ ಕಳೆದು ಬರೋಣ," ಎಂದು ಲೀಲಾವತಿ ಫ್ಲೋರಾ ಪ್ರಭಾವತಿಯರನ್ನು ತನ್ನೆರಡೂ ತೋಳುಗಳಲ್ಲಿ ತಬ್ಬಿ ಎಳೆದುಕೊಂಡು ಹೊರಟಳು. ಅವಳ ಕಣ್ಣುಗಳಲ್ಲಿನ್ನೂ ನಗೆ ಲಾಸ್ಯವಾಡುತ್ತಿತ್ತು; ಫ್ಲೋರಾ ಪ್ರಭಾವತಿಯರ ಕಣ್ಣುಗಳಲ್ಲಿ ಏನೋ ಪ್ರೀತಿ, ಏನೋ ನೋವು ತುಂಬಿತ್ತು.

## ೩೧

ಫ್ಲೋರಾ-ಲೀಲಾವತಿ.

ಎರಡು ಪ್ರೀತಿಯ ದಡಗಳ ನಡುವೆ ಹರಿದಿತ್ತು ಪ್ರಭಾವತಿಯ ಜೀವನದ ಹೊಳೆ.

ಅಷ್ಟು ದಿನ ತಿಳಿಯಾಗಿ ಬಿಸಿಲಿನಲ್ಲಿ ಹೊಳೆಯುತ್ತಾ ದಡಗಳೊಂದಿಗೆ ಚಿನ್ನಾಟವಾಡುತ್ತಾ, ತೆರೆಯ ಗೆಜ್ಜೆಗಳನ್ನಲುಗಿಸಿ ಕುಲುಕುಲು ನಗುತ್ತಾ ಹರಿಯುತ್ತಿದ್ದ ಝರಿ, ದಿನಗಳೆದಂತೆ ಆಳವಾಗಿ ಗಂಭೀರವಾಗಿ, ತಿಳಿಯಾದ ನೀರು ಮಂಕುಗಪ್ಪಾಗಿ, ಹರಿಯಲೋ ಬೇಡವೋ ಎಂದು ಬೇಸರದಿಂದ ತೆವಳಲಾರಂಭಿಸಿತು.

ದಡಗಳೇನೊ ಹಸುರಾಗಿಯೇ ಇದ್ದವು. ಮೃದುವಾದ ಹಸಿರು ಹಾಸಿನಲ್ಲಿ ಹತ್ತಾರು ಬಣ್ಣದ ನಕ್ಷತ್ರದಂಥ ಹೊಳೆಯುವ ಹೂವುಗಳರಳಿ, ಚಿಟ್ಟೆಗಳಾಡಿ ಚಿತ್ತಾಕರ್ಷಕವಾಗಿಯೇ ಇದ್ದವು. ನಡುವೆ ಹರಿವ ಹೊಳೆಯನ್ನು ತಬ್ಬಿದ್ದವು-ಎಂದಿನಂತೇ.

ಆದರೆ ನಡುವೆ ಹರಿವ ಝರಿಯ ನೀರು ಮಾತ್ರ ಮಂದವಾಗುತ್ತಿದೆ. ನೀರೇನೋ ಹರಿಯುತ್ತಿದೆ-ಆದರೆ ಮೊದಲಿನ ಉತ್ಸಾಹವಿಲ್ಲ, ಉಲ್ಲಾಸವಿಲ್ಲ; ದಡಗಳನ್ನು ತೆರೆಗಳಿಂದ ಅಪ್ಪಳಿಸುವುದಿಲ್ಲ-ಮೃದುವಾಗಿ ಸೋಕಿ ಮುಂದು

ವರಿಯುತ್ತದೆ. ತೆರೆಯ ಗೆಜ್ಜೆಯಲುಗಿಸಿ ಕುಲುಕುಲು ನಗುವುದಿಲ್ಲ, ಮಂಕು ಧ್ವನಿಯಲ್ಲಿ ಸುಯ್ಯುತ್ತದೆ; ಯಾವುದೋ ಜಡತೆ ಕವಿದು, ಬಿಸಿಲಿನಲ್ಲೂ ಹೊಳೆಯದೆ ನೀರು ಮಂಕಾಗುತ್ತಿದೆ.

ಫ್ಲೋರಾ–ಲೀಲಾವತಿ.

ಇಬ್ಬರ ನಡುವೆ ಸಾಗುತ್ತಿದೆ ಪ್ರಭಾವತಿಯ ಜೀವನ ಪ್ರವಾಹ.

ಅವಳು ಕೆಲಸಕ್ಕೆ ಸೇರಿ ಆರೇ ತಿಂಗಳುಗಳಾಗಿದ್ದರೂ, ಅವಳಿಗೆ ಅರವತ್ತು ವರ್ಷಗಳಿಂದ ತಾನಿದೇ ಉದ್ಯೋಗದಲ್ಲಿದ್ದಂತೆ ತೋರುತ್ತದೆ. ಇಪ್ಪತ್ತುನಾಲ್ಕು ವರ್ಷದ ಯೌವ್ವನದ ಅವಳ ಮೈಯಲ್ಲಿ ಮುಪ್ಪಡರಿದ ಮುದುಕಿಯೊಬ್ಬಳು ಮುಲುಗುತ್ತಿದ್ದಾಳೆ.

ಒಂದು ಕಾಲಕ್ಕೆ ಯಾವ ಯಾವುವು ಅವಳಿಗೆ ಸಂತೋಷದಾಯಕ ವಾಗಿತ್ತೋ– ಅವೆಲ್ಲವೂ ಈಗ ಏನೋ ಮಂಕು ಕಟ್ಟಿಹೋದಂತೆ ತೋರುತ್ತದೆ.

ದಿನವೂ ಆಫೀಸಿಗೆ ಹೋಗಿ ಬರುತ್ತಾಳೆ ಪ್ರಭಾವತಿ.

ಎಂಟು ಗಂಟೆಯ ವೇಳೆಗೆ ಎದ್ದು ಫ್ಲೋರಾ ಜೊತೆಗೆ ಸ್ನಾನ–ತಿಂಡಿ ಮುಗಿಸಿ, ಸರಿಯಾಗಿ ಒಂಭತ್ತು ಮೂವತ್ತಿನ ರೈಲಿಗೆ ಬರುತ್ತಾಳೆ ದಾದರ್ ನಿಲ್ದಾಣಕ್ಕೆ. ಅಲ್ಲಿಂದ ಹತ್ತು ಹದಿನೈದು ನಿಮಿಷಗಳ ಓಟ ಚರ್ಚ್‌ಗೇಟ್ ಸ್ಟೇಷನ್ನಿಗೆ–ವಿದ್ಯುತ್ ರೈಲಿನಲ್ಲಿ. ಅಲ್ಲಿಂದ ಹದಿನೈದು ನಿಮಿಷಗಳ ನಡಿಗೆ ಆಫೀಸಿಗೆ.

ಲಿಫ್ಟಿನಲ್ಲಿ ನಿಂತು ಆಫೀಸು ಸೇರಿ ತನ್ನ ಸ್ಥಾನದಲ್ಲಿ ಕುಳಿತುಕೊಳ್ಳುವಾಗ ಗಡಿಯಾರ ನೋಡುತ್ತಾಳೆ–ಹತ್ತು ಗಂಟೆ.

ಗಡಿಯಾರ ಹೆಚ್ಚುಕಡಮೆಯಾಗಬಹುದು, ಪ್ರಭಾವತಿ ತಡವಾಗುವುದಿಲ್ಲ.

ಎಷ್ಟೋ ಜನ ಅವಳನ್ನು ನೋಡಿ ತಮ್ಮ ಕೈ ಗಡಿಯಾರದ ಹೊತ್ತು ಸರಿ ಮಾಡಿಕೊಳ್ಳುತ್ತಾರೆ.

ಟೈಪ್ ಆಗಬೇಕಾದ ಕಾಗದಗಳು, ಫೈಲ್ ಮಾಡಬೇಕಾದ ಉತ್ತರ ಪ್ರತ್ಯುತ್ತರಗಳನ್ನು ಟ್ರೇಯಲ್ಲಿ ತಂದು ಅವಳ ಮೇಜಿನ ಮೇಲಿಡುತ್ತಾನೆ ಆಫೀಸ್ ಬಾಯ್.

ಟೈಪ್‌ರೈಟರಿನ ಹೊದಿಕೆ ತೆಗೆದು, ಧೂಳು ಊದಿ ಕೆಲಸಕ್ಕೆ ಸಿದ್ಧ ವಾಗುತ್ತಾಳೆ–ಡ್ರಾದೊಳಗಿದ್ದ ರಬ್ಬರ್, ಪೆನ್ಸಿಲ್, ಕ್ಲಿಪ್ಸ್, ಗುಂಡುಸೂಜಿಯು

ಬಟ್ಟೆಲು, ಕಾರ್ಬನ್ ಕಾಗದಗಳ ಫೈಲು, ಎಲ್ಲವನ್ನೂ ತೆಗೆದು, ಅವು ಅವುಗಳ ಸ್ಥಾನದಲ್ಲಿಟ್ಟು ಕೆಲಸ ಆರಂಭಿಸುತ್ತಾಳೆ.

ಕೈ ಬೆರಳುಗಳು ಟೈಪ್‌ರೈಟರಿನ ಕೀ ಬೋರ್ಡಿನ ಮೇಲೆ ನರ್ತಿಸ ಲಾರಂಭಿಸುತ್ತವೆ.

ನಡುವೆ ಒಮ್ಮೊಮ್ಮೆ ಮ್ಯಾನೇಜರ ಕೋಣೆಯ ಗಂಟೆ ಕರೆದಾಗ ಆಫೀಸ್ ಬಾಯ್ ಇವಳನ್ನು ಕರೆಯುತ್ತಾನೆ. ಡಿಕ್ಟೇರ್ಷ ನೋಟ್‌ಬುಕ್, ಪೆನ್ಸಿಲ್ಲು ಹಿಡಿದು ಹೋಗುತ್ತಾಳೆ.

"ಪ್ಲೀಸ್ ಟೇಕ್ ದಿಸ್ ಲೆಟರ್...." (ಈ ಕಾಗದ ಬರೆದುಕೊಳ್ಳಿ)—

ಡಿಕ್ಟೇರ್ಷ ನೋಟ್‌ಬುಕ್ ತೆಗೆದು, ಪೆನ್ಸಿಲ್ ಅಣಿಯಾಗಿ ಹಿಡಿದು ಕಾಯುತ್ತಾಳೆ.

"ಟು–ಮೆಸರ್ಸ್....ಡಿಯರ್ ಸರ್ಸ್...."

....ದಪ್ಪ, ತೆಳುವು, ಚುಕ್ಕೆ, ಗೀಟು, ಬಾಗು, ಪಿಟ್‌ಮ್ಯಾನ್ಸ್ ಷಾರ್ಟ್ ಹ್ಯಾಂಡ್....

"ಯುವರ್ಸ್ ಟ್ರೂಲಿ...."

"ಥ್ಯಾಂಕ್ಸ್"

ಮತ್ತೆ ಬರುತ್ತಾಳೆ ಟೈಪ್‌ರೈಟರಿನ ಇದುರಿಗೆ. ಟೈಪ್‌ರೈಟರಿನ ಬಾಯಿಗೆ ಕಾಗದದ ಹಾಳೆ ಹಾಕುತ್ತಾಳೆ.

ಟೈಪ್‌ರೈಟರಿನ ಕೀ ಬೋರ್ಡಿನ ಮೇಲೆ ಕೈಬೆರಳುಗಳ ನರ್ತನ.

ಡೂಪ್ಲಿಕೇಟ್....ಟ್ರಿಪ್ಲಿಕೇಟ್....ಕಾಗದ....ಕವರು....

'ಟಕ ಟಕ ಟಕ ಟಕ್ಕ....ಕಟಕಟಕಟ ಟಕ್ಕ್....ಟ್ರಿನ್....'

ಕೀ ಬೋರ್ಡಿನ ಮೇಲೆ ಕೈ ಬೆರಳುಗಳ ನರ್ತನ. ಕೀಲುಗೊಂಬೆಗಳಂತೆ ಎದ್ದೆದ್ದು ಕಾಗದದ ಮೇಲೆ ಅಕ್ಷರ ಒತ್ತಿ ಮಲಗುತ್ತವೆ 'ಕೀ'ಗಳು.

"ಬಾಯ್? ಈ ಕಾಗದ ಒಯ್ದು ಸಾಹೇಬರ ಸಹಿ ಹಾಕಿಸಿ ಡಿಸ್ಪ್ಯಾಚಿಂಗ್ ಸೆಕ್ಷನ್ನಿಗೆ ಕೊಡು."

ಮತ್ತೆ ಕೀ ಬೋರ್ಡಿನ ಮೇಲೆ ಕೈ ಬೆರಳುಗಳ ನರ್ತನ....

"ಟಕ ಟಕ ಟಕ ಟಕ್ಕ....ಕಟಕಟ ಕಟ ಕಟ್"—ಎದ್ದು ಬಾಗಿ ಕಾಗದಕ್ಕೆ ಮುತ್ತಿಟ್ಟು ಮಲಗುವ ಕೀಗಳು.

"ಟಿಕ್–ಟಾಕ್....ಟಿಕ್–ಟಾಕ್"

ಕಾಗದದ ಸದ್ದು, ಪಿಸುಮಾತಿನ ಸದ್ದು, ಸದ್ದಾಗದಂತೆ ನಡೆವ ಹೆಜ್ಜೆಯ ಸದ್ದು, ವಿದ್ಯುತ್ ಬೀಸಣಿಗೆಯ 'ಗೊರ್ರೋ-ಗೊಯ್ಯೆಂ'ಬ ಮೌನವನ್ನೇ ಕಡೆದು ಮೌನವನ್ನೇ ಹೆಪ್ಪುಗಟ್ಟಿಸುವ ಏಕನಾದ, ಕಾಲಿಂಗ್ ಬೆಲ್ಲಿನ ಸದ್ದು....

ಇವೆಲ್ಲ ಸದ್ದಲ್ಲದ ಸದ್ದುಗಳ ನಡುವೆ-

"ಟಿಕ್ ಟಾಕ್, ಟಿಕ್ ಟಾಕ್" ಗಡಿಯಾರದ ಕಾಲದ ಲೆಕ್ಕ. ೧ ಗಂಟೆ-

ರಿಟೈರಿಂಗ್ ರೂಮಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹುಡುಗ ಕ್ಯಾರಿಯರ್‌ನಲ್ಲಿ ಊಟ ತಂದು ಕಾದಿರುತ್ತಾನೆ. ಮಂಕಾದ ಹಿತ್ತಾಳೆಯ ಬಟ್ಟಲುಗಳಲ್ಲಿ ಅನ್ನ-ಹುಳಿ-ಸಾರು-ಪಲ್ಯ-ಮಜ್ಜಿಗೆ. ಪ್ಲೇಟು-ಚಮಚ-

ಇವಳು ಊಟ ಮುಗಿಸುವುದನ್ನೇ ಕಾಯುತ್ತಿರುತ್ತಾನೆ ದಕ್ಷಿಣ ಕನ್ನಡ ಜಿಲ್ಲೆಯ ಹೋಟಲು ಮಾಣಿ-ಕ್ಯಾರಿಯರ್ ಕೊಂಡೊಯ್ಯಲು.

ಕುಳಿತ ಕುರ್ಚಿಗೆ ಹಾಗೇ ಬೆನ್ನೊರಗಿಸುತ್ತಾಳೆ-ಸ್ವಲ್ಪ ಹೊತ್ತಿನಲ್ಲಿ ಆಫೀಸ್ ಬಾಯ್ ಕಾಫಿ ತಂದು ಕೊಡುತ್ತಾನೆ. ಕ್ಲೋಕ್ ರೂಂನಲ್ಲಿ ಮುಖ ತೊಳೆದು, ಹ್ಯಾಂಡ್‌ಬ್ಯಾಗ್‌ನಲ್ಲಿದ್ದ ಕೂಂಬ್‌ನಿಂದ ಕೂದಲು ಸರಿ ಮಾಡಿಕೊಂಡು ಹೊರಬಂದು, ಕಾಫಿ ಕುಡಿದು, ಕೆಲಸದ ಮೇಜಿಗೆ ಹಿಂದಿರುಗುತ್ತಾಳೆ.

ಎರಡು ಗಂಟೆ.

ಮತ್ತೆ ಅದೇ.

ಕಾಗದ, ಕಾರ್ಬನ್, ಕವರು, ಟೈಪ್‌ರೈಟರು....

"ಟಿಕ್-ಟಾಕ್, ಟಿಕ್-ಟಾಕ್"

ಕಾಲದ ಕಾಲಿಗೆ ಕುಂಟುತನ ಬಡಿದಂತೆ ಹೊತ್ತು ತೆವಳುತ್ತದೆ-ಗಡಿಯಾರದ ಮುಳ್ಳು ಒಂದನ್ನೊಂದು ಬೆನ್ನಟ್ಟಿ ನಿಧಾನವಾಗಿ ಚಲಿಸುತ್ತವೆ.

...............

ಐದು ಗಂಟೆ.

ಎಲ್ಲವನ್ನೂ ಸರಿಯಾಗಿ ತೆಗೆದಿಟ್ಟು, ಟೈಪ್‌ರೈಟರಿನ ಹೊದಿಕೆ ಹೊದಿಸಿ ಹೊರಡುತ್ತಾಳೆ. ಆಫೀಸಿನ ಬಾಯ್ 'ಗುಡ್ ಈವನಿಂಗ್' ಹೇಳುತ್ತಾನೆ-

ಗರ್‍ರೆಂದು ಮೇಲಂತಸ್ತಿನಿಂದ ಇಳಿದು ಬರುತ್ತದೆ ಲಿಫ್ಟ್.

ಮಂಕಾಗಿ ಸಣ್ಣ ವಿದ್ಯುದ್ದೀಪ ಹೊಳೆವ ಕತ್ತಲ ಗೂಡಿನಲ್ಲಿ ನಿಲ್ಲುತ್ತಾಳೆ. ಬಾಗಿಲು ಹಾಕುತ್ತಾನೆ ಲಿಫ್ಟ್ ಬಾಯ್.

ಕೆಳಗೆ ಧುಮುಕುತ್ತದೆ ಲಿಫ್ಟ್-ಮತ್ತೆ ಬಾಗಿಲು ತೆಗೆಯುತ್ತಾನೆ ಲಿಫ್ಟ್ ಬಾಯ್-ನಲವತ್ತು ವರ್ಷದ ಮುದುಕ.

ಆ ದಿನದ ಆಫೀಸು ಮುಗಿಯಿತು-ಎಂಟು ಗಂಟೆಗಳ ದಿನ.

ದಿನಕ್ಕೆ ಎಂಟು ಗಂಟೆಗಳ, ವಾರಕ್ಕೆ ಆರು ದಿನದ, ಲೆಕ್ಕಕ್ಕೆ ಮೂವತ್ತು ದಿನದ ತಿಂಗಳು–ಕ್ಯಾಲೆಂಡರ್ ಲೆಕ್ಕ ಬರೆಯುತ್ತದೆ.

ದಿನಕ್ಕೆ ಎಂಟು ಗಂಟೆಗಳ. ವಾರಕ್ಕೆ ಆರು ದಿನದ, ಲೆಕ್ಕಕ್ಕೆ ಮೂವತ್ತು ದಿನಗಳ ತಿಂಗಳು–ನೂರು ರೂಪಾಯಿ ಸಂಬಳ.

೧೦೦ : ೭೫ ಪ್ಲಸ್ ೨೫=೧೦೦.

೭೫—೨—೧೫೦ ಗ್ರೇಡಿನ ಕೆಲಸ: ಒಂದು ವರ್ಷವಾದ ನಂತರ ಬಡತಿ: ಈಗ–೧೦೦ : ೭೫ ಪ್ಲಸ್ ೨೫=೧೦೦ ; ರೂ. ಆ. ಪೈ.

ದಿನವೂ ಆಫೀಸಿಗೆ ಹೋಗಿ ಬರುತ್ತಾಳೆ ಪ್ರಭಾವತಿ.

ಹಸಿರಾದ ಎರಡು ದಡಗಳ ನಡುವೆ, ಹಸಿರಾಗಿ, ಮೃದುವಾಗಿ, ಬಣ್ಣವಾಗಿ, ಹೂವಾಗಿ, ಪರಿಮಳವಾಗಿ ಹೊಳೆವ ಹಸಿರು ದಡಗಳ ನಡುವೆ, ದಿನದಿನಕ್ಕೆ ಜಡವಾಗಿ, ಕಪ್ಪಾಗಿ, ಮಂಕಾಗಿ ತೆವಳುತ್ತಿದೆ ಜೀವಝರಿ.

ಬೊಂಬಾಯಿಯಲ್ಲಿ ಪ್ರಭಾವತಿಯ ಜೀವನ.

ಫ್ಲೋರಾ – ಲೀಲಾವತಿ – ಇವರ ನಡುವೆ ಪ್ರಭಾವತಿ.

## ೩೨

"ಏಕೋ ಬರಬರುತ್ತಾ ತುಂಬಾ ಮಂಕಾಗಿಬಿಟ್ಟೆ. ಬೊಂಬಾಯಿನ ಜ್ವರ ನಿನಗೂ ಗಂಟುಬಿತ್ತೆ ?" – ಫ್ಲೋರಾ ಕೇಳುತ್ತಾಳೆ.

"ಏಕೋ ಬೇಸರ ಫ್ಲೋರಾ, ಏಕೋ ಬೇಸರ ಫ್ಲೋರಾ, ಏಕೋ ಬೇಸರ ಫ್ಲೋರಾ" ಬಾರಿಬಾರಿಗೂ ಅದೇ ಉತ್ತರ ಪ್ರಭಾವತಿಯದು.

"ಹೀಗಾದರೆ ಚೆನ್ನಾಯಿತು. ನಿನಗೇನಾಗಿದೆ ಪ್ರಭಾ. ಸುಖವಾಗಿರು. ನಗುನಗುತ್ತಾ ಇರು."

"ನಗುನಗುತ್ತಾ ಇರಬೇಕೆಂದು ನನಗೂ ಆಸೆ ಫ್ಲೋರಾ. ಆದರೆ ಹೇಗಿರುವುದು ?"

"ಜೀವನದ ವಧು ಎಂದು ಹೇಳಲಿಲ್ಲವೆ. ಹೋಗು, ಜೀವನದೊಂದಿಗೆ ಆಲಂಗಿಸು. ಜೀವನದ ಸವಿಯನ್ನು ಹೀರು. ನೀನು ಹೀಗೆ ಮಂಕಾಗಿದ್ದರೆ

ನನ್ನ ಕರುಳು ಕಿವುಚಿದಂತಾಗುತ್ತದೆ."—ಬೇಸರದಿಂದ ಸೋಫಾದ ಮೇಲೆ ವ್ಯೈಚಾಚಿದ ಪ್ರಭಾವತಿಯ ನೆತ್ತಿಯನ್ನು ನೇವರಿಸಿ, ಕಕ್ಕುಲತೆಯಿಂದ ಹೇಳುತ್ತಾಳೆ ಫ್ಲೋರಾ.

"ನಾನೇನು ಮಾಡಲಿ ಫ್ಲೋರಾ–ಏನು ಮಾಡಲೂ ಏನೋ ಬೇಸರ, ಏನೋ ಚಿಂತೆ."

"ಏನು ಚಿಂತೆ ?"

"ಏನೋ ಚಿಂತೆ. ಅರ್ಥವಾಗದ, ಬಗೆಹರಿಯದ ಚಿಂತೆ."

"ಹಿಂದಿನದನ್ನೇನಾದರೂ ಯೋಚಿಸುತ್ತೀಯೇನು. ಗಾಲಿಬ್ ಅಂತ ಉರ್ದು ಕವಿ ಒಂದು ಪದ್ಯದಲ್ಲಿ ಹೇಳಿದಾನೆ—"

"ಏನು ?"

"'ಖುಫಸ್ ಮೇ ರೂದಾದ ಚಮನ್ ಕಹತೇ ನ ಡರ್ನ ಹಂದಂ
ಗಿರೀಥೀ ಜಿಸ್ಪೆ ಕಲ್ ಬಿಜಲಿ ಓ ಮೇರಾ ಆಶಿಯಾ ಕ್ಯಾಂ'"

"ಏನು ಹಾಗಂದರೆ, ನನಗೆ ಉರ್ದು ಬರುವುದಿಲ್ಲ."

"ಎರಡು ಬುಲ್‌ಬುಲ್ ಹಕ್ಕಿಗಳಿದ್ದುವಂತೆ–ಜೋಡಿ ಹಕ್ಕಿಗಳು, ಗಂಡು ಹೆಣ್ಣು. ಒಮ್ಮೆ ಗಂಡು ಪಂಜರಕ್ಕೆ ಸಿಕ್ಕಿತು. ಹೆಣ್ಣೊಂದೇ ಹೊರಗುಳಿಯಿತು– ಮರಿಗಳ ಜೊತೆಗೆ. ಒಂದು ರಾತ್ರಿ ಭಯಂಕರ ಮಳೆ, ಬಿರುಗಾಳಿ, ಸಿಡಿಲು. ಸಿಡಿಲು ಬಡಿದು ಮರಿ ಸತ್ತುಹೋದವು. ಹೆಣ್ಣು ಹಕ್ಕಿ ಪಂಜರಬದ್ಧ ಗಂಡಿಗೆ ಈ ಸುದ್ದಿ ಹೇಳಲು ಬಂದು, ಹೇಳಲಾಗದೆ ಚಡಪಡಿಸುತ್ತಿತ್ತಂತೆ. ಆಗ ಗಂಡು ಅದರ ಯಾತನೆಯನ್ನು ಕಂಡು, ವಿಷಯ ಅರ್ಥಮಾಡಿಕೊಂಡು ಹೆಣ್ಣಿಗೆ ಹೇಳಿತಂತೆ—'ಹೆದರಬೇಡ ಹೇಳು. ನಿನ್ನೆ ಸಿಡಲಿಗೆ ಸತ್ತವರು ನನ್ನ ಮಮತೆಯವರು ಹೇಗಾದಾರು ?' ಅಂತ."

"ಅದಕ್ಕೂ ನನಗೂ ಏನು ಸಂಬಂಧ ಫ್ಲೋರಾ...."

"ಸೆರೆಯಾಳಿಗೆ ಹೊರಗಿನವರು ಏನಾಗಬೇಕು, ಏನಾದರೇನು ಪ್ರಭಾ. 'ಗಿರೀಥೀ ಜಿಸ್ಪೆ ಕಲ್ ಬಿಜಲಿ ಓ ಮೇರಾ ಆಶಿಯಾ ಕ್ಯಾಂ.' ಅಷ್ಟೆ—"

"ಹಾಗಾದರೆ ನಾನೂ ಪಂಜರಬದ್ಧ ಪಕ್ಷಿಯೇ ಫ್ಲೋರಾ ?"

"ಮತ್ತೇನೆಂದುಕೊಂಡೆ, ಈ ಬಿಡುಗಡೆ. ಇದು ಬಿಡುಗಡೆಯಾಗಲು ಒಂದೇ ದಾರಿ ಪ್ರಭಾ–ಸುಖವಾಗಿರುವುದು. ಗೋ ಅಹೆಡ್. ಸು ಖ ಪ ಟ್ಟಾ ಗ –

ಬಂಧನವೂ ಬಿಡುಗಡೆ, ಸುಖ ಪಡದಿದ್ದಾಗ ಬಿಡುಗಡೆಯೂ ಬಂಧನ."
—ಪ್ರಭಾವತಿಯ ಬೆನ್ನು ತಟ್ಟಿ ಹೇಳುವಳು ಫ್ಲೋರಾ—

"ನಿನ್ನ ಬಾಳು ಯಾತನಾಮಯವಾದರೆ, ಅದರಿಂದ ನಿನಗೂ ಸುಖವಿಲ್ಲ, ಇತರರಿಗೂ ಸುಖವಿಲ್ಲ. ನಿನ್ನಿಂದ ನಾವು ಸುಖವಾಗಿರಬೇಕೆಂದರೆ ನೀನು ಸುಖವಾಗಿರು."

'ನಿನ್ನಿಂದ ನಾವು ಸುಖವಾಗಿರಬೇಕೆಂದರೆ ನೀನು ಸುಖವಾಗಿರು.'

ಸುಖವಾಗಿರು!

ತಾನೀಗ ಸುಖವಾಗಿಲ್ಲವೇ, ಏನು ಕಡಿಮೆ ಆಗಿದೆ ತನ್ನ ಸುಖಕ್ಕೆ?

ಊಟ-ನಿದ್ರೆ, ಬಟ್ಟೆ-ವಸ್ತ್ರ, ಗೆಳತಿಯರು, ತಿರುಗಾಟ, ಹೋಟಲು, ಸಿನಿಮಾ-ಎಲ್ಲಾ ಇವೆ. ತಾನೇ ದುಡಿಯುತ್ತಾಳೆ. ಯಾರ ಹಂಗೂ ಇಲ್ಲದೆ ಯಾರ ಊಳಿಗವೂ ಇಲ್ಲದೆ ಬೇಕಾದ ಹಾಗಿದ್ದಾಳೆ.

ಏನು ಕಡಿಮೆ ಆಗಿದೆ ತನ್ನ ಸುಖಕ್ಕೆ?

"ನೀನು ನಗುನಗುತ್ತಾ ಇರು" ಫ್ಲೋರಾ ಹೇಳುವುದೂ ಇದೇ, ಇದೇ ಲೀಲಾವತಿಯು ಹೇಳುವುದೂ-"ನೀನು ನಗುನಗುತ್ತಾ ಇರು."

ಹರಿದೊಗೆದ ಮಂಗಳಸೂತ್ರ!

ಲೀಲಾವತಿಯಂತೆ ಇರುವುದಾಗಲಿಲ್ಲ ಪ್ರಭಾವತಿಗೆ. ಕಂಠಕ್ಕೆ ಬೆಂಕಿಯ ನೇಣಿನಂತೆ ಬಿಗಿದ ಮಂಗಲಸೂತ್ರವನ್ನು ಕಿತ್ತು ಒಗೆದಿದ್ದಳು.

ಅದನ್ನು ಕಾಪಾಡಿಕೊಳ್ಳಲು ಎಷ್ಟು ಕಷ್ಟಪಟ್ಟಿದ್ದಳು; ಎಷ್ಟು ಕಂಬನಿ, ಕಾತರ-ಎಲ್ಲಾ ವ್ಯರ್ಥ.

'ಲೀಲಾ, ನೀನು ಕೊಟ್ಟ ಮಂಗಲಸೂತ್ರವನ್ನು ರಕ್ಷಿಸುವ ಜವಾಬ್ದಾರಿ ಮುಗಿಯಿತು. ಮತ್ತೆ ನನ್ನಂಥವರಿಗೆ ಕೊಡಬೇಡ.'

ಹರಿದೊಗೆದ ಮಂಗಲಸೂತ್ರ!

................

"ಮಂಗಲಸೂತ್ರವನ್ನು ಕಾಪಾಡಿಕೊಳ್ಳುವುದಾಗಲಿಲ್ಲ, ಈ ಉಂಗುರವನ್ನಾದರೂ ಕಾಪಾಡಿಕೋ. ಇದು ಗೆಲುವಿನ ಉಂಗುರ."

ಫ್ಲೋರಾ ಹಾಗೆಂದು ಹೇಳಿದ್ದಳು.

'ಕಂಬನಿಗರೆಯುವುದು ಸುಲಭ, ಸುಖಪಡುವುದು ಸಾಹಸ.'

ಲೀಲಾವತಿಯ ಹಾಗಂತೂ ಇರುವುದಾಗಲಿಲ್ಲ; ಫ್ಲೋರಾ ಹೇಳಿದಂತಾದರೂ ಇರಬಾರದೇಕೆ?

................

ಕಷ್ಟ ಸಹಿಸುವುದು ತನ್ನಿಂದ ಆಗಲಿಲ್ಲ, ಸುಖದ ಸಾಹಸವೂ ತನ್ನಿಂದ ಆಗದೇ?

? ? ? ? ?

! ! ! ! !

................

"ಇವೊತ್ತು ನಾನೊಂದು ಪಾರ್ಟಿಗೆ ಹೋಗುವುದಿದೆ ಬಾ ಪ್ರಭಾ. ಅಲ್ಲಿ ಬೇಸರದ ಗೋರಿ ಕಟ್ಟೋಣ."—ಶನಿವಾರದ ಪಾರ್ಟಿಗೆ ಹೋಗಲು ಅಲಂಕೃತಳಾದ ಫ್ಲೋರಾ, ಪ್ರಭಾವತಿಯನ್ನು ಕರೆದಳು.

"ಇವೊತ್ತು ಬೇಡ. ಇನ್ನೊಂದು ದಿನ ಬರುತ್ತೇನೆ."

"ಖಂಡಿತವಾಗಿ?"

"ಖಂಡಿತವಾಗಿಯೂ" ಎಂದಳು ಪ್ರಭಾವತಿ. ಆದರೆ ಒಳಗಿನ್ನೂ ಹೊಯ್ದಾಟ.

? . ? . ? ಹೋಗಬಹುದೇ? ದೇ ದೇ ದೇ? ಹೋಗಬಹುದೇ?

ಫ್ಲೋರಾಳನ್ನು ಪಾರ್ಟಿಗೆ ಕಳುಹಿಸಿಕೊಟ್ಟು ಒಂಟಿಯಾಗಿ ಕೋಣೆಯಲ್ಲಿರಲಾರದೆ, ಬೀಚಿಗೆ ಬಂದು ಕುಳಿತಳು ಪ್ರಭಾವತಿ. ಅವಳ ಮಿದುಳಿನಲ್ಲಿನ್ನೂ ಫ್ಲೋರಾ ಸವಾಲು ಸುತ್ತುತ್ತಿತ್ತು.

"ಸುಖದ ಸಾಹಸವೂ ನಿನ್ನಿಂದಾಗದೇ ಪ್ರಭಾ?"

ಸುಖಪಡುವುದೂ ತನ್ನಿಂದಾಗದೇ? ಸುಖಪಡಬಾರದೇಕೆ!

? ! ? ! ? ! ?

"ಗಿರೀಥೀ ಜಿಸ್ಪೆಕಲ್ ಬಿಜಲಿ ಓ ಮೇರಾ ಆಶಿಯಾಂ ಕ್ಯಾಂ"

"Dead yesterday, unborn tomorrow
Why fret if today be sweet."

ನೂರಾರು ಜನ ಕುಳಿತಿದ್ದರು ಅವಳಂತೆಯೇ ಕಡಲದಂಡೆಯ ಮೇಲೆ—ಹೆಂಗಸರು, ಗಂಡಸರು, ಮಕ್ಕಳು. ಆದರದು ಜನ ಸೇರುವ ಹೊತ್ತಲ್ಲ: ಕರಗುವ

ಹೊತ್ತು. ಕಡಲಲೆಗಳ ಹೊಳಪಳಿದು ಕತ್ತಲು ಕವಿಯುತ್ತಿತ್ತು. ಕಡಲ ದಂಡೆಯ ಮೇಲೆ ಹೋಗುತ್ತಿದ್ದ ಜನ ಒಬ್ಬೊಬ್ಬರಾಗಿ ಹೋಗುತ್ತಿದ್ದರು.

ಮನಸ್ಸಿನ ಹೊಯ್ದಾಟದಲ್ಲಿ ಅಲ್ಲಿ ಕೂಡಲಾರದೆ, ಮನೆಯತ್ತ ಹೊರಟಳು.

'ಊಹೂ ಮನೆಯಿಲ್ಲ; ಅವಳಿಗೆಲ್ಲಿ "ಮನೆ." ಅದು ಫ್ಲ್ಯಾಟ್ (ಮನೆ) ಶುದ್ಧ ಫ್ಲ್ಯಾಟ್ (ಸಪ್ಪೆ)'

ಅವಳ ಮುಂದೆ ಇಬ್ಬರು ಹೋಗುತ್ತಿದ್ದರು. ಯುವಕ-ಯುವತಿ. ಒಬ್ಬರ ತೋಳಲ್ಲಿ ಮತ್ತೊಬ್ಬರು ತೋಳು ಹಾಕಿ ಹೋಗುತ್ತಿದ್ದರು. ಅವರ ಹಿಂದೆಯೇ ಪ್ರಭಾವತಿ ಹೊರಟಿದ್ದಳು-ಅಷ್ಟು ದೂರದಲ್ಲಿ.

ಕಡಲ ದಂಡೆಯ ಮೇಲೆ ಕತ್ತಲು ದಟ್ಟವಾಗುತ್ತಿತ್ತು; ಜನವಿಹೀನ ವಾಗುತ್ತಿತ್ತು. ಜನ ಹೆಚ್ಚಾಗಿ ಸುಳಿಯದ ಕಡೆಯ ಭಾಗ.

ಏಕೋ ಮುಂದೆ ಹೋಗುತ್ತಿದ್ದವರು ಅತ್ತಿತ್ತ ನೋಡುತ್ತಿದ್ದರು.

ಗಂಡು ಹೆಣ್ಣನ್ನು ಬಿಗಿಯುತ್ತಿದ್ದ, ಹೆಣ್ಣು ಅತ್ತ ಇತ್ತ ನೋಡು ತ್ತಿದ್ದಳು.

'ಅ್ಞ? ಕಮಾನ್ ಡಾರ್ಲಿಂಗ್, ದೇರ್ ಈಸ್ ನೋ ಫಿಯರ್' (ಬಾ ಪ್ರಿಯೆ-ಏನೂ ಭಯವಿಲ್ಲ.)

ನಿಂತಲ್ಲೇ ನಿಂತರು ಅವರು, ಪ್ರಭಾವತಿಯೂ ನಿಂತಳು. ಹೆಣ್ಣು ಸುತ್ತಮುತ್ತ ನೋಡುತ್ತಿತ್ತು.

ಗಂಡು ಪಕ್ಕದಲ್ಲಿದ್ದ ಅವಳನ್ನು ಇದುವರೆಗೆ ಎಳೆದುಕೊಂಡು ಅಪ್ಪಿದ— ಒಂದೇ ಮೈ.

ಚುಂಬನದ ಧ್ವನಿ ತೇಲಿತು ಗಾಳಿಯಲ್ಲಿ. ನಿಂತವರು ನಿಂತಿದ್ದರು. ಪ್ರಭಾವತಿಯೂ ನಿಂತಿದ್ದಳು-ಸರ್ಪದೃಷ್ಟಿಮುಗ್ಧ ಮಂಡೂಕದಂತೆ.

ನಿಂತಿದ್ದವರು ಮರಳ ಮೇಲೆ ಮಲಗಿದ್ದರು-ಒಂದೇ ಮೈ.

'ಸಂಬಡಿ ಮೆ ಪಾಸ್ ದಿಸ್ ಸೈಡ್' (ಯಾರಾದರೂ ಇತ್ತ ಬರ ಬಹುದು) ಹೆದರಿದ ಹೆಣ್ಣಿನ ಪಿಸುಮಾತು.

'ನೋ ಫಿಯರ್ಸ್' (ಏನೂ ಹೆದರಿಕೆಯಿಲ್ಲ.) ಗಂಡಿನ ಆತುರದ ಪಿಸುಮಾತು.

ಪ್ರಭಾವತಿಯ ಮೈ ಬಿಗಿದು ಕಂಪಿಸುತ್ತಿತ್ತು. ಫ್ಲೋರಾ ಹೇಳಿದ ಮಾತು ಕಿವಿಯಪ್ಪಳಿಸುತ್ತಿತ್ತು.

'ಬೊಂಬಾಯಿನಲ್ಲಿ ಬೀಚು, ಪರಾಸ್ ರೋಡಿನ ಅಟ್ಯಾಚ್ (ಹೊಂದಿದ ಭಾಗ) ವ್ಯತ್ಯಾಸವಿಷ್ಟೆ, ಅಲ್ಲಿನದು ದೇಹವಿಕ್ರಯ, ಇಲ್ಲಿನದು ರೊಮ್ಯಾನ್ಸ್.'

ಏಕೋ ನಿಲ್ಲುವುದಾಗಲಿಲ್ಲ ಅವಳಿಗೆ. ಬೇಗ ನಡೆಯಲು ಅವಕಾಶ ಕೊಡದ ಮರಳಿನ ಮೇಲೆ ವೇಗವಾಗಿ ನಡೆದು, ಕಡಲ ದಂಡೆಯನ್ನು ದಾಟಿ, ರಸ್ತೆಯನ್ನು ಸೇರಿ, ತಮ್ಮ ಮನೆಯತ್ತ ಬಂದಳು.

ಕುರುಡಾದ ಕಣ್ಣಿನಂತೆ ದಿಟ್ಟಿಸಿತು ಕತ್ತಲು ಕವಿದ ಕಿಟಕಿ. ಮನೆಯೊಳಗೆ ಹೋಗಲು ಆಗಲಿಲ್ಲ. ಒಂಟಿಯಾಗಿರುವುದೂ ಬೇಸರ-ಭಯವಾಯಿತು.

ಬಹುಕಾಲದಿಂದ ಸುಪ್ತವಾಗಿದ್ದ ಬಯಕೆಗಳು ಕೆರಳಿ ಎಚ್ಚತ್ತು ಹತ್ತಾರು ಹೆಡೆಯಾಡಿಸುವ ಹಾವುಗಳು ತುಂಬಿದ ಬುಟ್ಟಿಯಾಗಿತ್ತು ಅವಳ ಮಿದುಳು. ಹಿಂದೆ ಸವಿದು, ಬಹು ದಿನಗಳಿಂದಲೂ ಇಲ್ಲವಾದ ಯಾವುದೋ ಉಗ್ರಸುಖವನ್ನು ಬಯಸುತ್ತಿತ್ತು ಅವಳ ಮೈ. ಬಿಗಿದ ತೊಡೆ, ಸೆಟೆದ ಸ್ತನ, ಬಿಗಿಯಪ್ಪುಗೆ ಬಯಸಿದ ತೋಳು—

ತನ್ನೊಳಗೆ ಉರಿದೆದ್ದ ಆ ಪ್ರಚಂಡ ಭಾವತುಮುಲಕ್ಕೆ ಸಿಲುಕಿ ತತ್ತರಿಸಿ ಹೋದಳು ಪ್ರಭಾವತಿ.

ತನ್ನ ಮನೆಯೊಳಗೆ ಇರಲಾರದೆ, ಹೊರಗೂ ನಿಲ್ಲಲಾರದೆ, ತನ್ನೊಳಗಿನ ಕಾತರದುರಿಯನ್ನೇ ತಡೆಯಲಾರದೆ ಪ್ರಭಾವತಿ, ಲೀಲಾವತಿಯನ್ನು ನೋಡ ಹೋಗಲು, ಬಸ್ ಸ್ಟಾಂಡಿಗೆ ಬಂದು ಬಸ್ ಕಾಯ್ದಳು.

ಸ್ವಲ್ಪ ಹೊತ್ತಿನೊಳಗೇ ಬಸ್ ಬಂದಿತು. ಯಾರೋ ಒಬ್ಬ ಹೆಂಗಸು ಇಳಿದಳು. ಬಸ್‌ನಲ್ಲಿ ಜನ ತುಂಬಿತ್ತು. ಆ ಹೆಂಗಸು ಖಾಲಿ ಮಾಡಿದ ಜಾಗವನ್ನು ತೋರಿಸಿದ ಕಂಡಕ್ಟರು. ಹೋಗಿ ಕುಳಿತಳು. ಬಸ್ಸಿನ ಮೆತ್ತೆ ಮೈಗೆ ಹಿತವಾಗಿತ್ತು. ಕಂಡಕ್ಟರಿಗೆ ಗಿರ್‌ಗಾಂವರೆಗೆ ಟಿಕೇಟಿನ ಹಣ ಕೊಟ್ಟು ಮೈ ಚಾಚಿದಳು.

ಆ ಸೀಟಿನಲ್ಲಿ ಅವಳ ಪಕ್ಕದಲ್ಲಿ ಇನ್ನೊಬ್ಬ ಯಾರೋ ಕುಳಿತಿದ್ದ. ತನ್ನ ಪಕ್ಕದಲ್ಲಿ ಕುಳಿತ ಪ್ರಭಾವತಿಯ ನೋರೆಯನ್ನು ಮಿಕಿಮಿಕಿ ನೋಡಿದ.

ಮೆಲ್ಲಗೆ ಅವನ ಮೈ ವಿಸ್ತರಿಸಿ, ಸ್ವಲ್ಪ ದೂರವಾಗಿದ್ದ ಮೈ ಹತ್ತಿರವಾಗಿ ಪ್ರಭಾವತಿಯ ಮೈ ಸೋಕಿತು.

ಕಿಡಿ ಸೋಕಿದ ಪೆಟ್ರೋಲಿನಂತೆ ಧಗ್ಗನೆ ಹೊತ್ತಿ ಉರಿಯಿತು, ಅವಳಲ್ಲಿಯ ಬಯಕೆ.

ಅವಳು ಸುಮ್ಮನಿದ್ದುದನ್ನು ಕಂಡು ಅವನ ಮೈ ಮತ್ತಷ್ಟು ಜರುಗಿತು.

"ಸುಖಪಡು ಪ್ರಭಾ–ಸುಖಪಡುವುದೂ ಸಾಹಸ." ಫ್ಲೋರಾ ಧ್ವನಿ ಕೇಳುತ್ತಿತ್ತು.

ಅವಳು ಇನ್ನೂ ಸುಮ್ಮನಿದ್ದುದನ್ನು ಕಂಡು, ಅವನು ಎದೆಯ ಮೇಲೆ ಕೈ ಕಟ್ಟಿದಂತೆ ಮಾಡಿ, ಕಟ್ಟಿದ ಕೈಯನ್ನು ಅವಳ ತೋಳ ಹಿಂಬದಿಗೆ ಸರುಗಿಸಿ ಸ್ತನವನ್ನು ಸೋಕಿಸಿದ.

"ಇದು ಸುಖವೇ, ಸುಖವಲ್ಲವೇ?...." ತಟಕ್ಕನೆ ಅವಳ ಮೆದುಳಿನಲ್ಲಾವುದೋ ಪಲ್ಟಿ ಹೊಡೆಯಿತು.

....ಕೋಲ ತುದಿಯ ಎಫ್. ಎಲ್; ನೊರಳು ಬಗೆಯುವ ನಾಯಿ....

**ಎಫ್. ಎಲ್....ಸಿಫ್‌ಲಿಸ್....ಮೀನಾಕ್ಷಿ....ಕಡಲಲ್ಲಿ ಕೊಳೆತ ಹೆಣ....**

ಅವಳ ಮಿದುಳಿಗೆ ಬೆಂಕಿ ಇಟ್ಟಂತಾಯಿತು.

'ಬೊಂಬಾಯಲ್ಲಿ ಚಪ್ಪಲಿ, ಮೇಲೆ ಬೀಳಬರುವವರನ್ನು ಹಿಮ್ಮೆಟ್ಟಿಸುವ ಮಹಾಸ್ತ್ರ'–ಫ್ಲೋರಾ ಹೇಳಿದ್ದಳು.

"ನಿಮ್ಮ ಜಾಗದಲ್ಲಿ ಸರಿಯಾಗಿ ಕುಳಿತುಕೊಳ್ಳಿ. ಕಾಲಲ್ಲಿ ಚಪ್ಪಲಿ ಇದೆ," ಎಂದು ಆತನಿಗೆ ಸ್ಪಷ್ಟವಾಗಿ ಕೇಳಿಸುವಂತೆ, ಆದರೆ ಬೇರಾರಿಗೂ ಕೇಳಿಸದಂತೆ ಪಿಸುದನಿಯಲ್ಲಿ ಗದ್ದರಿಸಿದಳು. ಅವನು ಮಿಂಚು ಸೋಕಿದಂತೆ, ಏಟು ತಿಂದು ಬಾಲ ಮುದುರುವ ನಾಯಿಯಂತೆ ಸರಿದುಕೊಂಡ.

'ದುಡಿಯುತ್ತೇನೆಂದು ಬಂದ ಹೆಂಗಸರಿಗೆ ಬೊಂಬಾಯಿ ಭಯಂಕರ ಸ್ಥಳ.'—ಫ್ಲೋರಾ ಎಚ್ಚರಿಕೆ.

'ಮಂಗಲಸೂತ್ರ ಕಟ್ಟಿಕೋ ಪ್ರಭಾ. ಹೆಂಗಸಿಗೆ ರಕ್ಷಾದೇವತೆ.' ಲೀಲಾವತಿಯ ಬೇಡಿಕೆ.

ಭಯದಿಂದ ಪ್ರಭಾವತಿಯ ಮೈ ಕಂಪಿಸುತಿತ್ತು.

................

ಬಸ್‌ಸ್ಟಾಂಡಿನಲ್ಲಿ ಇಳಿದವಳೇ ಬಿರುಗಾಳಿಯ ವೇಗದಿಂದ ಹೋಗಿ ಲೀಲಾವತಿಯ ಮನೆಯ ಮುಚ್ಚಿದ ಬಾಗಿಲನ್ನು ದಡದಡ ಬಡಿದಳು—

"ಲೀಲಾ....ಲೀಲಾ....ಲೀಲಾ....ಲೀಲಾ...."

ಅವಳೊಳಗಿನ ಭಯ ಕ್ರೋಧವಾಗಿ, ಕ್ರೋಧ ಮತ್ತೇನೊ ಆಗಿ ಅವಳ ಮೈ ಛಳಿ ಬಂದಂತೆ ಕಂಪಿಸುತ್ತಿತ್ತು.

ಅವಳ ಕರೆ ಕೇಳಿ ಲೀಲಾವತಿ ಓಡಿಬಂದು ಬಾಗಿಲು ತೆಗೆದಳು.

"ಲೀಲಾ....ಲೀಲಾ....ಲೀಲಾ...."

ಲೀಲಾವತಿಯನ್ನು ಕಂಡವಳೇ, ಪ್ರಭಾವತಿ ಬೆನ್ನಟ್ಟಿ ಬಂದ ಭಯಕ್ಕೆ ಓಡಿ ಬಂದು ತಾಯನ್ನಪ್ಪುವ ಮಗುವಿನಂತೆ, ಲೀಲಾವತಿಯ ಬಳಿ ಹಾರಿ, ಅವಳಿಗೆ ತೆಕ್ಕೆಬಿದ್ದು, ಎದೆ ಬಿರಿಯುವಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವಳ ಪ್ರಚಂಡ ದುಃಖೋದ್ರೇಕವನ್ನು ಕಂಡು, ಲೀಲಾವತಿಯೂ ಗಾಬರಿಯಾಗಿ, ತರತರ ಕಂಪಿಸುವ ಅವಳ ಮೈಯನ್ನು ಬಿಗಿಯಾಗಿ ಬಿಗಿದು ತಬ್ಬಿದಳು. ಹೆಂಡತಿಯ ಹಿಂದೇ ಓಡಿಬಂದ ಸದಾನಂದ ದಿಗ್ಭ್ರಾಂತನಾಗಿ ನಿಂತಿದ್ದ.

"ಹೆದರಬೇಡ ಪ್ರಭಾ....ಏನಾಯಿತು ?....ಹೆದರಬೇಡ."

ಹೆದರಿದ ಮಗುವಿಗೆ ತಾಯಿ ಹೇಳುವಂತೆ ಹೇಳಿದಳು ಲೀಲಾ, ಅವಳನ್ನು ತಬ್ಬಿದ ನಡುಗುವ ಮೈಯನ್ನು ನೇವರಿಸಿ.

ನೆರೆ ಇಳಿಯುವಂತೆ ನಿಧಾನವಾಗಿ ಇಳಿಯಿತು, ಪ್ರಭಾವತಿಯಲ್ಲಿ ಮೂಡಿದ ಪ್ರಚಂಡ ದುಃಖೋದ್ರೇಕ.

"ಏನಾಯಿತು ಪ್ರಭಾ, ಇಷ್ಟೇಕೆ ಹೆದರಿದೆ. ಇಷ್ಟು ಹೊತ್ತಿನಲ್ಲೇನು ಬಂದದ್ದು ?"–ಕಾತರಳಾಗಿ ಕೇಳಿದಳು ಲೀಲಾವತಿ.

ಫ್ಲೋರಾ ಮನೆಯಲ್ಲಿರಲಿಲ್ಲ. ಮನೆಯಲ್ಲಿ ಒಬ್ಬಳೇ ಇರಲು ಬೇಸರವಾಯಿತು. ಏಕೋ ಭಯವೂ ಆಯಿತು. ನಿನ್ನನ್ನು ನೋಡಿ, ಇಲ್ಲಾದರೂ ಅಷ್ಟು ಹೊತ್ತು ಕಳೆಯೋಣವೆಂದು ಬಸ್‌ನಲ್ಲಿ ಬಂದೆ...." ಎಂದು ಬಸ್‌ನಲ್ಲಿ ನಡೆದುದನ್ನು ಹೇಳಿ—

"ಲೀಲಾ....ನನಗೆ ಭಯ....ನನಗೆ ಭಯ ಲೀಲಾ....ನನಗೆ ಭಯ.... ನನ್ನದೇ ಭಯ."–ಎಂದಳು.

"ನೀನು ತಪ್ಪು ಮಾಡಿದೆ ಪ್ರಭಾ—" ಸಿಟ್ಟಿನಿಂದ ಗದ್ದರಿಸಿದ ಸದಾನಂದ್.

"ಏನು ಮಾಡಬೇಕಿತ್ತು ಸದಾನಂದ್ ?"

"ಆ ಸೂಳೆಮಗನನ್ನು ಜೋಡಿನಿಂದ ಹೊಡೆದು, ಅಲ್ಲೇ ನಿಲ್ಲಿಸಿ ಪೋಲೀಸಿಗೆ ಕೊಡಬೇಕಾಗಿತ್ತು. ನನ್ನ ಕೈಗೆ ಸಿಕ್ಕಿದ್ದರೆ ಸಿಗಿದುಬಿಡುತ್ತಿದ್ದೆ,"–ಹಲ್ಲು ಮಸೆಯುತ್ತಾ ಸದಾನಂದ ಹೇಳಿದ.

"ಒಂಟಿ ಹೆಂಗಸರೆಂದರೆ ಸದರವಾಗಿದೆ, ಈ ಹಂದಿಗಳಿಗೆ. ಮನೆಯಲ್ಲಿ ಅಕ್ಕ ತಂಗಿಯರಾರೂ ಇರುವುದಿಲ್ಲವೇನೋ ?"–ಲೀಲಾವತಿಯೂ ಕ್ರೋಧೋದ್ದೀಪಿತಳಾಗಿ ಹೇಳಿದಳು, ತುಟಿ ಕಚ್ಚಿ.

ಒಂಟಿ ಹೆಂಗಸು ?

ದಿಗ್ದಿಗಂತಗಳವರೆಗೂ ಪಸರಿಸಿದ ಅಪಾರ ಕರಾಳಶೂನ್ಯದಲ್ಲಿ, ಭೀತಿಗ್ರಸ್ತ ಏಕಾಕಿನಿ....

"ನನಗೆ ಭಯ ಲೀಲಾ....ಲೀಲಾ ನನಗೆ ಭಯ. ನನ್ನದೇ ನನಗೆ ಭಯ"–ಎಂದಳು ಪ್ರಭಾವತಿ. ಮತ್ತೆ ಅವಳ ಭಯ ಮರುಕಳಿಸಿ, ಮೈ ನಡುಗಲಾರಂಭಿಸಿತು.

"ಛಿ ? ಹುಚ್ಚುಹುಡುಗಿ, ಹೆದರಿಕೆಯೇನು ಬಂತು ಬಿಡು. ನಾನಿದೀನಿ."–ಲೀಲಾವತಿ ಪ್ರಭಾವತಿಯನ್ನು ಸಂತೈಸಿ ಹೇಳಿದಳು. ಅವಳ ಮಾತಿನಲ್ಲಿ ರಕ್ಷಣೆಯ ಪ್ರಚಂಡ ಶಕ್ತಿ ಇತ್ತು. ಮತ್ತೆ ಪ್ರಭಾವತಿಯ ಭೀತಿ ಹತೋಟಿಗೆ ಬರುವವರೆಗೂ ಸುಮ್ಮನಿದ್ದು, ಬಳಿಕ ಲೀಲಾವತಿ ಕೇಳಿದಳು—

"ನಿನ್ನದು ಊಟವಾಯಿತೇನು ಪ್ರಭಾ ?"

"ಇಲ್ಲ."

"ಹಾಗಾದರೆ ಊಟಮಾಡು ಏಳು. ನೀನು ಬಂದಾಗ ನಾವೂ ಊಟಕ್ಕೇಳುವುದರಲ್ಲಿದ್ದೆವು."

ಪ್ರಭಾವತಿ ಸಂಕೋಚಮಾಡಿದಳು. ಆದರೆ ಲೀಲಾವತಿ ಬಿಡಲಿಲ್ಲ. ಬಲವಂತವಾಗಿ ಸುಗುವಿಗೆ ಊಟಮಾಡಿಸುವಂತೆ ಮಾಡಿಸಿದಳು. ತನ್ನ ಊಟ, ಅಡಿಗೆಯ ಮನೆಯ ಕೆಲಸವನ್ನು ಮುಗಿಸಿಕೊಂಡು ಬಂದು, ಗಂಡನ ಹಾಸಿಗೆಯನ್ನು ಹೊರಗಿನ ಕೋಣೆಯಲ್ಲಿ ಹಾಸಿಕೊಟ್ಟು ಪ್ರಭಾವತಿಯನ್ನು ತನ್ನ ಮಗ್ಗುಲಲ್ಲೇ ಮಲಗಿಸಿಕೊಂಡಳು,—

"ಮಲಗಿ ನಿದ್ರೆ ಮಾಡು ಪ್ರಭಾ," ಎಂದು ಅವಳಿಗೆ ಹೊದಿಕೆ ಹೊದಿಸಿ ತಟ್ಟಿದಳು.

"ಲೀಲಾ ನಿನಗೆಷ್ಟು ವಯಸ್ಸು?" ಇದ್ದಕ್ಕಿದ್ದಂತೆಯೇ ಕೇಳಿದಳು ಪ್ರಭಾವತಿ.

"ಏಕೆ?"

"ಏಕೋ ಹೇಳು."

"ಇಪ್ಪತ್ತೆಂಟಿರಬೇಕು. ಏಕೆ?"

"ನನಗೆ ಇಪ್ಪತ್ತನಾಲ್ಕು. ನಾಲ್ಕೇ ವರ್ಷ ಅಂತರ."

"ಅದಕ್ಕೇ ನಾನು ನಿನಗೆ ತಂಗಿ ಎಂದು ಕರೆದದ್ದು."

"ಆದರೆ ನೀನು ಬರೀ ಅಕ್ಕನೇ ಅಲ್ಲ ಲೀಲಾ. ಅಕ್ಕನಷ್ಟೇ ಅಲ್ಲ, ನನ್ನ ತಾಯಿ!"-ಎಂದು ಲೀಲಾವತಿಯನ್ನು ತಬ್ಬಿದಳು. ಲೀಲಾವತಿಗೂ ಅವಳ ಮೇಲೆ ಅಕ್ಕರೆ ಉಕ್ಕಿ ಬಂತು. ಹೇಳಿದಳು—

"ನಿನ್ನಂಥ ಮಗಳಿದ್ದರೆ ನನ್ನನ್ನು ಹಿಡಿಯುವವರಾರಿದ್ದರು ಪ್ರಭಾ."

ಅವಳ ಜೀವನದ ಏಕೈಕ ವ್ಯಥೆ ಕರುಳು ಕತ್ತರಿಸುವಂತೆ ಮೂಡಿತು ಆ ಮಾತಿನಲ್ಲಿ.

"ಹಾಗಾದರೆ ನನ್ನನ್ನು ನಿನ್ನ ಮಗಳು ಮಾಡಿಕೊಳ್ಳುವುದಿಲ್ಲವೇ ಲೀಲಾ."

"ಹುಚ್ಚಿ – ಸ್ವರ್ಗ ಬಂದರೆ ಬೇಡ ಎನ್ನುತ್ತಾರೆಯೇ." – ಎಂದು ಪ್ರಭಾವತಿಯನ್ನು ತಬ್ಬಿಕೊಂಡಳು.

ಇಬ್ಬರೂ ಸ್ವಲ್ಪ ಹೊತ್ತು ಮಾತನಾಡದೆ ಇದ್ದರು.

"ನಿದ್ರೆ ಬಂತೆ ಪ್ರಭಾ?" ಮೃದುವಾಗಿ ಕೇಳಿದಳು ಲೀಲಾವತಿ.

"ಹೂ. ಬರುತ್ತಾ ಇದೆ."

"ಹಾಗಾದರೆ ಮಲಗು." ಎಂದು ಲೀಲಾವತಿ ದೀಪ ಆರಿಸಿ ಬಂದು, ಮಲಗಿದಳು.

ಪ್ರಭಾವತಿಯ ಕಣ್ಣಲ್ಲಿ ನಿದ್ದೆ ಕವಿಯುತ್ತಿತ್ತು. ಲೀಲಾವತಿಯ ಕಣ್ಣಲ್ಲಿ ನೀರು ಹನಿಯುತ್ತಿತ್ತು.

## ೩೩

ಆ ದಿನದ ಘಟನೆಯನ್ನು ಪ್ರಭಾವತಿ ಫ್ಲೋರಾಗೆ ಹೇಳಲಿಲ್ಲ. ಹೇಳಲು ಅವಳಿಗೆ ಧೈರ್ಯವಾಗಲಿಲ್ಲ. ಹೇಳಿದರೆ ಅವಳು ಏನು ಹೇಳಬಹುದೆಂದು

ಅವಳಿಗೆ ಗೊತ್ತಿತ್ತು. ಲೀಲಾವತಿಯ ಮನೆಯಿಂದ ಹೊರಬಿದ್ದ ಕೂಡಲೇ, ಪ್ರಭಾವತಿಗೆ ತನ್ನ ಕೈಯಲ್ಲಿದ್ದ ಉಂಗುರದ ನೆನಪಾಗಿ, ಫ್ಲೋರಾ ಹೇಳುವ ಮಾತನ್ನು ಅದೇ ಹೇಳಿತ್ತು :

"ಸುಖಪಡುವುದೇನು ಕಷ್ಟ, ಅದೇನು ಮಹಾ ಸಾಹಸ ಎಂದಿದ್ದೆಯಲ್ಲ. ಈಗೇನು ಹೇಳುತ್ತೀಯ ?" – ಎಂದು ಅವಳ ಬೆರಳ ಮೇಲೆ ಫಳಫಳ ಹೊಳೆಯುವ ನವರತ್ನಗಳ ಸಣ್ಣ ಹರಳು ಕೆತ್ತಿದ 'V' ಮುದ್ರಿಕೆಯ ಉಂಗುರ ಅವಳನ್ನು ನೋಡಿ, ಹಲ್ಲು ಕಿರಿದು ಹಂಗಿಸಿದ ಹಾಗೆ ಹೇಳಿತು.

ಅದನ್ನೇ ಅಲ್ಲದೆ ಮತ್ತೇನು ಹೇಳುತ್ತಾಳೆ ಫ್ಲೋರಾ, ಮತ್ತೇನು ತಾನೇ ಹೇಳಲು ಸಾಧ್ಯ ?

ಪ್ರಭಾವತಿಯ ಸಂಸಾರ ಸುಖವಾಗಿರಬೇಕು. ಅದು ಭದ್ರವಾಗಿ, ಅವಳ ಜೀವನಸಾಹಸ ಶುಭದಲ್ಲಿ ಪರಿಣಾಮವಾಗಬೇಕೆಂದು ಲೀಲಾವತಿ ಪ್ರಯತ್ನಿಸಿದಳು. ಪ್ರಭಾವತಿಯೂ ಪ್ರಯತ್ನಿಸಿದಳು – ಆದರೆ ವಿಫಲತೆಯೇ ದೊರೆತ ಫಲ.

ಫ್ಲೋರಾನೂ ಪ್ರಭಾವತಿಯ ಬಾಳನ್ನು ಸುಖಮಯವಾಗಿ ಮಾಡಲು, ಅನಿವಾರ್ಯವಾಗಿ ಒಂಟಿಯಾದ ಬಾಳನ್ನು ಹರ್ಷಮಯವಾಗಿ ಮಾಡಲು ಮಾಡಬಹುದಾದುದೆಲ್ಲವನ್ನೂ ಮಾಡಿದ್ದಳು – ಆದರೆ ವಿಫಲತೆಯೇ ಫಲ.

ಮಂಗಳಸೂತ್ರ – ಮುದ್ರಿಕೆಯ ಉಂಗುರ : ಎರಡೂ ಅವಳಿಗೆ ಒಗ್ಗಬಗಲಿಲ್ಲ.

ಕಷ್ಟ ಸಹಿಸುವುದು – ಸುಖಪಡುವುದು : ಎರಡೂ ಅವಳಿಂದ ಆಗಲಿಲ್ಲ.

'ಹಾಗಾದರೆ ನಿನ್ನಿಂದ ಏನು ಸಾಧ್ಯ ?'

ಏಕೋ ಪ್ರಭಾವತಿಗೆ ತನ್ನ ಬಾಳು, ಗಾಣಿಗನ ಗಾಣಕ್ಕೆ ಕಟ್ಟಿದ, ಕಣ್ಣ ಮೇಲೆ ಬಟ್ಟೆ ಬಿಗಿದ ಕುರುಡು ಕೋಣದಂತೆ, ಗಾರೆ ಅರೆಯುವ ವೃತ್ತದಲ್ಲಿ 'ಕಿರ್ರೋ' ಎಂದು ಸುತ್ತುವ ಕಲ್ಲಿನ ಚಕ್ರದಂತೆ, ಮಾಂತ್ರಿಕನು ಹಾಕಿದ ವೃತ್ತದ ಮಧ್ಯದಲ್ಲಿ ಸಿಲುಕಿ, ಒಳಗೆ ಇರಲು ಆಗದೆ, ಹೊರಗೆ ಬರಲು ಸಾಗದೆ, ವ್ಯಥೆಪಡುತ್ತಾ, ತೊಳಲುತ್ತಾ ಸುಮ್ಮನೆ ಆ ವೃತ್ತದಲ್ಲಿ ಸುತ್ತುವ ಮೂಕ ಪಶುವಿನಂತೆ — ಎನಿಸಿತು.

ವೃತ್ತಗಳು – ಸುತ್ತುವ ಪಶುಗಳು.

ಏಳುವುದು – ಮಲಗುವುದು : ವೃತ್ತ ; ಆಫೀಸು – ಮನೆ, ಮನೆ –

ಆಫೀಸು : ವೃತ್ತ ; ಲೀಲಾವತಿ – ಫ್ಲೋರಾ, ಫ್ಲೋರಾ – ಲೀಲಾವತಿ : ವೃತ್ತ, ಮಂಗಳಸೂತ್ರ – ಮುದ್ರಿಕೆಯುಂಗುರ : ವೃತ್ತ.

ವೃತ್ತಗಳು, ವೃತ್ತದಲ್ಲಿ ಸುತ್ತುವ ವೃತ್ತಗಳು – ವೃತ್ತದಲ್ಲಿ ವೃತ್ತಾಕಾರವಾಗಿ ಸುತ್ತುವ ಪಶುಗಳು.

ಹೊರಬರಲು ಅವಕಾಶವಿಲ್ಲದ ಹಾವಾಡಿಗನ ಬುಟ್ಟಿಯಲ್ಲಿ ಚಕ್ರಾಕಾರವಾಗಿ ಸುತ್ತಿ ಸುತ್ತಿ ಬೇಸತ್ತು, ನೀಳವಾದ ತನ್ನ ಮೈಯನ್ನು ಸಿಂಬೆ ಸುತ್ತಿ ಬಾಲದ ಮೇಲೆ ಮೊಗ ಚಾಚಿ ಬುಸುಗರೆಯುವ ಹಾವಿನಂತೆ ಬುಸುಗರೆಯಿತು ಪ್ರಭಾವತಿಯ ಬಾಳು.

ಆಸರ – ಬೇಸರ – 'ಕಣ್ಣೀರಿನ ಕಾಸಾರ' – ಎಂದು ಬುಸುಗರೆಯಿತು ಪ್ರಭಾವತಿಯ ಬಾಳು. ಅವಳೂ ಸುತ್ತಿ ಸುತ್ತಿ ಸಾಕಾಗಿ, ಸಿಂಬೆ ಸುತ್ತಿ ಬಾಲದ ಮೇಲೆ ಮೊಗ ಚಾಚಿ ಮಲಗಿ ಬುಸುಗರೆದಳು.

ಅವಳ ಬಾಳು ಸುತ್ತುತ್ತಿತ್ತು....

ಅವಳ ಸುತ್ತಲೂ ಬಾಳು ಸುತ್ತುತ್ತಿತ್ತು.

ಪ್ರಭಾವತಿ ಆಫೀಸಿಗೆ ಹೋಗುತ್ತಿದ್ದಳು, ಬರುತ್ತಿದ್ದಳು.

ಆ ದಿನ ಬಸ್ಸಿನಲ್ಲಿ, ಲೀಲಾವತಿಯ ಮನೆಯಲ್ಲಿ ನಡೆದುದನ್ನು ಪ್ರಭಾವತಿ ಫ್ಲೋರಾಗೆ ಹೇಳಲಿಲ್ಲ. ಆದರೆ ಅದು ಅವಳಿಗೆ ತಿಳಿಯದಿರಲಿಲ್ಲ. ಆ ಘಟನೆ ನಡೆದು ಹತ್ತಾರು ದಿನಗಳ ಮೇಲೆ ಲೀಲಾವತಿಯಿಂದ ಅದನ್ನು ಅರಿತು, ಕೇಳಿದಳು ಫ್ಲೋರಾ—

"ಪ್ರಭಾ ನನಗೇಕೆ ಹೇಳಲಿಲ್ಲ ಅದನ್ನು ?"

"ಹೇಗೆ ಯಾವ ಮುಖ ಇಟ್ಟುಕೊಂಡು ಹೇಳಲಿ ಹೇಳು ?"

"ಅದಕ್ಕೇನು ? ನನ್ನ ಜೀವನದಲ್ಲಾಗುವುದನ್ನು ನಾನು ಹೇಳುವುದಿಲ್ಲವೇ ? ನೀನೇಕೆ ಹೇಳಬಾರದಾಗಿತ್ತು ?"

"ನೀನು ಸಿಟ್ಟಾಗಬಹುದು, ನನ್ನ ಮೇಲೆ ಬೇಜಾರು ಪಟ್ಟುಕೊಳ್ಳಬಹುದು ಎಂತ."

"ಸಿಟ್ಟು, ಬೇಸರ—ನಿನ್ನ ವಿಷಯದಲ್ಲಿ ? ಹುಚ್ಚು ಹುಡುಗಿ. ಅದು ಸಾಧ್ಯವೇ ಇಲ್ಲ. ನಿನ್ನ ಮೇಲೆ ನನಗೆಷ್ಟು ಪ್ರೀತಿಯಿದೆಯೆಂದು ನಿನಗೆ ಗೊತ್ತಿಲ್ಲ, ಅಷ್ಟೆ." – ಮೃದುವಾಗಿ ಪ್ರಭಾವತಿಯ ಕೆನ್ನೆ ತಟ್ಟಿ ಹೇಳಿದಳು ಫ್ಲೋರಾ.

"ನೀನು ನಾನು ಸುಖಪಡಬೇಕು ಎಂತ ಹೇಳಿದೆ. ಅದು ನನ್ನಿಂದಾಗ ಲಿಲ್ಲ. ಅದಕ್ಕೇ ನೀನು ಸಿಟ್ಟಾಗುತ್ತೀಯೇನೋ ಅನಿಸಿತು."

"ನಿನಗಿನ್ನೂ ನಿನ್ನ ಗೃಹಿಣಿಯ ಕಾಂಪ್ಲೆಕ್ಸ್ (Complex) ಹೋಗ ಲಿಲ್ಲ. ಹಾಗೆಲ್ಲಾ ನಿನ್ನ ಮೇಲೆ ಸಿಟ್ಟಾಗುವುದಕ್ಕೆ ನಾನೇನು ನಿನ್ನ ಕೈ ಹಿಡಿದ ಗಂಡನೇ? ನೀನು ಹೆದರಿದ್ದು ಕೇಳಿ 'ಇಷ್ಟಕ್ಕೆ ಹೆದರಿಬಿಟ್ಟೆಯಾ ಅಂಜುಬುರುಕಿ' ಎನಿಸಿ ನಗೆ ಬಂತು. ಜೀವನಕ್ಕೆ ಹೆದರಿದರೆ ಬಾಳಲು ಸಾಧ್ಯವೇ ಪ್ರಭಾ. ಹೆದರಿದವರನ್ನು ಮತ್ತಷ್ಟು ಹೆದರಿಸುತ್ತದೆ, ಈ ಜೀವನ, ಹೆದರುವವನ ಮೇಲೆ ಕಪ್ಪೆ ಹಾಕುವ ಹುಡುಗರಂತೆ."– ಮೃದು ಮಧುರವಾಗಿ, ಮಾದಕವಾಗಿ ವಾತ್ಸಲ್ಯದ ನಗೆ ನಕ್ಕು, ಅವಳ ತಲೆ ಹಿಡಿದು ಮುಂಡಾಡಿ ಹೇಳಿದಳು ಫ್ಲೋರಾ–

"ಐ ಪಿಟಿ ಯು ಮೈ ಪೂರ್ ಫ್ರೈಟನ್ಡ್ ಚೈಲ್ಡ್." (ನಿನ್ನನ್ನು ಕಂಡು ಕನಿಕರವಾಗುತ್ತದೆ, ನನ್ನ ಹೆದರಿದ ಮಗುವೇ.)

ಪಿಟಿ! ಪಿ....ಐ....ಟಿ....ವೈ – ಪಿಟಿ – ಕರುಣೆ.

ತಟಕ್ಕನೆ ಪ್ರಭಾವತಿಗೆ ಹಿಂದೊಮ್ಮೆ ಫ್ಲೋರಾ ಹೇಳಿದ್ದುದು ನೆನಪಾಯಿತು –

"ಕರುಣೆ ತಾತ್ಸಾರದ ಪರಮಾವಧಿ. ನನ್ನ ಮಟ್ಟಿಗೇನೋ ಕರುಣೆಗಿಂತ ದ್ವೇಷ ಲೇಸು."

ಫ್ಲೋರಾ ಹೇಳಿದ ಮಾತು ಪ್ರಭಾವತಿಗೆ ನೆನಪಿತ್ತು; ಅದನ್ನು ಅವಳು ಹೇಳಿದ ದಿನವೂ ನೆನಪಿತ್ತು....

................

ಆ ದಿನ ಅವಳು ಆಫೀಸು ಮುಗಿಸಿಕೊಂಡು ಮನೆಗೆ ಹಿಂದಿರುಗುತ್ತಿದ್ದಾಗ, ತನ್ನ ಆಫೀಸಿನಲ್ಲೇ ಕೆಲಸ ಮಾಡುತ್ತಿದ್ದ ಇನ್ನಿಬ್ಬರು ಗಂಡಸರು, ಅವಳ ಹಿಂದೇ ಬರುತ್ತಿದ್ದರು –

"ಅಲ್ಲಿ ಹೋಗುತ್ತಿದ್ದಾಳಲ್ಲಾ, ಅವಳು – ಷಿ ಈಸ್ ಎ ಟೆರಿಬಲ್ ಡಿಸಪಾಯಿಂಟ್‌ಮೆಂಟ್ (ಅವಳು ಭಯಂಕರ ನಿರಾಶೆ). ಇವಳಿಗಿಂತ ಹಿಂದಿದ್ದ ವಳೇ ಮೇಲಾಗಿತ್ತು. ಅವಳಿಗೆ ಕೆಲಸ ಬರುತ್ತಿರಲಿಲ್ಲ. ಆದರೆ ಆಫೀಸಿನ ಬೇಸರದ ಬಾಳಿನಲ್ಲಿ ಅವಳಿಂದ ಅಷ್ಟು ಬಣ್ಣ, ನಗೆಯಾದರೂ ಬೆರೆಯುತ್ತಿತ್ತು. ಇವಳು ಟೈಪ್‌ರೈಟರನ್ನೇ ಮದುವೆಯಾದ ಮಾನವ ಯಂತ್ರ"– ಒಬ್ಬ ಹೇಳಿದ.

"ನಿನ್ನ ಮಾತು ನಿಜ. ಶುದ್ಧ ಹಿಮದ ಗಡ್ಡೆ. ಲೈಫೇ ಇಲ್ಲ. ದೇವರು

ಅವಳಿಗೆ ರೂಪ, ಹೆಣ್ಣುತನ ಕೊಟ್ಟು ಅನ್ಯಾಯ ಮಾಡಿದ" – ಇನ್ನೊಬ್ಬ ಆವನ ಜೊತೆಗೆ ದನಿ ಕೂಡಿಸಿದ.

"ಹಿಮದ ಗಡ್ಡೆ ? ಆಪ್ಟ್ ವರ್ಡ್. (ಪಕ್ಕಾ ಮಾತು) ಆ ಸುಖವೇ ಗೊತ್ತಿಲ್ಲಾಂತ ಕಾಣುತ್ತೆ ಪ್ರಾಣಿಗೆ. ಒಂದೊಂದು ಸಲ ಅವಳನ್ನು ನೋಡಿದರೆ ನನಗೇನನ್ನಿಸುತ್ತೆ ಗೊತ್ತೆ ?—"

"ಏನು ?"

"ಯಾರಾದರೂ ರೇಪ್ (ಬಲಾತ್ಕಾರ ಸಂಭೋಗ) ಮಾಡಿಯಾದರೂ ನಗುವುದನ್ನು ಕಲಿಯಬಹುದು ಎಂತ."

"ಅಷ್ಟು ಗಟ್ಟಿಯಾಗಿ ಮಾತಾಡಬೇಡ. ಎಲ್ಲಾದರೂ ಕಿವಿಗೆ ಬಿದ್ದೀತು."

"ಬೀಳಲೀಳು."

"ಪಾಪ! ಹೆಂಗಸು ನೊಂದುಕೊಂಡಾಳು ಬಿಡು. ಅವಳಿಗೇನು ಗೋಳೋ. ಐ ಪಿಟಿ ದಿ ಪೂರ್ ಗರ್ಲ್," (ಆ ಬಡಹುಡುಗಿಯನ್ನು ಕಂಡು ಕನಿಕರವಾಗುತ್ತದೆ) – ಆ ಮಾತು ಹೇಳಿಕೊಂಡು ಇಬ್ಬರೂ ನಕ್ಕಿದ್ದರು. ಪ್ರಭಾವತಿ ಬೇಗ ಬೇಗ ನಡೆದು ಬಂದು, ರೈಲು ಹತ್ತಿ ಮನೆ ಸೇರಿ, ಫ್ಲೋರಾಗೆ ಹೇಳಿದ್ದಳು ಅದನ್ನು. ಆಗ ಫ್ಲೋರಾ ಹೇಳಿದ್ದಳು –

"ಪಿಟಿ. ನೀನು ಆ ಮಾತನ್ನು ಪ್ರತಿಭಟಿಸಬೇಕಾಗಿತ್ತು ಪ್ರಭಾ. ಕರುಣೆ ತಾತ್ಸಾರದ ಪರಮಾವಧಿ. ಆ ಕರುಣೆಗಿಂತ ದ್ವೇಷ ಲೇಸು."

...............

"ಐ ಪಿಟಿ ಯು ಮೈ ಪೂರ್ ಫ್ರೆಂಡ್‌ಲೆಸ್ ಚೈಲ್ಡ್."

ಪಿ....ಐ....ಟಿ....ವೈ – ಪಿಟಿ.

ಆ ಮಾತು ಕೇಳಿ ಪ್ರಭಾವತಿಗೆ ಕೆನ್ನೆಗೆ ಹೊಡೆದಹಾಗಾಯಿತು. ಕಕ್ಕುಲತೆಯಿಂದ ಕೇಳಿದಳು –

"ಪ್ಲೀಸ್, ಪ್ಲೀಸ್ ಫ್ಲೋರಾ. ಡೋಂಟ್ ಯೂಸ್ ದಟ್ ಹಾರಿಬಲ್ ವರ್ಡ್ –" (ದಯವಿಟ್ಟು ಫ್ಲೋರಾ. ಆ ಭಯಂಕರ ಶಬ್ದ ಬಳಸಬೇಡ)

"ಅಷ್ಟು ಭಯಪಡಬೇಡ ಪ್ರಭಾ, ಪ್ರೇಮ – ಕರುಣೆ ಎರಡೂ ಅವಳಿ-ಜವಳಿ," ಎಂದು ಫ್ಲೋರಾ, – "ಎಲ್ಲಾದರೂ ಅಡ್ಡಾಡಿ ಬರೋಣ, ನಡಿ," ಎಂದಳು.

"ಎಲ್ಲಿಗೆ ಹೋಗೋಣ?"

"ಆ ಪಲ್ಲವಿ ಮತ್ತೆ ಹಾಡಬೇಡ. ಯಾವುದಾದರೂ ಸಿನಿಮಾ ನೋಡಿಕೊಂಡು, ಎಲ್ಲಾದರೂ ಹೋಟಲಿನಲ್ಲಿ ಊಟ ಮಾಡಿಕೊಂಡು, ಹಾಯಾಗಿ ಮನೆಗೆ ಬರೋಣ."

'ಪ್ರೇಮ – ಕರುಣೆ ಅವಳಿ ಜವಳಿ. ಕರುಣೆ ತಾತ್ಸಾರದ ಪರಮಾವಧಿ' ಎಂದು ಮುಲುಗಿತು ಅವಳ ಮಿದುಳು.

ಆ ಭಾವನೆಯ ಮೇಲೆ ದ್ವೇಷ ಬಂತು ಪ್ರಭಾವತಿಗೆ. ತ್ವೇಷದಿಂದ –

"ನಡಿ ಹೋಗೋಣ. ಲೀಲಾ ಬರುವುದಾದರೆ ಅವಳನ್ನೂ ಎಳೆದುಕೊಂಡು ಹೋಗೋಣ," ಎಂದಳು.

## ೩೪

ಗಡಿಯಾರವನ್ನು ನೋಡುತ್ತಾ, ಟೈಪ್ ಮಾಡುವುದರಲ್ಲಿ ನಿರತಳಾಗಿದ್ದ ಪ್ರಭಾವತಿಗೆ ಆಳು ಬಂದು, ಟೆಲಿಫೋನ್‌ನಲ್ಲಿ ನಿಮ್ಮನ್ನಾರೋ ಕರೆಯುತ್ತಿದ್ದಾರೆ, ಎಂದ. ಯಾರೋ ಎಂದುಕೊಂಡು ಹೋಗಿ ಪ್ರಭಾವತಿ, ರಿಸೀವರನ್ನು ಕಿವಿಗಿಟ್ಟುಕೊಂಡು –

"ಹಲೋ ಪ್ರಭಾವತಿ ಸ್ಪೀಕಿಂಗ್," ಅಂದಳು.

"ನಾನು ಲೀಲಾವತಿ ಪ್ರಭಾ."

"ಇದೇನು ಇದ್ದಕ್ಕಿದ್ದ ಹಾಗೇ – ಎಲ್ಲಿಂದ ಮಾತಾಡುತ್ತಿದೀಯ?"

"ಬೆಸ್ಟ್ ರೆಸ್ಟೋರಾಂಟ್‌ನಿಂದ. ಫೋರ್ಟನಲ್ಲಿ ಏನೋ ಸಾಮಾನು ಖರೀದಿ ಮಾಡುವುದಿತ್ತು, ಬಂದಿದ್ದೆ. ಹೇಗೂ ನಿಮ್ಮ ಆಫೀಸು ಮುಗಿಯುವ ಹೊತ್ತಾಯಿತು. ಜೊತೆಗೇ ಕಲೆತು ಅಡ್ಡಾಡಿ ಹೋಗೋಣ ಎಂತ ಫೋನ್ ಮಾಡಿದೆ. ಆಫೀಸು ಬಿಟ್ಟಕೂಡಲೇ ನೆಟ್ಟಗೆ ಇಲ್ಲಿಗೆ ಬಾ."

"ಎಲ್ಲಿಗೆ ಬರಬೇಕು?"

"ತಾರಾಪೂರ್‌ವಾಲಾ ಪುಸ್ತಕದ ಅಂಗಡಿ ಇಲ್ಲವೇ, ಅದರ ಇದುರಿಗೇ ಇದೆ, ಬೆಸ್ಟ್ ರೆಸ್ಟೋರಾಂಟ್. ಅಲ್ಲಿ ಲೇಡೀಸ್ ರೂಂನಲ್ಲಿ ಕಾಯುತ್ತಿರುತ್ತೇನೆ. ಫ್ಲೋರಾಗೂ ಫೋನ್ ಮಾಡಿದ್ದೆ. ಅವಳೂ ಬರುತ್ತೇನೆ ಎಂದಿದಾಳೆ. ಖಂಡಿತ ಬಾ. ಈಗಾಗಲೆ ನಾಲ್ಕು – ನಲವತ್ತು. ಐದು – ಹತ್ತಕ್ಕೆ ಬರುತ್ತೀಯಾ? ಮರೆಯಬೇಡ – ಕಾಯುತ್ತಿರುತ್ತೇನೆ."

"ಖಂಡಿತವಾಗಿಯೂ ಬರುತ್ತೇನೆ ಲೀಲಾ. ಒಂದೆರಡು ನಿಮಿಷ ಹೆಚ್ಚು ಕಡಮೆಯಾದರೆ ಬೇಜಾರು ಮಾಡಿಕೊಳ್ಳಬೇಡ."

"ಹಾಗೆಲ್ಲಾ ಬೇಜಾರು ಮಾಡಿಕೊಳ್ಳೋದು ನೀನೇ. ನನಗೆ ಕಾಯೋದು ಗೊತ್ತು. ಹಾಗಂತ ಬಹಳ ಕಾಯಿಸಬೇಡ."

"ಇಲ್ಲ ಬರುತ್ತೇನೆ."

"ಸೋ ಲಾಂಗ್. ಚೀರ್‌ಯು."

"ಚೀರ್‌ಯು."

ರಿಸೀವರನ್ನು ಕೆಳಗಿಟ್ಟು ಬಂದು, ಗಂಟೆ ಐದಾಗುವುದನ್ನೇ ಕಾದು ದಿನದ ಕೆಲಸ ತೀರಿಸಿ ಹೊರಟಳು.

ಪ್ರಭಾವತಿ 'ಬೆಸ್ಟ್ ರೆಸ್ಟೋರಾಂಟ'ನ್ನು ಸೇರಿ ಲೇಡೀಸ್ ರೂಮನ್ನು ಹೊಕ್ಕಾಗ, ಲೀಲಾವತಿ ಒಬ್ಬಳೇ ಅವಳು ಬರುವುದನ್ನು ಕಾಯುತ್ತಿದ್ದಳು. ಫ್ಲೋರಾ ಬಂದಿರಲಿಲ್ಲ.

"ಫ್ಲೋರಾ ಬರಲಿಲ್ಲವೇ ಲೀಲಾ?"

"ಊಹೂ, ಇನ್ನೂ ಇಲ್ಲ. ಬಾ," ಎಂದಳು ಲೀಲಾವತಿ ವಿಷಣ್ಣ ಸ್ವರದಿಂದ. ಅವಳ ಮುಖವೂ ಚಿಂತೆಯಿಂದ ಮ್ಲಾನವಾಗಿತ್ತು. ಅದನ್ನು ಕಂಡು ಪ್ರಭಾವತಿ ಚಕಿತಳಾದಳು.

"ಇದೇನು ಲೀಲಾ ಹೀಗೆ. ಮೈಯಲ್ಲಿ ಚೆನ್ನಾಗಿಲ್ಲವೇ?"

"ಚೆನ್ನಾಗಿಲ್ಲದೆ ಏನು? ಆರೋಗ್ಯವಾಗಿಯೇ ಇದೇನೆ," ಎಂದಳು.

ಹೋಟಲು ಹುಡುಗ ಅವರಿದಿರು ಬಿಸ್ಕತ್ತು, ಕೇಕು, ಬಾಳೇಹಣ್ಣಿನ ಪ್ಲೇಟುಗಳನ್ನು ತಂದಿರಿಸಿದ. ಲೀಲಾವತಿಯ ಮುಖವನ್ನೇ ನೋಡುತ್ತಾ ಪ್ಲೇಟಿನಿಂದ ಒಂದು ಬಿಸ್ಕತ್ ತೆಗೆದು ಕಚ್ಚುತ್ತಾ ಹೇಳಿದಳು ಪ್ರಭಾವತಿ-

"ಸುಳ್ಳು ಹೇಳುವುದನ್ನು ಎಂದಿನಿಂದ ಕಲಿತೆ. ಮುಖ ಅಷ್ಟು ಬಾಡಿದೆ, ಚೆನ್ನಾಗಿದೀನಿ ಅನ್ನುತ್ತೀಯಲ್ಲ. ಏಕೆ? ನನ್ನ ಮುಂದೆ ಹೇಳುವುದಿಷ್ಟವಿಲ್ಲ ವಾದರೆ ಬೇಡ."

"ಹಾಗೇನೂ ಇಲ್ಲ," ಎಂದು ಲೀಲಾವತಿ 'ಏನು ಬೇಕೆ'ಂದು ಕೇಳಿದ ಹೋಟಲು ಹುಡುಗನಿಗೆ 'ಎರಡು ಟೀ' ಎಂದು ಆರ್ಡರು ಮಾಡಿ–"ಇವತ್ತು ಶಾಲಿನಿ ಸಿಕ್ಕಿದ್ದಳು," ಎಂದಳು.

"ಯಾರು? ಆ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಕೆಲಸ ಮಾಡುತ್ತಿದ್ದಾಕೆಯೇ?"

" ಹೂ."

" ಎಲ್ಲಿ ಸಿಕ್ಕಿದ್ದಳು ? ಎಲ್ಲೋ ಕೆಲಸದಲ್ಲಿದ್ದಾಳೆಂದೆ ?"

" ಇಲ್ಲೇ ಸಿಕ್ಕಿದ್ದಳು."

" ಮತ್ತೆ -- ಇರು ಎನ್ನಬೇಕಾಗಿತ್ತು. ನೀನು ಹೇಳಿದುದನ್ನು ಕೇಳಿದಾಗಿ
ನಿಂದ ನನಗೆ ಅವಳನ್ನು ನೋಡಬೇಕೆಂದು ತುಂಬಾ ಆಸೆ ಇತ್ತು."

" ಏನೋ ಪಾರ್ಟಿ ಮೀಟಿಂಗ್ ಇದೆ. ಅರ್ಜೆಂಟಾಗಿ ಹೋಗಬೇಕು
ಎಂದಳು. ನಾನೂ ಅವಳಿಗೆ ನೀನು, ಫ್ಲೋರಾ ಬರುವ ಸುದ್ದಿ ಹೇಳಿ ಇರು
ಅಂದೆ. ' ಇನ್ನೊಂದು ಸಲ ನೋಡ್ತೀನಿ.... ನಾನೇ ಪರಿಚಯ ಮಾಡಿಕೊಳ್ಳು
ತ್ತೀನಿ ' ಅಂತ ನಿಮ್ಮಿಬ್ಬರ ವಿಳಾಸ, ಫೋನ್ ನಂಬರು ತೆಗೆದುಕೊಂಡು
ಹೋದಳು.

" ಅದಾಯಿತಲ್ಲ, ಈ ಮ್ಲಾನವದನಕ್ಕೇನು ಕಾರಣ ?"

" ಅವಳೇನೋ ವಿಷಯ ಹೇಳಿದಳು. ಕೇಳಿ ವ್ಯಥೆಯಾಯಿತು."

" ಏನಂತೆ ?"

" ಮತ್ತೇನು, ಅವಳ ಪಾರ್ಟಿಯ ಸಮಾಚಾರ. ಅವಳಿಗೂ ಪಾರ್ಟಿಯ
ಕೆಲವರಿಗೂ ಭಿನ್ನಾಭಿಪ್ರಾಯವಿತ್ತಂತೆ."

" ಅಲ್ಲೂ ಅದೇ ಗಂಡು – ಹೆಣ್ಣಿನ ಸಮಸ್ಯೆಯೇ ?" – ತಟಕ್ಕನೆ ಕರ್ಕಶ
ವಾದ ಧ್ವನಿಯಲ್ಲಿ ಕೇಳಿದಳು ಪ್ರಭಾವತಿ.

" ಊಹೂ. ಅದಲ್ಲ. ಆ ಜನ ಅದಕ್ಕೆಲ್ಲಾ ಹೋಗುವುದಿಲ್ಲ."

" ಜನ ಕಮ್ಯುನಿಸ್ಟರಿಗೆ ನೀತಿಯೇ ಇಲ್ಲ ಎನ್ನುತ್ತಾರೆ. ಅದಕ್ಕೇ ಅ
ಪೀಡೆಯೇನಾದರೂ ವಕ್ರಿಸಿತೋ ಅಂತ ಕೇಳಿದೆ."

" ಛಿ! ಅದೆಲ್ಲಾ ಶುದ್ಧ ಅಪಪ್ರಚಾರದ ಮಾತು."

" ಹಾಗಾದರೆ ಮತ್ತೇನು ಬಂತು ಭಿನ್ನಾಭಿಪ್ರಾಯ ?"

" ಅವರಿಗೆ ಗಾಂಧೀಜೀಯನ್ನು ಕಂಡರಾಗುವುದಿಲ್ಲ. ಗಾಂಧೀಜಿ
ಫಾಸಿಸ್ಟ್, ಬಂಡವಾಳಗಾರರ ಕೈಗೊಂಬೆ ಎಂದು ಕರೆಯುತ್ತಾರೆ. ಶಾಲಿನಿ
ಗುಜರಾತಿ ಹುಡುಗಿ. ಗಾಂಧೀಜೀ ಅಂದರೆ ದೇವರು ಅನ್ನುವ ಭಾವನೆ.
ಆದರೆ ಅವರ ಅಹಿಂಸಾ ತತ್ವ ಹಿಡಿಸದು. ' ಅದು ಪುರಾಣ ಯುಗದ ಮಾತು.
ಈ ಕಾಲಕ್ಕೆ ಅದೆಲ್ಲಾ ನಡೆಯುವುದಿಲ್ಲ. ಚೋರ ದೇವರಿಗೆ ಚಂಡಾಲ
ಪೂಜಾರಿಯಾದರೆ ಸರಿ ' ಎನ್ನುತ್ತಿದ್ದಳು. ಆದ್ದರಿಂದ ಇವರು ಗಾಂಧೀಜಿ

ಯನ್ನು ಬೈಯುವುದನ್ನು ಹೇಗೋ ಸಹಿಸಿಕೊಂಡಿದ್ದಳಂತೆ. ಆದರೆ ಅವರು ಗಾಂಧೀಜೀಯನ್ನು ಬೈಯುವುದರ ಜೊತೆಗೆ ಜಿನ್ನಾಸಾಹೇಬರ ಸಮಾನ ದೇಶ ಭಕ್ತರಿಲ್ಲ, ಅವರ ಪಾಕಿಸ್ತಾನ್ ವಾದವೇ ನ್ಯಾಯ ಎಂದದ್ದು ಅವಳಿಗೆ ಸಹಿಸಲಿಲ್ಲ. ಇಲ್ಲಿ ಹಿಂದೂ ಮುಸ್ಲಿಂ ಗದ್ದಲವಾದಾಗ, ಶಾಲಿನಿಯ ಸೋದರಮಾವನೊಬ್ಬ ಚೂರಿಯ ಇರಿತಕ್ಕೆ ಸಿಕ್ಕಿ ಸತ್ತಿದ್ದನಂತೆ. ಆದ್ದರಿಂದ ಅವಳಿಗೆ ಜಿನ್ನಾ ಸಾಹೇಬರ ಪಾಕಿಸ್ತಾನ್ ವಾದದ ಚುರುಕು ತಗುಲಿತ್ತು. ತಮ್ಮ ಕೋಣೆ ಯಲ್ಲಿ ಜಿನ್ನಾ ಸಾಹೇಬರ ಚಿತ್ರ ಹಾಕಿಕೊಂಡು, ಗಾಂಧೀಜೀಯನ್ನು ಬೈಯುವ ಇವರ ಮನೋಭಾವ ಖಂಡಿಸಿದಳಂತೆ. ಅದಕ್ಕೇ ಅವಳ ಮೇಲೆ ಅವರಿಗೆ ಅಸಮಾಧಾನ–'ಪಾರ್ಟಿ ಲೈನ್' ಪಾಲಿಸಲಿಲ್ಲ ಎಂತ. ಅದಕ್ಕೇ ಅವಳ ಮೇಲೆ ಏನೋ ದೂರು ತಂದಿದಾರಂತೆ."

"ಏನಂತೆ ಅವರ ದೂರು?" ಕಹಿಯಾಗಿ ಕೇಳಿದಳು ಪ್ರಭಾವತಿ.

"ಅದೇನೇನೋ ಹೆಸರು ಹೇಳಿದಳು–'ರೈಟ್ ರಿಫಾರ್ಮರ್' 'ಡೀವಿ ಯೇಷನಿಸ್ಟ್' ಇನ್ನೂ ಏನೇನೋ ಅಂತ. ಅದೇನೋ ಏತರದೋ ನನಗೆ ಅರ್ಥವಾಗಲಿಲ್ಲ. ಅದೆಲ್ಲಾ ಕಥೆ ಹೇಳಿ 'ಲೀಲಾ ಬಹೆನ್, ನೀನು ಹೇಳು ತ್ತಿದ್ದುದು ನಿಜ ಆಯಿತು. ಇವರಿಗೆ ಗಾಂಧೀಜೀಗಿಂತ ಜಿನ್ನಾ ಸಾಹೇಬರೇ ದೊಡ್ಡವರು. ಭಾರತಕ್ಕಿಂತ ರಷ್ಯಾನೇ ದೊಡ್ಡದಾಗಿದೆ. ಇಂಥವರೇನು ಮಾಡುತ್ತಾರೋ ತಿಳಿಯದು' ಎಂದು ಕಣ್ಣೀರಿಟ್ಟುಕೊಂಡಳು."

"ಹಾಗಿದ್ದರೆ ಮತ್ತೇಕೆ ಆ ಪಾರ್ಟಿಯಲ್ಲಿದಾಳಂತೆ?"

"ನಾನೂ ಅದೇ ಕೇಳಿದೆ. ಅದಕ್ಕವಳು–'ಕಮ್ಯುನಿಸಂ, ಪಾರ್ಟಿ ಯದು ತಪ್ಪಿಲ್ಲ ಬಹೆನ್, ಆ ತತ್ವದ ಹಿಂಬಾಲಕರು ಎನಿಸಿಕೊಂಡವರ ಸಂಕುಚಿತ ಮನೋಭಾವನೆಯಲ್ಲಿ ತಪ್ಪಿದೆ. ಇಂದಲ್ಲ ನಾಳೆ ಇವರು ತಪ್ಪು ತಿಳಿದುಕೊಳ್ಳುತ್ತಾರೆ. ಕಮ್ಯುನಿಸಂನಿಂದಲೇ ಜಗತ್ತು ಉದ್ಧಾರವಾಗುವುದು. ಇಲ್ಲಿನ ಪಾರ್ಟಿ ಚೀನಾದ ಪಾರ್ಟಿ ಹಾಗಾದರೆ, ಚೀನಾ ಪಾರ್ಟಿ ಸನ್ ಯಾತ್‌ಸೇನರನ್ನು ಗೌರವಿಸುವ ಹಾಗೆ, ಇವರೂ ಗಾಂಧೀಜೀಯನ್ನು ಗೌರವಿಸಿ, ನೀನು ಹೇಳಿದ ಹಾಗೆ ನಮ್ಮ ದೇಶದ ಸಂಸ್ಕೃತಿಗೆ ಹೊಂದಿಕೊಂಡ ಹಾಗೆ ಕಮ್ಯುನಿಸಂ ಬೆಳಸಿದರೆ, ಆಗ ಕಮ್ಯುನಿಸಂನಿಂದ ನಾವೂ ಉದ್ಧಾರ ವಾಗುತ್ತೇವೆ, ಕಮ್ಯುನಿಸಂ ಕೂಡ ಉಳಿಯುತ್ತದೆ, ಲೀಲಾ ಬಹೆನ್, ಇವತ್ತು ಅಷ್ಟೇ ಹೇಳಬೇಕು, ಎಂತ ಹೊರಟಿದೀನಿ. ಏನಾಗುತ್ತದೋ ಕಾಣೆ' ಎಂದಳು.

'ಏನಾಗುತ್ತೇ, ನಿಜ ಹೇಳಿದರೆ ಯಾರಾದರೂ ಸಿಟ್ಟು ಮಾಡಿಕೊಳ್ಳು ತ್ತಾರೆಯೇ ?' ಎಂದೆ. ಅದಕ್ಕವಳು 'ನಮ್ಮ ಪಾರ್ಟಿಯಲ್ಲಿ ಸತ್ಯಕ್ಕಿಂತ ಶಿಸ್ತಿಗೆ ಹೆಚ್ಚು ಬೆಲೆ,' ಎಂತ ಕಣ್ಣೀರು ಒರೆಸಿಕೊಂಡು ಹೋದಳು. ತನ್ನ ಸಂಸಾರ ಒಡೆದುದಕ್ಕಿಂತ ಪಾರ್ಟಿ ಹೀಗಾದುದಕ್ಕೆ ಹೆಚ್ಚು ದುಃಖವಾಗಿತ್ತು ಅವಳಿಗೆ."

"ಪಾಪ!" – ಪ್ರಭಾವತಿ ಶಾಲಿನಿಯ ವ್ಯಥೆಗಾಗಿ ಪರಿತಾಪಪಟ್ಟು ಹೇಳಿದಳು.

"ಅವರಿವರಿಗೆ ಅಯ್ಯೋ ಪಾಪ ಅನ್ನುವುದಿರಲಿ, ಪ್ರಭಾ, ಈಗ ನನಗೆ ನಾನೇ 'ಅಯ್ಯೋ ಪಾಪ' ಎಂದುಕೊಳ್ಳಬೇಕಾಗಿದೆ. ನಿನ್ನದು ಹೀಗಾಯಿತು, ಶಾಲಿನಿಯದು ಹಾಗಾಯಿತು—ಎಲ್ಲರಿಗೂ ಈ ವಿಫಲತೆ, ನಿರಾಶೆಯ ಗರ ಬಡಿಯಬೇಕೇ ?"

"ಹೋಗಲಿ, ನೀನೊಬ್ಬಳಾದರೂ ಇದೀಯಲ್ಲ ನಮ್ಮ ಪಾಲಿಗೆ– ಕತ್ತಲಲ್ಲಿ ದೀಪದಂತೆ."

"ನಾನೇ, ನಾನೇ, ನನ್ನ ವ್ಯಥೆ ನೀನು ಕಾಣೆ ಪ್ರಭಾ. ಎದೆ ಬಿರಿದು ಹೋಗುವಷ್ಟು ವ್ಯಥೆ ಇದೆ ನನಗೆ."

"ಆ !" – ಲೀಲಾವತಿಯ ಮಾತು ಕೇಳಿ ಸಿಡಿಲು ಬಡಿದಂತೆ ಕೇಳಿದಳು ಪ್ರಭಾವತಿ –

"ಲೀಲಾ ನಿನಗೇನು ? ಸದಾನಂದ್....?"

"ಊಹೂ. ಅದಲ್ಲ. ಆ ದುಃಖವೇ ಇಲ್ಲ ನನಗೆ."

"ಹಾಗಾದರೆ ಮತ್ತೇನು ?"

"ನೀನು ಅವತ್ತು ನನ್ನ 'ನೀನು ನನ್ನ ತಾಯಿ' ಎಂದು ಕರೆಯಲಿಲ್ಲವೇ, ಶಾಲಿನಿಯೂ ಒಂದು ದಿನ ಹಾಗೇ ಕರೆದಿದ್ದಳು. ಜೀವನದಲ್ಲಿ ನನಗಿದ್ದು ದೊಂದೇ ಕೊರತೆ – ಮಕ್ಕಳಿಲ್ಲದ್ದು. ನಿಮ್ಮಿಬ್ಬರಿಂದ ಅದು ತೀರಿತು ಎಂದಿದ್ದೆ. ಆದರೆ ನಿಮ್ಮಿಬ್ಬರದೂ ಹೀಗಾಯಿತು. ಇನ್ನೇನು ಸುಖ ಪಡಲಿ ಹೇಳು. ದೇವರು ನನಗೆ ಮಕ್ಕಳ ಭಾಗ್ಯ ಕೊಡಲಿಲ್ಲ ನಿಜ, ಆದರೆ ನನ್ನ ಮಕ್ಕಳು ಎಂದುಕೊಂಡವರಿಗೂ ಸುಖ ಕೊಡಲಿಲ್ಲ."

"ನಮ್ಮ ಮೇಲೆ ನಿನಗಷ್ಟು ಪ್ರೀತಿಯೇ ? ನಮ್ಮ ತಾಯಿ ಎಂದುಕೊಳ್ಳು ವುದು ನಿನಗಷ್ಟು ಪ್ರಿಯವೇ ?"

"ಹೂ ಪ್ರಭಾ. ನನ್ನ ದೃಷ್ಟಿಯಲ್ಲಿ ಹೆಣ್ಣು ಎಂದರೆ – ಮಗಳಲ್ಲ, ತಂಗಿ

ಯಲ್ಲ, ಹೆಂಡತಿಯಲ್ಲ – ತಾಯಿ. ಅದಕ್ಕಿಂತಲೂ ಹೆಚ್ಚಿನ ಭಾಗ್ಯ ಬೇರೆ ಇಲ್ಲವೇ ಇಲ್ಲ."

"ನಿಜವಾಗಿಯೂ ?"

"ಅಲ್ಲವೇ ನೀನು ಹೇಳು ಪ್ರಭಾ – ಜಗತ್ತಿನಲ್ಲಿ ದುಡಿಯುವುದು, ಆಳುವುದು, ಕೊಲ್ಲುವುದು, ಸಾಯುವುದು ಇದೆಲ್ಲಕ್ಕಿಂತಲೂ ಕಟ್ಟಿ ಕಾಪಾಡಿ ಸಲಹಿ ಬೆಳೆಸುವ ಭಾಗ್ಯ ದೊಡ್ಡದಲ್ಲವೇ ?"

"ಅಂದರೆ ಹೆಣ್ಣು – ಹೆರುವ ಯಂತ್ರವಾಗಬೇಕೆಂದೇ ನಿನ್ನ ಮನೋಭಾವ ?" – ಆಶ್ಚರ್ಯದಿಂದ ಕೇಳಿದಳು ಪ್ರಭಾವತಿ.

"ಹಾಗಲ್ಲ. ನೀನು ನನ್ನ ಮಾತನ್ನು ಹೇಗೆ ಅರ್ಥಮಾಡಿಕೊಂಡೆ ಎಂದು ನಾನು ಬಲ್ಲೆ. ಇದರಿಂದಾಗೇ ಗಂಡು ಹೆಣ್ಣನ್ನು ಗುಲಾಮಳನ್ನಾಗಿ ಮಾಡಿಕೊಂಡಿದಾನೆ ಎಂದಲ್ಲವೇ ? ನನ್ನ ಭಾವನೆ ಹಾಗಲ್ಲ. ಹೆಣ್ಣು, ತನ್ನ ಹೊಟ್ಟೆಯಲ್ಲಿ ಹುಟ್ಟಿದುದನ್ನೇ ಅಲ್ಲ, ಕೈ ಹಿಡಿದುದನ್ನೂ ತಾಯಿಯಂತೆ ನೋಡಬೇಕು. ಆಗ ಈ ವಿರಸಕ್ಕೆಲ್ಲಾ ಕಾರಣವಿರುವುದಿಲ್ಲ. ಒಂದು ವೇಳೆ ತನಗೆ ಮಕ್ಕಳಿಲ್ಲವಾದರೆ ಸುತ್ತಮುತ್ತಲಿನ ಜನ ತನ್ನ ಮಕ್ಕಳಿದ್ದ ಹಾಗೆ ಎಂದು ಮಮತೆಯಿಂದ ನೋಡಬೇಕು. ತಾಯಿ ಮಕ್ಕಳಿಗೆ ದುಡಿದ ಹಾಗೆ ಅವರಿಗೆ ದುಡಿಯಬೇಕು, ಹಾಗೆ ಪ್ರೀತಿಸಬೇಕು, ಹಾಗೆ ಆಳಬೇಕು. ನಾನು ಹಾಗಿರಬೇಕೆಂದು ಎಂದುಕೊಂಡೆ."

"ಸದಾನಂದರೊಂದಿಗೆ ನೀನು ಹಾಗೇ ಇದೀಯಾ ?"

"ಹೊ. ಅದಕ್ಕೇ ನನಗೆ ಆ ದುಃಖವಿಲ್ಲ ಎಂದದ್ದು. ಆದರೆ ಅಷ್ಟೇ ಸುಖವಾಯಿತು. ನೀವು ಸುಖವಾಗಿರುವುದನ್ನು ನೋಡುವುದನ್ನೂ ದೇವರು ಬರೆಯಲಿಲ್ಲ....ಹೋಗಲಿ ಬಿಡು. ನನ್ನೆಲ್ಲರದೂ ಹೀಗೇ ಆಯಿತು. ಸದ್ಯ ಫ್ಲೋರಾ ಒಬ್ಬಳು ಸುಖವಾಗಿದಾಳೆ. ನೀವಿಬ್ಬರೂ ಜೀವಂತರಾಗಿ ನನ್ನ ಕಣ್ಣೆದಿರು ಇದೀರ. ಅಷ್ಟು ಸಾಕು."

"ಅಂದ ಹಾಗೆ, ಗಂಟೆ ಐದೂಮುಕ್ಕಾಲಾಯಿತು, ಫ್ಲೋರಾ ಇನ್ನೂ ಬರಲೇ ಇಲ್ಲ. ಏಕೆ ತಡಮಾಡಿದಳೋ ಕಾಣೆ."

"ಬರಬಹುದು, ಇನ್ನೂ ಸ್ವಲ್ಪ ಹೊತ್ತು ಕಾದು ನೋಡೋಣ."

ಏಳು ಗಂಟೆಯವರೆಗೆ ಕಾದರೂ ಫ್ಲೋರಾ ಬರಲಿಲ್ಲ.

"ಏಕೋ, ಏನಾಯಿತೋ" ಎಂದು ಆತಂಕಪಡುತ್ತಲೇ ಮನೆಗೆ ಹಿಂದಿರುಗಿದರು.

೩೫

ಫ್ಲೋರಾ ಹೋಟಲಿಗೆ ಆ ದಿನ ಬರಲಿಲ್ಲವಷ್ಟೇ ಅಲ್ಲ, ಒಂದೆರಡು ದಿನ ಕಾಣಿಸಲೇ ಇಲ್ಲ.

ಮನೆಗೆ ಬರಲಿಲ್ಲ, ಅವಳ ಆಫೀಸಿಗೆ ಫೋನ್ ಮಾಡಿದರೆ ಅಲ್ಲೂ ಸಿಗಲಿಲ್ಲ.

ಮೂರನೆಯ ದಿನ ರಾತ್ರಿ ಬಂದಳು; ಆದರೆ ಬಂದಾಗ ಅವಳ ಮುಖ ನೋಡುವಂತಿರಲಿಲ್ಲ – ಬಂದವಳು ಫ್ಲೋರಾ ಅಲ್ಲ, ಫ್ಲೋರಾ ಪ್ರೇತ ಎನ್ನುವ ಹಾಗಿದ್ದಳು. ಅಷ್ಟು ಅಸ್ತವ್ಯಸ್ತವಾಗಿದ್ದುವು ಅವಳ ಮುಖ, ಕಣ್ಣು, ಕೂದಲು, ಬಟ್ಟೆ. ಬೆಂಕಿಯಲ್ಲಿ ಬಾಡಿಸಿ ತೆಗೆದಂತಿತ್ತು ಅವಳ ಮುಖ.

"ಫ್ಲೋರಾ, ಫ್ಲೋರಾ – ನಿನಗೇನಾಯಿತು, ಎಲ್ಲಿ ಹೋಗಿದ್ದೆ ?"

ತನ್ನೆದೆಯನ್ನು ಹಿಂಡುವ ಕಾತರವನ್ನು ತಡೆಯಲಾರದೆ ಕೇಳಿದಳು ಪ್ರಭಾ.

ಫ್ಲೋರಾ ಆ ಮಾತಿಗೆ ಉತ್ತರ ಕೊಡದೆ, ಅಡಿಗೆಮನೆಯ ಗೂಡಿನಲ್ಲಿಟ್ಟ ವೈನ್ ಬಾಟಲು ತೆಗೆದು, ಅರ್ಧ ಗ್ಲಾಸಿನಷ್ಟು ಬಗ್ಗಿಸಿಕೊಂಡು ಗಟಗಟ ಹೀರಿ, ಮತ್ತಷ್ಟನ್ನು ಗ್ಲಾಸಿಗೆ ಬಗ್ಗಿಸಿಕೊಂಡಳು.

"ಫ್ಲೋರಾ – ನಿನಗೇನಾಗಿದೆ. ಹೀಗೇಕೆ ಕುಡಿಯುತ್ತೀಯ ?" – ಎಂದು ಪ್ರಭಾವತಿ ಕುಡಿಯಲು ಗ್ಲಾಸನ್ನು ಹಿಡಿದು ಎತ್ತಿದ ಕೈ ತಡೆದು ಕೇಳಿದಳು.

"ಪ್ಲೀಸ್ ಡೋಂಟ್ ಬಾದರ್ ಮಿ." (ದಯವಿಟ್ಟು ತೊಂದರೆ ಕೊಡಬೇಡ) ಎಂದು, ತನ್ನ ಕೈಚೀಲದಲ್ಲಿದ್ದ 'ಟೈಮ್ಸ್ ಆಫ್ ಇಂಡಿಯಾ' ಪೇಪರನ್ನು ಪ್ರಭಾವತಿಯ ಮುಂದೆ ಚೆಲ್ಲಿ, "ಅದನ್ನೋದಿದುದಾದ ಮೇಲೆ ದೀಪ ಆರಿಸಿಬಿಡು," ಎಂದು ಹೇಳಿ, ಹಾಕಿದ ಬೂಟನ್ನು ತೆಗೆಯದೆ, ರಗ್ಗು ಮುಸುಕು ಹಾಕಿಕೊಂಡು ಮಲಗಿದಳು.

ಪ್ರಭಾವತಿ ಪೇಪರನ್ನು ಬಿಡಿಸಿ ನೋಡಿದಳು. ಮೂರು ದಿನದ ಹಿಂದಿನ ಪತ್ರಿಕೆ. ಮೊದಲ ಪುಟದಲ್ಲೇನೂ ಕಾಣಲಿಲ್ಲ – ಬರೀ ಮಾಮೂಲು ಸುದ್ದಿ. ಎರಡನೆಯ ಪುಟದಲ್ಲೂ ಅದೇ. ಮೂರನೆಯ ಪುಟದಲ್ಲಿ ಒಂದು ಸುದ್ದಿಯ ಸುತ್ತ ಮಸಿಯ ಗೆರೆ ಎಳೆದಿತ್ತು. ಅದರ ಮೇಲೆ ಆ ಸುದ್ದಿಯನ್ನು ಚುಂಬಿಸಿದುದಕ್ಕೆ ಸಾಕ್ಷಿಯಾಗಿ ತುಟಿಗೆಂಪಿನ ತುಟಿ ಮುದ್ರೆಯಿತ್ತು.... ಸಣ್ಣ ಸುದ್ದಿ ಅದು. ಅದರಲ್ಲಿದ್ದುದಿಷ್ಟೇ –

"ಈ ದಿನ ಮಧ್ಯಾಹ್ನ ಕೊಲಾಬಾದ 'ಗ್ರಾಂಡ್ ಹೋಟಲಿ'ನ ೧೬ನೇ ನಂ. ರೂಮಿನಲ್ಲಿ ವಾಸವಾಗಿದ್ದ ಲಿಯೋನಾರ್ಡ್ ಫ್ರಾಂಕ್ ಎಂಬ ಆಂಗ್ಲೊ-ಇಂಡಿಯನ್ ಯುವಕನೊಬ್ಬ, ವಿಷಪ್ರಾಶನದಿಂದ ಆತ್ಮಹತ್ಯ ಮಾಡಿಕೊಂಡು ಸತ್ತದ್ದು, ಎರಡು ದಿನದಿಂದಲೂ ಬಾಗಿಲು ತೆಗೆಯದ ಅವನ ಕೋಣೆಯ ಬಾಗಿಲನ್ನು ಹೋಟಲಿನ ಆಡಳಿತ ವರ್ಗದವರು ಅನುಮಾನದಿಂದ ಒಡೆದು ತೆಗೆದಾಗ ತಿಳಿದುಬಂದಿತು. ಮೃತನ ಪಕ್ಕದಲ್ಲಿದ್ದ ಖಾಲಿ ಗ್ಲಾಸಿನ ಬದಿಯಲ್ಲಿ 'ನೀನಿಲ್ಲದೆ ಇಲ್ಲಿರಲಾರೆ-ಸ್ವರ್ಗದಲ್ಲಾದರೂ ನಿನ್ನನ್ನು ಸೇರುವಾಸೆ ಇದೆ-ಪ್ರಿಯತಮೆ. ಅಲ್ಲೂ ನಿನ್ನ ಚುಂಬನ ಪಿಪಾಸೆ—ಲಿಯಾನ್' ಎಂದು ಬರೆದಿದ್ದ ಕಾಗದವಿದ್ದುದರಿಂದ, ಪ್ರಣಯ ನಿರಾಶೆಯಿಂದ ಇವರು ಆತ್ಮಹತ್ಯ ಮಾಡಿಕೊಂಡಿರಬಹುದೆಂದು ಊಹಿಸಲಾಗಿದೆ. ಪೋಲೀಸರು ಈ ಬಗ್ಗೆ ಹೆಚ್ಚಿನ ತನಿಖೆ ಮಾಡುತ್ತಿದಾರೆ."

ಆ ಸುದ್ದಿಯನ್ನೋದಿ ಪ್ರಭಾವತಿ ದಿಗ್ಭ್ರಾಂತಳಾದಳು.

ಲಿಯೋನಾರ್ಡ್ ಫ್ರಾಂಕ್ – ಫ್ಲೋರಾ.

ಫ್ಲೋರಾನೇ ಅವನ ಆ ಪ್ರಿಯತಮೆ. ಸ್ವರ್ಗದಲ್ಲಿ ಇವಳ ಚುಂಬನ ಬಯಸಿ ಅವನ ಸಾವೇ?

ಒಂದು ದಿನವಾದರೂ ಅವನ ಹೆಸರನ್ನೇ ಹೇಳಿರಲಿಲ್ಲವಲ್ಲ ಫ್ಲೋರಾ?

ಸಾವಿರ ಪ್ರಶ್ನೆ ಅವಳನ್ನು ಕಿತ್ತು ತಿನ್ನುತ್ತಿದ್ದವು. ಆದರೆ ಫ್ಲೋರಾ ಅದಾವುದಕ್ಕೂ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ.

ಅವಳು ಬಂದ ರೀತಿಯನ್ನು ನೋಡಿದ ಪ್ರಭಾವತಿಗೆ ಮಲಗಿದ ಫ್ಲೋರಾಳನ್ನು ಎಬ್ಬಿಸಿ ಕೇಳಲೂ ಧೈರ್ಯವಾಗಲಿಲ್ಲ.

"ಹಗಲಾಗಲಿ" ಎಂದುಕೊಂಡು ದೀಪವಾರಿಸಿ ಮಲಗಿದಳು.

ಹಗಲಾಯಿತು,

ಹಗಲು ಪ್ರಭಾವತಿ ಏಳುವ ಮೊದಲೇ ಫ್ಲೋರಾ ಎದ್ದು ಕುಳಿತಿದ್ದಳು. ಸಿಗರೇಟಿನ ಹೊಗೆಯುಗುಳುವ ಮೋರೆ, ಬಿರುಗಾಳಿಯ ನಂತರದ ಬಯಲಿನಂತಿತ್ತು.

"ರಾತ್ರಿ ಒರಟಾಗಿ ಮಾತನಾಡಿದ್ದಕ್ಕೆ ಕ್ಷಮಿಸು ಪ್ರಭಾ" – ದುಃಖದಿಂದ ಭಾರವಾಗಿ, ಅತಿ ಮದ್ಯಪಾನದಿಂದ ಒರಟಾಗಿದ್ದ ಧ್ವನಿಯಲ್ಲಿ ಹೇಳಿದಳು ಫ್ಲೋರಾ.

"ಫ್ಲೋರಾ – ನಿನಗೆ ಏನಾಗಿತ್ತು, ಎರಡು ದಿನದಿಂದ ಎಲ್ಲಿ ಹೋಗಿದ್ದೆ? ಆ ಪೇಪರಿನಲ್ಲಿದ್ದುದಕ್ಕೂ ನಿನಗೂ ಏನು ಸಂಬಂಧ?" -- ತನ್ನ ಆತುರ ತಡೆಯುಲಾರದೆ ಪ್ರಭಾವತಿ ಸಾಲುಸಾಲಾಗಿ ಪ್ರಶ್ನೆ ಹಾಕಿದಳು.

"ಮೊದಲು ಟೀ ಮುಗಿಸು, ನಂತರ ಉಳಿದದ್ದು."–ಫ್ಲೋರಾ ಹೇಳಿದಳು.

"ಟೀ ಹಾಳಾಗಿ ಹೋಗಲಿ, ಎಲ್ಲಕ್ಕೂ ಮೊದಲು ಹೊಟ್ಟೆಯ ಯೋಚನೆಯೇ?"

"ನಿಜ ಪ್ರಭಾ – ಎಲ್ಲಕ್ಕೂ ಮೊದಲು ಹೊಟ್ಟೆಯ ಯೋಚನೆ. ಅದೇ ಮುಖ್ಯ. ಆ ನಂಬಿಕೆ ನನಗಿರದೆ ಹೋಗಿದ್ದಿದ್ದರೆ, ಇವತ್ತು ನೀನು ನನ್ನನ್ನು ಕಾಣದೆ. ಪೇಪರಿನಲ್ಲಿ ನನ್ನ ಸಾವಿನ ಸುದ್ದಿಯನ್ನೋದುತ್ತಿದ್ದೆ" – ಎಂದಳು ಫ್ಲೋರಾ ಕರ್ಕಶವಾಗಿ.

"ಫ್ಲೋರಾ, ಪ್ಲೀಸ್. ಅದುದೇನು ಹೇಳು."

"ಏನೇ....ಏನೇ—ಏನು ಹೇಳಲಿ. ನನ್ನ ಬಾಳಿನ ಉತ್ಸಾಹವನ್ನು ಮುರಿದುಬಿಟ್ಟ ಹಾಳು ಲಿಯಾನ್" – ದುಃಖವೇ ಕ್ರೋಧವಾಗಿ ಉರಿದಂತೆ ಹೇಳಿದಳು ಫ್ಲೋರಾ. ಉರಿಯ ನಾಲಿಗೆಯಂತೆ ಕಂಪಿಸುತ್ತಿತ್ತು ಅವಳ ಮಾತು.

"ನಾನು ಅವನನ್ನು ಪ್ರೀತಿಸುತ್ತಿರಲಿಲ್ಲ ಪ್ರಭಾ, ಕ್ರೈಸ್ತನಾಣೆ ಎಂದೂ ಪ್ರೀತಿಸಲಿಲ್ಲ. ಅವನೇ ಪ್ರೀತಿಸು, ಪ್ರೀತಿಸು ಎಂದು ಬೆನ್ನು ಬಿದ್ದಿದ್ದ. ನಾನು ಅವನನ್ನು ಪ್ರೀತಿಸಲಿಲ್ಲ. ಪ್ರೇಮ, ಪ್ರೀತಿ ಎನ್ನುವುದರಲ್ಲಿ ನನಗೆ ನಂಬಿಕೆಯೂ ಇರಲಿಲ್ಲ. ಆದರೆ ಅವನೇ 'ನಿನ್ನನ್ನು ನಾನು ಪ್ರೀತಿಸುತ್ತೇನೆ, ನೀನು ನನ್ನನ್ನು ಪ್ರೀತಿಸು' ಎಂದು ದುಂಬಾಲು ಬಿದ್ದ. ಎಲ್ಲರ ಹಾಗೇ ಅವನಿಗೂ ನನ್ನ ಮೈಯ ಬಯಕೆ ಎಂದುಕೊಂಡು, 'ಹಾಳಾಗಿ ಹೋಗಲಿ ಪೀಡೆ. ಎಷ್ಟೋ ಜನರದಾಯಿತು. ಇವನದೇನು?' ಎಂದು ನನ್ನ ಮೈ ಒಪ್ಪಿಸುವುದಾಗಿ ಹೇಳಿದೆ. ಆದರೆ ಆ ಚಂಡಾಲ 'ನಿನ್ನ ಮೈಗೆ ಮೊದಲು ನಿನ್ನ ಹೃದಯ ಬೇಕು' ಎಂದ. 'ನನ್ನಲ್ಲಿ ಹೃದಯವಿಲ್ಲ. ನನ್ನಲ್ಲಿರುವುದು ಬರೀ ಮೈ. ಇಲ್ಲದುದನ್ನು ಕೊಡಲು ಕೇಳಬೇಡ. ನಿರಾಶೆ ಉತ್ತರವಾಗುತ್ತದೆ' ಎಂದೆ. ಅವನು ನನ್ನನ್ನು ನಂಬಲಿಲ್ಲ. ದಿನಕ್ಕೊಂದು ಕಾಗದ ಬರೆಯುತ್ತಿದ್ದ – 'ನಿನಗಾಗಿ ನಾನು ಬದುಕುತ್ತೇನೆ, ನಿನಗಾಗಿ ನಾನು ಸಾಯುತ್ತೇನೆ, ತಾರೆಗಳ ಹೂ ಮುಡಿಸುತ್ತೇನೆ, ಹೂವಿನ ಹಾಸಿಗೆ ಹಾಸುತ್ತೇನೆ, ಚಂದ್ರನ ತೇರು ತರುತ್ತೇನೆ' ಈ ಪ್ರಣಯ ಮೂರ್ಖರು ಕಾಗದ ಬರೆವ ರೀತಿ ನಿನಗೆ ಗೊತ್ತಲ್ಲ, ನಿಘಂಟಿನಲ್ಲಿ

ರುವ ಶಬ್ದಗಳೆಲ್ಲಾ ಪ್ರೇಮದ ಪರ್ಯಾಯ ಶಬ್ದಗಳೆಂದು ಬಳಸುವುದಿಲ್ಲವೆ – ಹಾಗೇ ಇವನೂ ಬರೆಯುತ್ತಿದ್ದ...."

"ಆ ಕಾಗದಗಳೆಲ್ಲಾ ಎಲ್ಲಿ ?"

"ಸಿಗರೇಟು ಸೇದಲು ಕಡ್ಡಿ ಕೊರೆದಾಗ, ಅವಕ್ಕೂ ಬೆಂಕಿ ಕೊಟ್ಟೆ. ಹಾಗೆ ಮಾಡಿದುದೇ ಒಳ್ಳೆಯದಾಯಿತು. ಈಗ ಆ ಮನಸ್ಸಿರುತ್ತಿರಲಿಲ್ಲ."

"ಮುಂದೆ ?"

"ಮುಂದೇನು – ಹಿಂದೇನು ಒಂದೇ – 'ನಿನ್ನ ಹೃದಯದಲ್ಲಿ ನನಗೆ ಸ್ಥಾನ ಕೊಡು. ದೂರ ಮಾಡಬೇಡ.' ಅದೇ ಹಾಡು. ನಾನು ಹೋದ ಪಾರ್ಟಿಗಳಿಗೆಲ್ಲಾ ಹೇಗಾದರೂ ಬಂದು ಕಾಡುತ್ತಿದ್ದ. ಕಡೆಗೊಂದು ದಿನ ಖಚಿತವಾಗಿ ಹೇಳಿದೆ – 'ನನಗೆ ಹೃದಯವಿಲ್ಲ, ಈ ಜನ್ಮದಲ್ಲಿ ಅದಾರಿಗೂ ದೊರೆಯುವುದಿಲ್ಲ' ಎಂತ. ಒಂದು ದಿನ ವಿಚಿತ್ರವಾಗಿ 'ಮುಂದಿನ ಜನ್ಮಕ್ಕಾದರೂ ನನ್ನವಳಾಗುತ್ತೀಯ ಎಂದ ಶತಮೂರ್ಖ. 'ಈ ಜನ್ಮ ಕಳೆಯಲಿ, ಆಮೇಲೆ ಮುಂದಿನ ಮಾತು.' ಎಂದು ಅವನ ಇದುರಾಗಿಯೇ ಇನ್ನೊಬ್ಬನೊಂದಿಗೆ ಹೋದೆ, ಹಾಗಾದರೂ ನನ್ನ ಬೆನ್ನು ಬಿಡಲಿ ಎಂದು. ಅದು ನಡೆದದ್ದು ಒಂದು ವಾರದ ಹಿಂದೆ. ಲೀಲಾ ಫೋನ್ ಮಾಡಿದ್ದಳಲ್ಲಾ ಅವತ್ತು ಆಫೀಸಿನಿಂದ ಬರುವಾಗ ಎಂದಿನಂತೆ ಟೈಮ್ಸ್ ತೆಗೆದುಕೊಂಡೆ. ಹಾಗೇ ತಿರುವಿ ಹಾಕುವಾಗ ಅಕಸ್ಮಾತ್ತಾಗಿ ಇದು ಕಣ್ಣಿಗೆ ಬಿತ್ತು...."

"ಆಮೇಲೆ ?" ಉಸಿರು ಹಿಡಿದಂತೆ ಕೇಳಿದಳು ಪ್ರಭಾವತಿ.

"ಹಾಳಾದವನು – ಇದ್ದಾಗ ನನ್ನನ್ನು ಕಾಡಿಸಿದ, ಸತ್ತು ಗೋಳಾಡಿಸಿದ. ಆ ಸುದ್ದಿ ಓದಿ ನನಗೆ ಹುಚ್ಚು ಹಿಡಿದಂತಾಗಿತ್ತು ಪ್ರಭಾ. ಆ 'ಪ್ರೇಮ' ಎನ್ನುವುದಕ್ಕೆ ಸಾಯುತ್ತಾರೆ ಎಂದು ಕೇಳಿದ್ದೆ. ಆದರೆ ಲಿಯಾನ್ ನನಗಾಗಿ ಸತ್ತಿದ್ದ. ಅದನ್ನು ಓದಿ ಸಿಡಿಲು ಬಡಿದಂತಾಯಿತು. ನಾನು ಜಗತ್ತಿನಲ್ಲಿ ಇದು ಸರಿ ಎಂದು ನಂಬಿದ್ದ ನಂಬಿಕೆಗಳೆಲ್ಲಾ ಬಿರುಗಾಳಿಗೆ ಸಿಕ್ಕಿ ಚುಕ್ಕಾ ಚೂರಾಗಿ ಓಡುವ ಮೋಡವಾದಂತಾದವು. ಅವನ ಪ್ರೀತಿಯ ಆಳವನ್ನರಿತು ಕರುಳುರಿಯಿತು. ಬೆಂಕಿಯ ಮೇಲೆ ಹೊರಳಿಸಿದಂತಾಯಿತು. ಜೀವನದಲ್ಲಿ ನಾನು ಎಂದೂ ಅನುಭವಿಸದ ವಿಚಿತ್ರ ಭಾವನೆಗಳ ತಾಂಡವದಲ್ಲಿ ಹಣ್ಣಾಗಿ ಹೋದೆ. ಸಿಗರೇಟು ಸೇದಿದೆ, ಕುಡಿದೆ, ಎಷ್ಟು ಕುಡಿದರೂ ನನ್ನೊಳಗಿನ ಬೆಂಕಿ ಆರಲಿಲ್ಲ. ಥೂ ಹಾಳು ಬಾಳು, ಇದೇಕೆ ಎಂದುಕೊಂಡು ಪ್ರಾಣ ಕಳೆದುಕೊಳ್ಳಬೇಕೆಂದು ಕಡಲ ತಡಿಗೆ ಹೋದೆ...."

" ಆ !"

" ಹೆದರಬೇಡ ಪ್ರಭಾ - ನಾನು ಬಿದ್ದು ಪ್ರಾಣ ಕಳೆದುಕೊಳ್ಳಲಿಲ್ಲ, ಬದುಕಿ ಬಂದೆ."

" ಹೇಗೆ ?"

" ಲಿಯಾನ್ ಸ್ವರ್ಗದಲ್ಲಿ ನನಗಾಗಿ ಕಾದಿರುವನೆಂಬುದು ನೆನಪಾಗಿ ಅಲ್ಲಿಗೆ ಹೋಗಲು ಹೆದರಿಕೆಯಾಯಿತು."

" ಏಕೆ ಫ್ಲೋರಾ ?

" ನನಗೆ ಬೇಕಾಗಿರುವುದು ಪುರುಷನ ಪ್ರೇಮವಲ್ಲ, ಪುರುಷನ ಮೇಲೆ ಪ್ರತೀಕಾರ. ಸ್ವರ್ಗಕ್ಕೆ ಹೋದರೂ ಸಾಧಿಸುವುದು ಅದೇ."

" ಅಲ್ಲಿಗೂ ಈ ದ್ವೇಷ ಕೊಂಡೊಯ್ಯಬೇಕೇ ?"

" ಬೇಡವೇ? ಅಲ್ಲಿಗೆ ಬರುವವರೆಲ್ಲರೂ ಇಲ್ಲಿರುವವರೇ ತಾನೇ. ಅಲ್ಲೂ ಈ ಪುರುಷರನ್ನು ನಾನು ಪ್ರೀತಿಸಲಾರೆ."

" ಹಾಗಾದರೆ ನೀನು ಯಾರನ್ನೂ ಪ್ರೀತಿಸುವುದೇ ಇಲ್ಲವೇ ?"

" ಪ್ರೀತಿಸುತ್ತೇನೆ - ಒಬ್ಬನೇ ಒಬ್ಬನನ್ನು."

" ಯಾರು ಅವರು ?" - ಆಶ್ಚರ್ಯದಿಂದ ಕೇಳಿದಳು, ಪ್ರಭಾವತಿ.

" ಯೇಸುಸ್ವಾಮಿ !"

ಆ ಉತ್ತರ ಕೇಳಿ ಮೊದಲೇ ಚಕಿತಳಾದ ಪ್ರಭಾವತಿ ಮತ್ತಷ್ಟು ಚಕಿತಳಾದಳು.

" ಫ್ಲೋರಾ - ನೀನು - ಯೇಸು !"

" ಹೌ, ಪ್ರಭಾ, ಯೇಸು. ಏಕೆ ಆಶ್ಚರ್ಯವೇ ? ಅವನು ನನ್ನನ್ನು ಪ್ರೀತಿಸುತ್ತಾನೆ, ನಾನು ಅವನನ್ನು ಪ್ರೀತಿಸುತ್ತೇನೆ. ಏಸು ಹುಟ್ಟಿದ್ದು ತಮಗಾಗಿ ಎಂದುಕೊಂಡಿದ್ದಾರೆ ಈ ಪಾದ್ರಿಗಳು, ಚರ್ಚಿನಲ್ಲಿ ಅವನಿದಾನೆ ಎನ್ನುತ್ತಾರೆ. ಅದು ಸುಳ್ಳು ಪ್ರಭಾ - ಏಸು ಹುಟ್ಟಿ, ಶಿಲುಬೆಯೇರಿದ್ದು ನನ್ನಂಥವಳಿಗಾಗಿ, ಅವನು ವಾಸವಾಗಿರುವುದು ನನ್ನ ಹೃದಯದಲ್ಲಿ. ಪಾದ್ರಿಗಳು ಕಂಡದ್ದು ಅವನ ನೆರಳು, ಚರ್ಚಿನಲ್ಲಿರುವುದು ಅವನ ಹೆಣ. ನಾನು ಪಾಪಿ, ಸುಳ್ಳಲ್ಲ. ಪ್ರಭು ನನ್ನಂಥ ಪಾಪಿಯ ಮೇಲೆ ಅನುಗ್ರಹ ಮಾಡುವುದು. ಮೇರಿ ಮ್ಯಾಗ್ಡಾಲೀನಳನ್ನು ಉದ್ಧರಿಸಿದ ಪ್ರಭು, ನನ್ನನ್ನು ಮರೆಯುವುದಿಲ್ಲ. ಪುಣ್ಯಾತ್ಮರು ಪ್ರಭುವನ್ನು ಹುಡುಕಿಕೊಂಡು ಹೋಗುತ್ತಾರೆ ಪ್ರಭಾ, ಆದರೆ ಪ್ರಭು ತಾನೇ ಪಾಪಿಗಳ ಬಳಿ ಬರುತ್ತಾನೆ. ಮಮತೆಯ ಮೂರ್ತಿ

ಆತ, ಪ್ರೀತಿಯು ಸಾಕಾರ ಸ್ವರೂಪ. ನನ್ನ ಮೈಯನ್ನು ಯಾವನು ಬೇಕಾದರೂ ಭೋಗಿಸಬಹುದು ಪ್ರಭಾ. ಪ್ರತೀಕಾರಕ್ಕಾಗಿ ನನಗೂ ಅದು ಬೇಕು. ಸ್ನೇಹ, ವಿಶ್ವಾಸ, ನಂಬಿಕೆ, ಆದರ, ಭೋಗ, ಬೇಕಾದುದನ್ನು ನಾನು ಇತರರಿಗೆ ಕೊಡಬಲ್ಲೆ, ಆದರೆ ನನ್ನ ಹೃದಯ, ಅದರೊಳಗಿರುವ ಪ್ರೇಮ ಏಸುವಿಗೆ ಮೀಸಲು. ಅದು ಇನ್ನಾರಿಗೂ ಸಿಗದು. ಹಾಳು ಲಿಯಾನ್ ಅದನ್ನೇ ಬಯಸಿ ಸತ್ತ....ಸಾಯಲಿ, ಇನ್ನಷ್ಟು ಜನ ಸಾಯಲಿ. ಎಷ್ಟೋ ಜನ ಹೆಂಗಸರ ಮೈಯನ್ನು ಆತ್ಮವನ್ನು ಕೊಂದ ಈ ಪುರುಷರಲ್ಲಿ ಅಷ್ಟು ಜನ ಹೆಂಗಸರಿಗಾಗಿ ಸತ್ತರೆ ಸಾಯಲಿ."

ಬೆತ್ತಲೆ ನಿಂತು ಧಗಧಗಿಸುವ ಶುದ್ಧ ಅಗ್ನಿಯನ್ನು ಕಂಡಂತಾಯಿತು ಪ್ರಭಾವತಿಗೆ–ಫ್ಲೋರಾಳ ಆ ಮಾತುಗಳನ್ನು ಕೇಳಿ.

"ಫ್ಲೋರಾ, ನಿನ್ನ ಈ ಮುಖವನ್ನು ನಾನರಿತಿರಲಿಲ್ಲ,"–ಎಂದಳು.

"ಮುಖ! ಮುಖವನ್ನು ಯಾರೂ ನೋಡುವುದೂ ಇಲ್ಲ, ಬಯಸುವುದೂ ಇಲ್ಲ. ಎಲ್ಲರೂ ಬೇಡುವುದು ಮೈ. ಅದಕ್ಕೇ ಮೊದಲು ಅದರ ಯೋಚನೆ ಮಾಡಬೇಕು ಎಂದದ್ದು. ನನ್ನ ಮಾತು ಕೇಳುತ್ತಾ ನಿಲ್ಲಬೇಡ–ಹೋಗು, ಆಫೀಸಿಗೆ ಹೊತ್ತಾಗುತ್ತದೆ. ಹೊರಡಲು ಸಿದ್ಧವಾಗು. ನಾನಾಗಲೇ ಸಿದ್ಧವಾಗಿ ಕುಳಿತಿದೇನೆ. ಎಲ್ಲಾದರೂ ಹೋಟಲಿನಲ್ಲಿ 'ಬ್ರೇಕ್‌ಫಾಸ್ಟ್' ತೀರಿಸೋಣ"–ಎಂದಳು ಫ್ಲೋರಾ.

ಆಫೀಸು.!

ಆ ಹೆಸರು ಕೇಳಿ ಹಾವು ಮೈ ಮೇಲೆ ಹರಿದಂತೆ ನಡುಗಿದಳು ಪ್ರಭಾವತಿ.

## ೩೬

ಆಫೀಸು!

ದಿನವೂ ಪ್ರಭಾವತಿ ಆಫೀಸಿಗೆ ಹೋಗುತ್ತಿದ್ದಳು, ಬರುತ್ತಿದ್ದಳು.

ರೈಲು, ರಸ್ತೆ, ಆಫೀಸು, ಲಿಫ್ಟ್, ಟೈಪ್‌ರೈಟರು, ಗಡಿಯಾರ, ಕ್ಯಾಲೆಂಡರು, ಟೆಲಿಫೋನ್—

................

ಲೀಲಾವತಿಗೆ ಮಾತು ಕೊಟ್ಟಂತೆ ಶಾಲಿನಿ ಪ್ರಭಾವತಿಗೆ ಫೋನ್ ಮಾಡಿದ್ದಳು.

"ಹಲೋ. ನಾನು ಶಾಲಿನಿ."

"ಹಲೋ, ನಾನು ಪ್ರಭಾ."

"ಪ್ರಭಾ, ಲೀಲಾವತಿಯಿಂದ ನಿನ್ನ ವಿಷಯವೆಲ್ಲವೂ ತಿಳಿಯಿತು."

"ಶಾಲಿನಿ, ಲೀಲಾ ನಿನ್ನ ಸಮಾಚಾರವೆಲ್ಲಾ ಹೇಳಿದಳು–ಅಂದ ಹಾಗೆ ನಿನ್ನ ಪಾರ್ಟಿಯ ಕಥೆ ಏನಾಯಿತು ?"

"ರಿಫಾರ್ಮಿಸ್ಟ್ ಅಂತ ತೆಗೆದುಹಾಕಿದರು."

"ಮುಂದೆ ?"

"ಮುಂದೆ–ನನ್ನ ರಾಜಕೀಯ ನಡತೆ ಸರಿಯೆಂದು ಕಂಡುಬಂದರೆ, ಮತ್ತೆ ಪಾರ್ಟಿ ಸದಸ್ಯತ್ವ ಕೊಡಬಹುದು ಎಂದಿದಾರೆ."

"ಏನು ಮಾಡುತ್ತೀ ?"

"ಅದಕ್ಕಾಗಿ, ಪಾರ್ಟಿ ಸದಸ್ಯತ್ವ ಪಡೆಯಲು ದುಡಿಯುತ್ತೇನೆ. ಅದು ನನ್ನ ಪಾಲಿಗೆ ಬರುತ್ತದೆ ಎಂಬ ನಂಬಿಕೆಯೂ ನನಗಿದೆ."

"ಆದರೆ ಅದರ ನೀತಿ ನಿನಗೆ ಒಪ್ಪಿಗೆಯಿಲ್ಲ ಎಂದಳು ಲೀಲಾ ?"

"ಹೂ. ಮುಂದೂ ಅದರ ನೀತಿ ಬದಲಾಗದಿದ್ದರೆ ಸದಸ್ಯತ್ವ ಕೊಡುತ್ತೇನೆಂದರೂ ಸೇರುವುದಿಲ್ಲ."

"ನೀತಿ ಬದಲಾಗಬೇಕು. ಹಾಗಂದರೇನು ಶಾಲಿನಿ ?"

"ರಷ್ಯಾ, ಚೀನಾಗಳ ಅನುಕರಣೆಯನ್ನು ಬಿಟ್ಟು, ಆ ದೇಶಗಳು ಮಾರ್ಕ್ಸ್ ಹೇಳಿದ ಸಮತಾವಾದವನ್ನು ತಮ್ಮ ದೇಶಕ್ಕೆ ಹೊಂದಿಸಿಕೊಂಡಂತೆ, ಆ ದೇಶಗಳ ಸಂಸ್ಕೃತಿ, ಸಂಪ್ರದಾಯಗಳ ಮಡಿಲಲ್ಲೇ ಮಾರ್ಕ್ಸ್‌ವಾದ ಸಮತಾವಾದದ ಹೂವಾಗಿ ಅರಳಿದಂತೆ, ನಮ್ಮ ದೇಶದಲ್ಲೂ ವೇದ, ಉಪನಿಷತ್ತು, ಗೀತೆ, ಬುದ್ಧ, ಶಂಕರ, ಗಾಂಧೀಜೀಯವರ ಬೋಧನೆಗಳ ಬೆಳಕಿನಲ್ಲಿ ಸಮತಾವಾದದ ಬೆಳಕು ಮೂಡಿಬಂದಾಗ ಪಾರ್ಟಿಗೆ ಸೇರುತ್ತೇನೆ."

"ಅದುವರೆಗೂ ?"

"ಪಾರ್ಟಿಯ ಹೊರಗಿದ್ದೂ ಸಮತಾವಾದಿಯಾಗಿರುತ್ತೇನೆ. ಸಮತಾವಾದಿಯಾಗಲು ಪಾರ್ಟಿ ಅಪ್ಪಣೆಯೇನೂ ಬೇಕಾಗಿಲ್ಲ."

"ನೀನು ಕಾಯುತ್ತಿರುವ ದಿನ ಬರುತ್ತದೆಯೇ ?"

"ಬರುತ್ತದೆ–ಭಾರತದಲ್ಲಿ ಕ್ರಾಂತಿಯಾಗುತ್ತದೆ."

"ಕ್ರಾಂತಿಯಾದರೆ ಹೆಣ್ಣಿನ ಬಿಡುಗಡೆಯಾಗುತ್ತದೆಯೇ ಶಾಲಿನಿ ?"

"ಖಂಡಿತ. ಕ್ರಾಂತಿ ತೊಡೆದುಹಾಕದ ಜಾಡ್ಯವಾವುದೂ ಇಲ್ಲ."

"ನಿನ್ನ ನಂಬಿಕೆ, ಶ್ರದ್ಧೆ ಬಹಳ ದೊಡ್ಡದು ಶಾಲಿನಿ."

"ನಂಬಿಕೆ, ಶ್ರದ್ಧೆ ಇಲ್ಲದೆ ಬದುಕುವುದೇ ಸಾಧ್ಯವಿಲ್ಲ ಪ್ರಭಾ. ಅದಿಲ್ಲದ ಬಾಳು, ಅಂಬಿಗನಿಲ್ಲದ ದೋಣಿ."

"ಲೀಲಾನೂ ಹಾಗೇ ಹೇಳುತ್ತಾಳೆ."

"ಲೀಲಾ....ಲೀಲಾ....ಈ ಜಗತ್ತು ಜಾಲಿಸಿದರೆ ಮತ್ತೊಂದು ಅಂಥ ಹೆಣ್ಣು ಸಿಗಲಾರದು ಪ್ರಭಾ. ನಮ್ಮ ಕ್ರಾಂತಿಯ ಉದ್ದೇಶ ಅಂಥ ಹೆಣ್ಣನ್ನು ಸೃಷ್ಟಿ ಮಾಡುವುದು. ಅವಳ ಹಾಗೆ ಬದುಕಿದ ಬಾಳು ಧನ್ಯ ಪ್ರಭಾ.... ಬರುತ್ತೇನೆ. ಮತ್ತೊಮ್ಮೆ ನಿನ್ನ ಆಫೀಸಿಗೆ ಬರುತ್ತೇನೆ. ನಿನ್ನನ್ನು ನೋಡಬೇಕೆಂಬ ಆಸೆ ನನಗಿದೆ."

"ನನಗೂ ಇದೆ. ಬೇಕಾದಾಗ ಬಾ ಶಾಲಿನಿ. ನಿನಗಾಗಿ ಕಾಯುತ್ತೇನೆ. ಚೀರ್ ಯು."

"ನಮಸ್ತೆ."

ಟೆಲಿಫೋನ್ ಟ್ರನ್ ಎಂದು ಸದ್ದು ಕತ್ತರಿಸಿತು.

................

ಅಂದಿನಿಂದ ಶಾಲಿನಿ, ಆಗಾಗ ಬರುತ್ತಿದ್ದವಳು–ಈಗ ಪ್ರತಿ ದಿನವೂ ಬರುತ್ತಾಳೆ.

ಫ್ಲೋರಾ, ಶಾಲಿನಿ, ಪ್ರಭಾವತಿ–ಮೂವರದೊಂದು ಜೊತೆ.

................

ದಿನವೂ ಪ್ರಭಾವತಿ ಆಫೀಸಿಗೆ ಹೋಗುತ್ತಿದ್ದಳು, ಬರುತ್ತಿದ್ದಳು.

ಹೋಗುತ್ತಿದ್ದಳು–ಬರುತ್ತಿದ್ದಳು....ಹೋಗುತ್ತಿದ್ದಳು ಬರುತ್ತಿದ್ದಳು.

ಹೋಗು ಬಾ–ಬಾ ಹೋಗು. ಬಾ....ಹೋ....ಹೋ....ೀೀೀ

ಾ ೀ – ಾ; ಾ – ಾ ೀ.

ಾ ಾ ಾ ಾ ೀ ೀ ೀ ೀ ೀ ಾ ಾ ಾ ಾ ಾ

೧

ಾ ಾ ಾ ಾ ಾ ಾ

ತೆರೆಯ ಹಿಂದೆ ತೆರೆಯುರುಳಿ ಜಾಗುತ್ತಿತ್ತು.

ಲೀಲಾವತಿಗೆ ತಾಯಿತನದ ಕನಸು, ಫ್ಲೋರಾಗೆ ಏಸುವಿನ ಅನುಗ್ರಹದ ಕನಸು, ಶಾಲಿನಿಗೆ ಸಮತಾವಾದದ ಕನಸು—

ತನಗೆ ?

ಯಾವ ಬಯಕೆ, ಯಾವ ಭರವಸೆ, ಏನು ಕನಸು ?

ಹರಿದ ಮಂಗಲಸೂತ್ರ, ಹೊಳಪಳಿದ ಮುದ್ರಿಕೆಯುಂಗುರ, ಕಂಡೂ
ಕಾಣಿಸದ ಕೆಂಪು ಬಾವುಟ....

ಅವರವರ ಹಾದಿಯಲ್ಲವರು ಬಿಡುಗಡೆಗೆ, ಹೆಣ್ಣಿನ ಬಿಡುಗಡೆಗೆ ದುಡಿಯು
ತ್ತಿದಾರೆ.

'ನಾನು ?'

ಏಳು-ಮಲಗು, ರೈಲು, ರಸ್ತೆ, ಆಫೀಸು, ಲಿಫ್ಟ್, ಟೈಪ್‌ರೈಟರು
ಗಡಿಯಾರ, ಕ್ಯಾಲೆಂಡರು, ಟೆಲಿಫೋನ್....

೧೦೦ : ೭೫ ಪ್ಲಸ್ ೨೫=೧೦೦.

'ನಾನು-ಬಿಡುಗಡೆ ಬಯಸಿ ಬಂದ ಹೆಣ್ಣು.'

'ಊಹೂ-ಟೈಪಿಸ್ಟ್-ಯಂತ್ರದ ಆಳಾದ ಮಾನವ ಯಂತ್ರ.'

ಮಗಳಲ್ಲ, ಮಡದಿಯಲ್ಲ, ತಾಯಿಯಲ್ಲ-ಪ್ರೇಮಿಯಲ್ಲ, ಕಾದಲಳಲ್ಲ-
ಏನೂ ಅಲ್ಲ. ಬರಿ 'ಅಲ್ಲ.'

ಬರೀ ಟೈಪಿಸ್ಟ್-ಬರೀ ೧೦೦ : ೭೫ ಪ್ಲಸ್ ೨೫=೧೦೦.

೦ ೦ ೦ ೦ ೦ ೦ ೦ ೦ ೦ ೦ ೦ ೦

ವೃತ್ತದಲ್ಲಿ ವೃತ್ತಾಕಾರವಾಗಿ ಸುತ್ತುವ ಪಶು; ಚಕ್ರಾಕಾರವಾಗಿ
ಹಾವಾಡಿಗನ ಬುಟ್ಟಿಯಲ್ಲಿ, ಚಕ್ರಾಕಾರವಾಗಿ ಸುತ್ತಿ, ಸುತ್ತಿ ಬಳಲಿ
ನೀಳವಾದ ಮೈಯನ್ನು ಸಿಂಬೆ ಸಿಂಬೆ ಸುತ್ತಿ, ಬಾಲದ ಮೇಲೇ, ನೀಳವಾಗಿ
ಮೊಗಚಾಚಿ, ಬುಸುಗುಟ್ಟುವ ಸರ್ಪ.

'ಇದೇನೇ ನಾ ಬಯಸಿದ ಬಿಡುಗಡೆ, ಇದೇನೇ ನಾನು ಹೋರಾಡಿ
ಪಡೆದ ಬಾಳು !'

ಟೈಪಿಸ್ಟ್, ಸ್ಟೆನೋಗ್ರಾಫರ್-ಎಂಥ ಬಿರುದು ನನ್ನ ಹೋರಾಟಕ್ಕೆ....

ತೆರೆಯ ಹಿಂದೆ ತೆರೆ ಬಂದು, ದಂಡೆಯನ್ನಪ್ಪಳಿಸುತ್ತಿದ್ದವು.

ಟೈಪ್‌ರೈಟರ್.

ಕೈ ಬೆರಳುಗಳೊತ್ತಿದಾಗ ತಕಪಕನೆ ಕುಣಿದೆದ್ದು, ಹಾರಿ ಬಿದ್ದು
ಕಾಗದಕ್ಕೆ ಮುತ್ತುಕೊಟ್ಟು ತೆರಳುವ 'ಕೀ'ಗಳು-ತೆರೆಗಳು.

ಕೀ-ತೆರೆ

ಕಡಲು–ಟೈಪ್‌ರೈಟರ್.

ಯಾರಿಗೆ ಕಾಗದ ಬರೆಯುತಿರಬಹುದು ಕಡಲು ?

ಯಾರಿಗೆ....ಯಾರಿಗೆ....

................

"ಡಿಯರ್ ಪ್ರಭಾವತಿ—

ನಿನ್ನ ಕೂಗು ಕೇಳಿಸಿತು. ನೆಲ ಕೊಡಲಾಗದ ಬಿಡುಗಡೆಯನ್ನು ನಿನಗೆ ನಾನು ಕೊಡಲು ಸಿದ್ಧವಾಗಿದ್ದೇನೆ. ಬಿಡುಗಡೆ ಬದುಕಿನಲ್ಲಿಲ್ಲ. ಬದುಕು ಬಂಧನ; ಸಾವೇ ಬಿಡುಗಡೆ. ನಿನಗೆ ಬಿಡುಗಡೆ ಬೇಕಾದರೆ ಬೇಗ ಬಾ—

ಬರುತ್ತೀಯ ಎಂದು ನಂಬಿರುವ—ನಿನ್ನ ವಿಶ್ವಾಸಿ, ಸಮುದ್ರ

................

ಕಡಲಲೆಗಳು ಟೈಪ್‌ರೈಟರಿನ 'ಕೀ' ಗಳಂತೆ ಎದ್ದು ಬಿದ್ದು, ಹಾರಿ ಬಂದು ತಡಿಯನ್ನು ಸೋಕಿ ತೆರಳುತ್ತಿವೆ-

ಕತ್ತಲು ತುಂಬಿದ ಕಡಲು ಕರೆಯುತ್ತಿದೆ, ಸುಯ್ಯುವ ಗಾಳಿಯ ದನಿಯಲ್ಲಿ.

"ಭೋಂ....ಭೋಂ"ಎಂದು ಹಾರನ್ನಿನ ಸದ್ದು ಮಾಡುತ್ತಾ ಹಾದು ಹೋಯಿತು ಕಾರು.

"ನೀವಿಬ್ಬರೂ ಜೀವಂತರಾಗಿ ನನ್ನ ಕಣ್ಣು ಮುಂದೆ ಇದೀರ. ಅಷ್ಟೇ ಸಾಕು ನನಗೆ."

ಗಾಳಿಯಾಳದಲ್ಲಿ ತೃಪ್ತಿಯನ್ನು ಸುಯ್ದು ಹೇಳಿತು ಲೀಲಾವತಿಯ ಧ್ವನಿ.

ಕತ್ತಲು ತುಂಬಿದ ಕಡಲು ಕರಿತೆರೆಗಳ ಕೈಯಾಡಿಸಿ 'ಬಾ....ಬಾ....' ಎಂದು ದಂಡೆಗೆ ಹೊಯ್ದು ಕರೆಯಿತು. ಕರೆಕರೆದು ಸಾಕಾಗಿ ಕಡಲುಕ್ಕಿ ಬಂದಂತೆ ತೋರಿತು, ತಾನೇ ಕರೆದೊಯ್ಯಲು. ಪ್ರಭಾವತಿಯ ಹೃದಯದಲ್ಲಿ ದಿಗಿಲು ತುಂಬಿತು.

ವಿದ್ಯುತ್ ರೈಲಿನ ಸಿಳ್ಳು ಕಠೋರವಾಗಿ ಚೀರಿ ಕತ್ತಲನ್ನು ಕತ್ತರಿಸಿತು.

ಥಿಗ್ಗನೆ ತಿರುಗಿ ನೋಡಿದಳು--ಕೆಂಪು....ಹಳದಿ....ಕಿತ್ತಲೆ-ನೀಲಿ-ಹಸುರು ಬಣ್ಣದ ನಿಯಾನ್ ಬೆಳಕು ಕತ್ತಲಲ್ಲಿ....

ಹತ್ತಾರು ಬಣ್ಣಗಳ ವಿದ್ಯುದ್ದೀಪ ಪ್ರಭೆಯನ್ನು ಮುಗಿಲಿಗೆ ಬೀರಿ,

ನೂರಾರು ಮನೆಗಳ ಕಿಟಕಿಯಲ್ಲಿ ಆಸೆಯ ಬೆಳಕಿನ ಕಣ್ಣು ತೆರೆದು ನೋಡುತ್ತಾ, ರೈಲು, ಕಾರು, ಬಸ್ಸು, ಓಡಾಡುವ ಜನಗಳ ಮಾತು, ಹೋಟೆಲಿನ ರೇಡಿಯೋ, ಬೇಲ್‌ಪುರಿಯ ಗಾಡಿಯವನ ಗಂಟೆಯ ಧ್ವನಿಯಲ್ಲಿ ಬೊಂಬಾಯಿ ಅವಳನ್ನು ಕರೆಯಿತು.

'ಕತ್ತಲಾಯಿತು ಬಾ ಪ್ರಭಾವತಿ. ಹೊತ್ತಾಯಿತು. ಲೀಲಾವತಿ, ಫ್ಲೋರಾ, ಶಾಲಿನಿ ಕಾಯುತ್ತಿದ್ದಾರೆ.'

ಕಿಟಕಿಯ ಕಣ್ಣುಗಳಲ್ಲಿ ಅರಳಿದ ಆಸೆಯ ಬೆಳಕು ಅವಳಿಗೆ ಕಣ್ಣು ಹೊಡೆದು ಹೇಳಿತು:

"ಬಾ, ಕಡಲಲ್ಲಿ ಕತ್ತಲಾಯಿತು."

ವಿದ್ಯುತ್ ರೈಲಿನ ಸಿಳ್ಳು ಕಠೋರವಾಗಿ ಚೀರಿ ಕೂಗಿತು–"ಹೊತ್ತಾಯಿತು ಬಾ."

ಮರಳಿನಿಂದ ಮೇಲೆದ್ದು, ಹ್ಯಾಂಡ್ ಬ್ಯಾಗನ್ನು ಹೆಗಲಿಗೆ ಹಾಕಿ, ಚಪ್ಪಲಿ ಧರಿಸಿ ಚರ್ಚ್‌ಗೇಟ್ ರೈಲ್ವೆ ನಿಲ್ದಾಣದ ಕಡೆ ಹೊರಟಳು ಪ್ರಭಾವತಿ.

ಅವಳ ಬೆನ್ನ ಹಿಂದೆ ಕತ್ತಲು ಕವಿದ ಕಡಲು, ಕಪ್ಪಾದ ತೆರೆಕೈಗಳಿಂದ ಚಪ್ಪಾಳೆ ತಟ್ಟಿ ಕರೆಯಿತು.

ಅವಳ ಕಣ್ಣೆದಿರು ಅತ್ತಿಂದಿತ್ತ ಇತ್ತಿಂದತ್ತ ಕಾರು ಮೋಟಾರುಗಳ ಲಾಳಿಗಳು ಕತ್ತಲು–ಬೆಳಕಿನ ಬಟ್ಟೆ ನೇಯುತ್ತಿದ್ದವು ಟಾರು ರಸ್ತೆಯಲ್ಲಿ.

ಅತ್ತ ಕಡೆ ತಿರುಗಿಯೂ ನೋಡದೆ ಮುಂದೆ ನಡೆದಳು ಪ್ರಭಾವತಿ.

ಅವಳ ಬಾಗಿದ ಬೆನ್ನಿನ ಮೇಲೆ ಜಗತ್ತಿನ ಭಾರ ಬಿದ್ದಂತಿತ್ತು.

ಹೊರಲಾರದ ಭಾರವನ್ನು ಹೊತ್ತು, ನಿಟ್ಟುಸಿರೆಳೆಯುತ್ತಾ, ಧೃಡವಾಗಿ ಹೆಜ್ಜೆ ಹಾಕಿದಳು—

ಕಡಿದುಕೊಳ್ಳಲಾಗದ ಜೀವನದ ಬಂಧನದತ್ತ.

"ಬಂಧನವಲ್ಲ, ಇದು ಬದುಕು" ಎಂದು ಸಿಳ್ಳು ಹಾಕಿ ಕರೆಯಿತು ವಿದ್ಯುತ್‌ರೈಲು.

ವೇಗವಾಗಿ ನಡೆದು ಜನಸಂದಣಿಯಲ್ಲಿ ನುಗ್ಗಿ ಮರೆಯಾದಳು ಪ್ರಭಾವತಿ.

---

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

| | | | | ಬೆಲೆ | | |
|---|---|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | .... | .... | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | .... | .... | ೨ | ೪ | ೦ |
| ೩. | ಜೀವನ – ಕಲೆ * | .... | .... | ೧ | ೦ | ೦ |
| ೪. | ಮುಗುಳುನಗೆ * | .... | .... | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | .... | .... | ೧ | ೪ | ೦ |
| ೬. | ಆಲದ ಹೂ | .... | .... | ೧ | ೧೨ | ೦ |
| ೭. | ಹುಡುಗಾಟ | .... | .... | ೧ | ೪ | ೦ |
| ೮. | ಶವದ ಮನೆ | .... | .... | ೧ | ೪ | ೦ |
| ೯. | ಎದಿರೇಟು | .... | .... | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) | .... | .... | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | .... | .... | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | .... | .... | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ | .... | .... | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | .... | .... | ೧ | ೮ | ೦ |
| ೧೫. | ಹಾಳು – ಮೂಳು | .... | .... | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ | .... | .... | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ | .... | .... | ೫ | ೧೨ | ೦ |
| ೧೮. | ಸಾವಿನೊಂದಿಗೆ ಸರಸ | .... | .... | ೧ | ೪ | ೦ |
| ೧೯. | ಅನುರಾಗ | .... | .... | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ (ದ್ವಿತೀಯ ಮುದ್ರಣ) | .... | .... | ೧ | ೮ | ೦ |
| ೨೧. | ಜೋಳದ ಬೆಳೆಯ ನಡುವೆ * | .... | .... | ೧ | ೪ | ೦ |
| ೨೨. | ಜರತಾರಿ ಜಗದ್ಗುರು (ದ್ವಿತೀಯ ಮುದ್ರಣ) | | .... | ೧ | ೮ | ೦ |
| ೨೩. | ಕಾನ್ವೆಂಟ್ ಗರ್ಲ್ (ದ್ವಿತೀಯ ಮುದ್ರಣ) | | .... | ೦ | ೧೨ | ೦ |
| ೨೪. | ಖಾನಾವಳಿಯ ನೀಲಾ (ದ್ವಿತೀಯ ಮುದ್ರಣ) | | .... | ೧ | ೦ | ೦ |
| ೨೫. | ರಂಗನಾಯಕಿ | .... | .... | ೨ | ೦ | ೦ |

* ಪ್ರತಿಗಳು ಮುಗಿದಿವೆ

# ಬಿಡುಗಡೆಯ ಬೇಡಿ

ಸ್ತ್ರೀ ಸ್ವಾತಂತ್ರ್ಯದ ಸಮಸ್ಯೆ ಈ ಕಾದಂಬರಿಯ ಕೇಂದ್ರವಸ್ತು.

'ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಕಟ್ಟಿ, ಕಾಪಾಡಿ, ಸಲಹಿ, ಬೆಳಸುವ ಭಾಗ್ಯ ದೊಡ್ಡದು. ಹೆಣ್ಣು ಎಂದರೆ ಮಗಳಲ್ಲ, ತಂಗಿಯಲ್ಲ, ಹೆಂಡತಿಯಲ್ಲ—ತಾಯಿ' ಎನ್ನುವ ಲೀಲಾವತಿ.

ವಿರೋಧಾಭಾಸಗಳ ಮೂರ್ತಿ - ಸರ್ವತಂತ್ರ ಸ್ವತಂತ್ರಳು ಫ್ಲೋರಾ. ಮದುವೆಯಾಗದಿದ್ದರೂ ಇದು ಆಕೆಗೆ ಕೊರತೆಯಲ್ಲ. ತನ್ನ ಕಾಮದಾಹವನ್ನು ತೀರಿಸಿಕೊಳ್ಳಲು ಗಂಡಸು ಹೆಂಗಸನ್ನು ವೇಶ್ಯೆಯಾಗಿ ಮಾಡಿರುವುದಕ್ಕೆ ಅವಳ ಉತ್ತರ- ತನಗೆ ಬೇಕಾದವನನ್ನು ಆರಿಸಿ, ತನ್ನ ದೇಹಕ್ಕೆ ತಣಿವು ಪಡೆದು, ಅವನ ಮುಖಕ್ಕೆ ಕಾಸೆಸೆಯುವುದು.

ಈ ಇಬ್ಬರು ವ್ಯಕ್ತಿಗಳ ಪ್ರಭಾವಗಳ ಸುಳಿಗೆ ಸಿಕ್ಕಿ ಪ್ರಭಾವತಿ 'ಗಂಡಿ'ನ ವಿರುದ್ಧ ದಂಗೆ ಎದ್ದ ಹೆಣ್ಣು. ಹೆಣ್ಣು ಅಬಲೆ, ಅವಳ ಬಗ್ಗೆ ಅನುಕಂಪ ಎಂದರೆ ಸಿಡಿದೇಳುತ್ತಾಳೆ.

ತಾನೊಲಿದು ಬಂದ ಗಂಡನಿಂ[illegible] ಪ್ರಭಾವತಿ ದೂರವಾಗಿ 'ಬಿಡುಗಡೆ' ಹೊಂದಿದರೂ 'ಬೇಡಿ' [illegible]ಪ್ಪುವುದಿಲ್ಲ.

ಶ್ರೀ ತ. ರಾ. ಸು ರವರ ಅತ್ಯಂತ ಜನಪ್ರಿಯ ಕೃತಿಗಳಲ್ಲಿ [illegible]ದಾದ ಈ ಕಾದಂಬರಿ 'ಅನರ[illegible] ಶೈಲಿಯಿಂದ ಆತುರದ [illegible]ಗೆ ಆಹ್ವಾನ ನೀಡುತ್ತದೆ.